

ನೆಮ್ಮದಿಯ ನಾಳೆ ನಮ್ಮದು

# ಹೊಸತು




ಮೇ ೨೦೦೨
ಬೆಲೆ : ರೂ. ೧೦

## ಕಾರ್ಮಿಕರ ದಿನಾಚರಣೆ - ಇತಿಹಾಸದ ಗುಂಗಿನಲ್ಲಿ



# ಸಾಮಾಜಿಕ ಕಳಕಳಿಯುಳ್ಳ ಯು. ಎಸ್. ವೆಂಕಟರಾಮನ್

ಯು. ಎಸ್. ವೆಂಕಟರಾಮನ್ ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿ. ಕಾರ್ಮಿಕ ರಂಗದ ಕಾರ್ಯಕರ್ತ, ಕಲಾವಿದ, ಲೇಖಕ. ಚಿತ್ರ ಕಲಾವಿದರಾಗಿ ನಲವತ್ತಕ್ಕೂ ಹೆಚ್ಚು ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಮಟ್ಟದ ಸಾಮೂಹಿಕ ಚಿತ್ರ ಪ್ರದರ್ಶನಗಳಲ್ಲಿ ತಮ್ಮ ಚಿತ್ರಗಳನ್ನು ಪ್ರದರ್ಶಿಸಿದ್ದಾರೆ. ಅಲ್ಲದೆ ಮೂರು ಏಕವ್ಯಕ್ತಿ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ.

ಖ್ಯಾತ ಚಿತ್ರಕಾರ ದಿ|| ಎಂ. ಟಿ. ವಿ. ಆಚಾರ್ಯರ ಮಾರ್ಗದರ್ಶನದಲ್ಲಿ ಕಲಾಭ್ಯಾಸವನ್ನು ಉನ್ನತಗೊಳಿಸಿಕೊಂಡಿರುವ ವೆಂಕಟರಾಮನ್ ಶಾಸ್ತ್ರೀಯ ಹಾಗೂ ಆಧುನಿಕ ಶೈಲಿಯ ವಾಸ್ತವಿಕ ಚಿತ್ರಗಳನ್ನು ರಚಿಸುತ್ತಾರೆ. ಸುಂದರವಾಗಿರುವ ಪ್ರಕೃತಿ ಚಿತ್ರಗಳು, ಅರ್ಥಗರ್ಭಿತ ಸಾಮಾಜಿಕ ಕಳಕಳಿಯುಳ್ಳ ಚಿತ್ರಗಳನ್ನು ರಚಿಸಿದ್ದಾರೆ. ಸಂಯೋಜನೆ, ವರ್ಣಶುದ್ಧತೆ, ರೇಖಾ ಶುದ್ಧತೆಗಳಿಗೆ ವೆಂಕಟರಾಮನ್ ಹೆಚ್ಚಿನ ಗಮನ ನೀಡುತ್ತಾರೆ. ತೈಲವರ್ಣ ಮತ್ತು ಮಿಶ್ರ ಮಾಧ್ಯಮಗಳನ್ನು ಬಳಸುತ್ತಾರೆ.

ವೆಂಕಟರಾಮನ್ ಮಾಸ್ಕೊ ಟ್ರೇಡ್ ಯೂನಿಯನ್ ಕಾಲೇಜ್, ಶ್ರೀ ಜಯಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಇನ್‌ಸ್ಟಿಟ್ಯೂಟ್‌ಗಳಲ್ಲಿ ವ್ಯಾಸಂಗ ಮಾಡಿದ್ದಾರಲ್ಲದೆ, ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ.

ಕಲೆ ಮತ್ತಿತರ ವಿಷಯಗಳ ಬಗ್ಗೆ ಇವರು ಬರೆದಿರುವ ಅನೇಕ ಲೇಖನಗಳು ಇಂಗ್ಲಿಷ್ ಮತ್ತು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಎಂ. ಎಸ್. ಚಂದ್ರಶೇಖರ್ ಮತ್ತು ಎಂ. ಎಚ್. ರಾಮುರವರನ್ನು ಕುರಿತು ಇವರು ಬರೆದಿರುವ ಸಂಕ್ಷಿಪ್ತ ಜೀವನ ಚರಿತ್ರೆಗಳನ್ನು ಕರ್ನಾಟಕ ಲಲಿತ ಕಲಾ ಅಕಾಡೆಮಿ ಪ್ರಕಟಿಸಿದೆ.

- ಮು. ಮಯೂರ

*೩೬೮, ೭ನೇ ಮುಖ್ಯ ರಸ್ತೆ, ಮಿಲ್ಕ್ ಕಾಲೋನಿ,*
*ಬೆಂಗಳೂರು-೫೬೦ ೦೫೫*



'ಕಾವೇರಿ ವಿವಾದ.' ಆಕ್ರಿಲಿಕ್ ಪ್ಯಾಸ್ಟಲ್



'ಹಂಪಿ.' ತೈಲವರ್ಣ ಪ್ರಕೃತಿ ಚಿತ್ರ



'ಶ್ರಮ ಜೀವಿ.' ತೈಲವರ್ಣ. ಚಾಕುವಿನಲ್ಲಿ ಬಣ್ಣ ಮೆತ್ತನೆ



'ಪರಿಸರ ಮಾಲಿನ್ಯ.' ಆಕ್ರಿಲಿಕ್

# ಹೊಸತು

## ಒಳಗೇನಿದೆ.....




ಚಿತ್ರಗಳು : ಪಿ. ಮಹಮ್ಮದ್, ಮೋನಪ್ಪ, ಬಿ. ವಿಲ್ಸನ್
ಜೆ. ಎಂ. ಬೊಮ್ನಳ್ಳಿ, ಉಮೇಶ್, ಶ್ರೀಹರಿ
ಮುಖಚಿತ್ರ : ಮೇ ದಿನಕ್ಕೆ ಸ್ವಾಗತ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

''**ಗೋ**ಧ್ರಾದಲ್ಲಿ ಮೊದಲು ಬೆಂಕಿ ಹಚ್ಚಿದ್ದು ಯಾರು? ಅವರು ಹಾಗೆ ಮಾಡಿರದಿದ್ದರೆ ಗುಜರಾತಿನಲ್ಲಿ ಬೆಂಕಿ ಬೀಳುತ್ತಿರಲಿಲ್ಲ''. - ಇದು ವಾಜಪೇಯಿ ತರ್ಕ. ಗೋವಾದ ತಂಗಾಳಿ ಅದನ್ನು ಹೇಳಿಸಿತೋ ಅಥವಾ ಅವರ ಪಕ್ಷದ ಕಾರ್ಯಕರ್ತರ ವಾಗ್ದಾಳಿ ಅವರನ್ನು ಹುರಿದುಂಬಿಸಿತೋ ಎಂಬ ಪ್ರಶ್ನೆ ಅಪ್ರಸ್ತುತ. ಏಕೆಂದರೆ, ಅವರ 'ಮಾನಸಿಕ ಸಮತೋಲನ' ಯಾವಾಗಲೂ ಅದರ ಕಡೆಗೇ ವಾಲಿರುವುದು. ಅಗತ್ಯ ಬಿದ್ದಾಗ ನಾಟಕೀಯವಾಗಿ ಭಾವುಕತೆ ಪ್ರದರ್ಶಿಸುವುದು ಅವರ ರಾಜಕೀಯ ಪ್ರತಿಭೆ, ಅಷ್ಟೆ. ಅಹಮ್ಮದಾಬಾದಿನಲ್ಲಿ ಮುಸಲ್ಮಾನ ನಿರಾಶ್ರಿತರ ಶಿಬಿರಗಳಲ್ಲಿ ನಡೆದಿದ್ದು ಇದೆ. ''ಅಯೋಧ್ಯೆಯಲ್ಲಿ ಮಸೀದಿ ಉರುಳಿಸದಿದ್ದರೆ ದಾವೂದ್ ಇಬ್ರಾಹಿಂ ಮುಂಬೈಗೆ ಬೆಂಕಿ ಇಡುತ್ತಿರಲಿಲ್ಲ; ಇಂದಿರಾ ಗಾಂಧಿ ಹತ್ಯೆ ಆಗದಿದ್ದರೆ ದೆಹಲಿಯಲ್ಲಿ ಸಿಕ್ಖರ ಹತ್ಯೆಗಳು ಜರುಗುತ್ತಿರಲಿಲ್ಲ.'' - ಹೀಗೆ ವಾದ ಹೂಡುವುದು ಪ್ರಧಾನಿಯ ಮಾತಿನ ಹೂರಣ. ಇದರಿಂದ ಯಾವ ಕುಕೃತ್ಯವನ್ನು ಬೇಕಾದರೂ ಸಮರ್ಥಿಸಿಕೊಳ್ಳಬಹುದು. ''ಅಯೋಧ್ಯೆಯಿಂದ ಹಿಂದಿರುಗುತ್ತಿದ್ದ ಕರಸೇವಕರು ದಾಂಧಲೆ ನಡೆಸದಿದ್ದರೆ ಗೋಧ್ರಾದಲ್ಲಿ ರೈಲಿಗೆ ಬೆಂಕಿ ಬೀಳುತ್ತಿರಲಿಲ್ಲ'' ಎಂದು ಯಾರಾದರೂ ಹೇಳಿದರೆ ಪ್ರಧಾನಿ ಅದನ್ನೂ ಒಪ್ಪಬೇಕಾದೀತು. ಇನ್ನೂ ಹಿಂದಕ್ಕೆ ಹೋಗಿ ಅದ್ವಾನಿಯ ಅಧ್ವಾನದ ರಥಯಾತ್ರೆ, ಇಟ್ಟಿಗೆಯಾತ್ರೆ, ಇತ್ಯಾದಿ ಇಲ್ಲದಿದ್ದರೆ ಅಯೋಧ್ಯೆಯಲ್ಲಿ ಮಸೀದಿ ಉರುಳುತ್ತಿರಲಿಲ್ಲ ಎಂದೂ ಹೇಳಬಹುದು. ಸ್ವಲ್ಪ ಖಾರವಾಗಿ ಹೇಳಬೇಕೆಂದರೆ, ದೆಹಲಿಯಲ್ಲಿ ವಿಪತ್ಕಾರಿ ವಾಜಪೇಯಿ ಸರ್ಕಾರ ಇಲ್ಲದಿದ್ದರೆ ಗುಜರಾತಿನಲ್ಲಿ ನರಮೇಧ ನಡೆಯುತ್ತಿರಲಿಲ್ಲ, ನರಮೇಧೇಂದ್ರ ಮೋದಿಯು ಮುದದಿಂದ ಶವಗಳ ಮೆರವಣಿಗೆ ಮಾಡಿಸಲಾಗುತ್ತಿರಲಿಲ್ಲ. ಇಷ್ಟು ಶವಗಳನ್ನು ಬೀಳಿಸಿದರೆ ಗುಜರಾತಿನ ಶಾಸನಸಭೆಯಲ್ಲಿ ಇಂತಿಷ್ಟು ಸ್ಥಾನಗಳು ಎಂಬ ನಿಯಮ ಈಗ ಮೋದಿ-ವಾಜಪೇಯಿಗಳಿಗೆ ಅಂಗೀಕಾರಾರ್ಹವಾಗಿದೆ. ಅದಕ್ಕೇ ಅವರು ಚುನಾವಣೆಯ ತರಾತುರಿಯಲ್ಲಿದ್ದಾರೆ. ಬೆಂಕಿ ಆರುವ ಮೊದಲೇ ಚುನಾವಣೆ ನಡೆಸಿದರೆ ಕತ್ತಿ-ತ್ರಿಶೂಲಗಳನ್ನು ಮತ್ತೆ ಅನಿರ್ಬಂಧಿತವಾಗಿ ಬಳಸಿ ಮತಕಟ್ಟೆಗೆ ಯಾರು ಹೋಗಕೂಡದೆಂಬುದನ್ನು ನಿರ್ಧರಿಸಬಹುದು ಮತ್ತು ತಡೆಯಬಹುದು. ಜನಾದೇಶ ಎಂಬುದನ್ನು ಪಡೆಯುವ ಹೊಸ ತಂತ್ರವನ್ನು ಮೋದಿ ರೂಪಿಸಿ ತನ್ನ ಪಕ್ಷದ ಹಿರಿಯರ ಮೆಚ್ಚುಗೆ ಮತ್ತು ಆಶೀರ್ವಾದ ಪಡೆದಿರುವುದು ಬರುವ ದಿನಗಳಲ್ಲಿ ಫ್ಯಾಸಿಸ್ಟ್ ಪೆಡಂಭೂತ ಹೇಗೆ ಬೆಳೆಯಬಹುದೆಂಬುದರ ಸೂಚನೆ. ಇದು ಮೋದಿ-ವಾಜಪೇಯಿ-ಅದ್ವಾನಿಯವರ ರಾಜಕೀಯ ಭಯೋತ್ಪಾದನೆ, ಸರ್ಕಾರಿ ಭಯೋತ್ಪಾದನೆ. ಮೋದಿಯಂತಹ ಮುತ್ಸದ್ದಿಯೊಬ್ಬನಿದ್ದರೆ ನಮ್ಮ ದೇಶವನ್ನು ವಿಚ್ಛಿದ್ರಗೊಳಿಸಲು ಮುಶಾರಫ್ ಅಥವಾ ಬುಶ್ ಬೇಕಾಗುವುದಿಲ್ಲ ಎಂಬ ಕಟು ಸತ್ಯ ಇಂದು ಮನನಯೋಗ್ಯವಾಗಿದೆ.

ಗೋಧ್ರಾದಲ್ಲಿ ಮೊದಲು ಬೆಂಕಿ ಇಟ್ಟವರನ್ನು ಕಾನೂನು ರೀತ್ಯಾ ಶಿಕ್ಷಿಸುವುದು ರಾಜಧರ್ಮವೋ ಅಥವಾ ಅದಕ್ಕೆ ಪ್ರತಿಯಾಗಿ ಗುಜರಾತಿನ ನೂರು ಕಡೆ ಬೆಂಕಿ ಇಕ್ಕಿಸುವುದು ರಾಜಧರ್ಮವೋ? ಪ್ರಭುತ್ವವು ತನ್ನ ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗ, ಮುಂತಾದುವನ್ನು ಉಪಯೋಗಿಸುವುದು ಏತಕ್ಕೆ ಮತ್ತು ಯಾವಾಗ? ಅಪರಾಧಿಯನ್ನು ಹಿಡಿದು ಶಿಕ್ಷಿಸುವುದು ಜನರ ಭಾವನೆಗಳ ಅಭಿವ್ಯಕ್ತಿಗೆ ಅಡ್ಡಿಯುಂಟುಮಾಡುತ್ತದೆಯೆಂಬ ನೂತನ ನ್ಯಾಯಾಡಳಿತ ಸೂತ್ರವನ್ನು ಪ್ರತಿಪಾದಿಸಿರುವ ವಾಜಪೇಯಿಯವರು ಜನರಿಗೆ ಸ್ವೇಚ್ಛೆಯ ಪ್ರತೀಕಾರ ಮಾರ್ಗವನ್ನು ಉಪದೇಶಿಸಿದ್ದಾರೆ. ನಾಳೆ ದಿನ ಮುಶಾರಫ್ - ಬುಶ್ ಹೇಳುತ್ತಾರೆ : ಕಾಶ್ಮೀರದಲ್ಲಿ ನೀವು ಪಟ್ಟು ಹಿಡಿಯದಿದ್ದರೆ ಉಗ್ರಗಾಮಿಗಳು ಇರುತ್ತಿರಲಿಲ್ಲ, ಎಂದು. ಗೋಧ್ರಾಕ್ಕೆ ಪ್ರತೀಕಾರ ಒಂದು ಸಾವಿರ ಮುಸಲ್ಮಾನರ ಕೊಲೆ ಎಂಬುದು ಸರಿಯಾದ ತರ್ಕವಾದರೆ ಕಾಶ್ಮೀರದಲ್ಲಿ ಉಗ್ರಗಾಮಿಗಳು ದುಷ್ಕೃತ್ಯವೆಸಗುತ್ತಿದ್ದಾರೆಂಬ ಮಾತಿಗೆ ಅರ್ಥವಿರುವುದಿಲ್ಲ, ಅವರಿಗೆ ನೆರೆರಾಷ್ಟ್ರವು ಬೆಂಬಲ ನೀಡುತ್ತಿದೆಯೆಂಬುದು ಗೌಣವಾಗುತ್ತದೆ, ಕಾಶ್ಮೀರಿ ಪಂಡಿತರನ್ನು ಕಾಶ್ಮೀರದಿಂದ ಹೊರದೂಡಿದ್ದು ಸಮರ್ಥನೀಯವಾಗುತ್ತದೆ. ಶಾಂತಿ, ಕಾನೂನು, ಭಂಗವಾದಾಗ ಮಧ್ಯಪ್ರವೇಶ ಮಾಡಲು ಪ್ರಭುತ್ವದ ಯಂತ್ರವಿದೆ. ಜನ ತಮಗಿಷ್ಟಬಂದಂತೆ ಪ್ರತೀಕಾರದಲ್ಲಿ ತೊಡಗಬಹುದೆಂಬ ವಾಜಪೇಯಿ ಸೂತ್ರವು ನೇರವಾಗಿ ಫ್ಯಾಸಿಸ್ಟ್ ಚಿಂತನ ಭಂಡಾರದಿಂದ ಬಂದದ್ದು. ಮೋದಿ ಕೆಳಗಿಳಿಯದಿದ್ದರೆ ಏನು ಮಾಡಬೇಕೆಂದು ಲೆಕ್ಕಾಚಾರ ಮಾಡುವ ಭಾರತೀಯ ಜನತಾ ಪಕ್ಷದ ಮಿತ್ರ ಪಕ್ಷಗಳು ತಿಳಿದುಕೊಳ್ಳಬೇಕಾದ್ದು ಈ ಸಂಗತಿಯನ್ನು. ತೇಪೆದಾರಿ ರಾಜಕೀಯ ಮಾಡಿಕೊಳ್ಳುತ್ತಾ ಜನವಿರೋಧಿ, ರಾಷ್ಟ್ರವಿರೋಧಿ ಕಾರ್ಯಕ್ರಮಗಳನ್ನು ಇವರೆಲ್ಲಾ ಇನ್ನೂ ಎಷ್ಟು ದಿನ ಬೆಂಬಲಿಸುತ್ತಾರೆ ? ಮಾಯಾವತಿ - ಜಯಲಲಿತಾ ಅಂಥವರಿಗೆ ಈ ಪ್ರಶ್ನೆ ಅಪಥ್ಯ; ಆದರೆ ಇತರರಿಗೆ ?




ಸಂಪುಟ-೩ ಸಂಚಿಕೆ - ೧೦ ಮೇ ೨೦೦೨

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**


# ಸಂಪಾದಕೀಯ

## ಮೇ ದಿನದ ಕರ್ತೃತ್ವಶಾಲಿ ಸಂದೇಶ

**ಮೇ** ಒಂದರಂದು ಇಡೀ ವಿಶ್ವದ ದುಡಿಯುವ ಜನ ತಮ್ಮ ವರ್ಗದ ಹೋರಾಟದ ಪರಂಪರೆಯನ್ನು ನೆನೆದು ಇಂದಿನ ಜವಾಬ್ದಾರಿಗಳನ್ನು ನಿರ್ವಹಿಸಲು ಮುಂದಿನ ದಾರಿ ಕಂಡುಕೊಳ್ಳುತ್ತಾರೆಂದು ನಿರೀಕ್ಷಿಸಲಾಗುತ್ತದೆ. ಎಂಟು ಗಂಟೆ ಕೆಲಸದ ನಿಗದಿಗಾಗಿ ಪ್ರಾರಂಭವಾದ ಹೋರಾಟ ಹಲವು ಮಜಲುಗಳನ್ನು ಕಂಡು ಸರ್ವಾಂಗೀಣವಾಗಿ ಬೆಳೆದುಬಂದಿದೆ. ೧೮೬೭ರಲ್ಲಿ ಕಾರ್ಲ್ ಮಾರ್ಕ್ಸ್ ಪ್ರಕಟಿಸಿದ *ಬಂಡವಾಳ* ಎಂಬ ಅವರ ಗ್ರಂಥದ ಮೊದಲ ಸಂಪುಟದಲ್ಲಿ *ದುಡಿಮೆಯ ದಿನ* ಎಂಬ ಒಂದು ಅಧ್ಯಾಯವಿದೆ. ಅದರಲ್ಲಿ ಎಂಟು ಗಂಟೆ ಅವಧಿಯ ಕೆಲಸದ ಒತ್ತಾಯಕ್ಕಾಗಿ ನಡೆದ ಹೋರಾಟವು ದುಡಿಯುವ ವರ್ಗದ ಐಕ್ಯತೆಗೆ ಸಾಧನವಾಗಿ ಹೇಗೆ ಪರಿಣಮಿಸಿತೆಂಬುದನ್ನು ಮಾರ್ಕ್ಸ್ ಚರ್ಚಿಸಿದ್ದಾರೆ. ಬಂಡವಳಿಗನಲ್ಲಿ ಹೆಚ್ಚಿನ ಸಂಪತ್ತು ಶೇಖರವಾಗಲು ದುಡಿಮೆಗಾರನ ಕೂಲಿ ತಗ್ಗಿಸುವುದು, ಇತರರ ಕಚ್ಚಾ ಸಾಮಗ್ರಿಗಳನ್ನು ದರೋಡೆ ಮಾಡುವುದು, ಖಾಸಗಿ ಅವ್ಯಹಾರಗಳಲ್ಲಿ ತೊಡಗಿ ಬ್ಯಾಂಕ್ ಮುಂತಾದ ಆರ್ಥಿಕ ಕೇಂದ್ರಗಳನ್ನು ದೋಚುವುದು, ಹೊಸ ತಂತ್ರಜ್ಞಾನದಿಂದ ಲಾಭದ ಪ್ರಮಾಣವನ್ನು ಹೆಚ್ಚಿಸಿಕೊಳ್ಳುವುದು, ಮುಂತಾದುವೆಲ್ಲಾ ದಾರಿ ಮಾಡಿಕೊಡುತ್ತವೆ. ಡೇವಿಡ್ ಬಾರ್ಕಿನ್ ಹೇಳುವಂತೆ ನ್ಯಾಯವಾದ ಸ್ವಂತದ ದುಡಿಮೆಯ ಮೂಲಕವೇ ಬಂಡವಳಿಗನು ವೃದ್ಧಿಹೊಂದುವುದು ಅಸಂಭವನೀಯ. ''ಅಷ್ಟೊಂದು ಜನ, ಅಷ್ಟು ಬೇಗನೆ, ನ್ಯಾಯವಾಗಿ ಬಂಡವಾಳಶಾಹಿ ಉದ್ಯಮಗಳ ಮೂಲಕ ಶ್ರೀಮಂತರಾಗುವುದು'' ಸಾಧ್ಯವಾಗದ ಮಾತೆಂದು ಆತ ವಿವರಿಸಿದ್ದಾನೆ. ಇದರ ಅರಿವು ದುಡಿಯುವ ಜನತೆಗೆ ಪೂರ್ಣ ಪ್ರಮಾಣದಲ್ಲಿ ಇನ್ನೂ ಆಗಬೇಕಾಗಿದೆ.

ಕಳೆದ ಒಂದು ದಶಕದಿಂದ ಜಾರಿಯಲ್ಲಿರುವ ಉದಾರವಾದಿ ಆರ್ಥಿಕ ನೀತಿಯು ನಮ್ಮ ದೇಶದ ಸಂಪತ್ತನ್ನು ಬೇರೆಯವರಿಗೆ ಔದಾರ್ಯದಿಂದ ಹಸ್ತಾಂತರಿಸುವ ಕೆಲಸವೊಂದನ್ನು ಬಿಟ್ಟು ಬೇರೇನನ್ನೂ ಮಾಡಿಲ್ಲ. ಹೊಸ ಆರ್ಥಿಕ ನೀತಿಯು ನಿಜಕ್ಕೂ ಅನೀತಿಯೇ ಸರಿ. ''ಇಡೀ ಸಮಾಜಕ್ಕೆ ಹೊಸ ನೀತಿಯ ಪ್ರಯೋಜನ ಇನ್ನೂ ದೊರೆತಿಲ್ಲ'' ಎಂದು ಸ್ವತಃ ಸರ್ಕಾರವೇ ಒಪ್ಪಿಕೊಂಡಿದೆ. ಬಡತನದ ರೇಖೆಯ ಕೆಳಗಿನವರ ಸಂಖ್ಯೆ ಹಿಂದಿಗಿಂತ ಈಗ ಕಡಿಮೆಯಾಗಿಲ್ಲ. ಕನಿಷ್ಠ ಕೂಲಿಯಲ್ಲಿ ಕಡಿತ ಉಂಟಾಗಿದೆ. ಕಾನೂನು ರೀತ್ಯಾ ಕನಿಷ್ಠ ಕೂಲಿ ಎಂಬುದು ಕಾಗದದಲ್ಲೇ ಉಳಿದಿದೆ. ನವ ಶ್ರೀಮಂತರ ಸಂಖ್ಯೆ ಸ್ವಲ್ಪ ಜಾಸ್ತಿಯಾಗಿದೆ ಮತ್ತು ರಾಷ್ಟ್ರದ ಸಂಪತ್ತಿನ ಬಹುಪಾಲು ಈ ಕೆಲವೇ ಶ್ರೀಮಂತರ ಪಾಲಾಗಿದೆ. ಉದ್ಯಮಗಳು ಮುಚ್ಚಿಹೋಗುತ್ತಿವೆ ಮತ್ತು ಅಲ್ಲಿ ದುಡಿಯುತ್ತಿದ್ದವರು ಇಂದು ನಿರುದ್ಯೋಗಿಗಳಾಗಿದ್ದಾರೆ. ಸ್ವಲ್ಪ ಕಟುವಾಗಿ ಹೇಳುವುದಾದರೆ, ಜನರನ್ನು ಕೊಲ್ಲುವ ಉದ್ಯಮವೊಂದನ್ನು ಬಿಟ್ಟು ಬೇರಾವುದೇ ಕ್ಷೇತ್ರದಲ್ಲಿ ಗಣನೀಯವಾದ ಮುನ್ನಡೆಯನ್ನು ನಾವು ಸಾಧಿಸಿಲ್ಲ. ಕೃಷಿಯಲ್ಲಿ ಈಚಿನ ನಮ್ಮ ಅಪಸಾಧನೆಯೆಂದರೆ ಹೆಚ್ಚಿನ ಸಂಖ್ಯೆಯಲ್ಲಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ! ತೊಂಭತ್ತರ ದಶಕದಲ್ಲಿ ಕೃಷಿ ಉತ್ಪಾದನೆ ಹೆಚ್ಚಿದ್ದು ಕೇವಲ ಶೇಕಡ ೨.೪ರ ಪ್ರಮಾಣದಲ್ಲಿ. ತಂತ್ರಜ್ಞಾನದಲ್ಲಿ ನಾವು ಮುಗಿಲು ಮುಟ್ಟಿದ್ದೇವೆಂದು ಘೋಷಿಸುವವರು ಇದರತ್ತ ಕಣ್ಣು ಹಾಯಿಸಬೇಕು. ''ಸ್ವದೇಶಿ'' ಕೂಗಿನ ವಿದೇಶಿ ಭಂಟರು ನಮ್ಮ ದೇಶದಲ್ಲಿ ಬಿತ್ತನೆ ಬೀಜಗಳ ವಹಿವಾಟನ್ನು ಸಹ ಬಹುರಾಷ್ಟ್ರೀಯ ಕಂಪೆನಿಗಳಿಗೆ ಬಿಟ್ಟುಕೊಟ್ಟಿದ್ದಾರೆ. ಕೃಷಿಯೋಗ್ಯ ಭೂಮಿಯನ್ನು ದೊಡ್ಡ ಉದ್ಯಮಪತಿಗಳಿಗೆ ಬಿಟ್ಟುಕೊಟ್ಟು ಆಹಾರದ ಉತ್ಪಾದನೆಯನ್ನು ಕಡಿಮೆ ಮಾಡಿಕೊಳ್ಳುತ್ತಿದ್ದೇವೆ. ನಮ್ಮ ಆಮದು-ರಫ್ತು ನೀತಿಯು ಕೃಷಿಗೆ ವಿಶಿಷ್ಟ ಬೆಂಬಲ ನೀಡುವಂಥದು ಎಂದು ಹೇಳುತ್ತಿರುವಾಗಲೇ ಕೃಷಿಕರು ಬೀದಿಪಾಲಾಗುತ್ತಿದ್ದಾರೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ನೂರಾರು ಉದ್ಯಮ ಘಟಕಗಳನ್ನು ಮುಚ್ಚಿದ್ದೇವೆ, ಹೇಳಿಕೊಳ್ಳಬಹುದಾದ ಒಂದೇ ಒಂದು ಹೊಸ ಬೃಹತ್ ಘಟಕವನ್ನು ಸ್ಥಾಪಿಸಿಲ್ಲ. ಲಾಭದಾಯಕ ಉದ್ಯಮಗಳನ್ನು ಕಡಲೆಪುರಿಯಂತೆ ಖಾಸಗಿಯವರಿಗೆ ಮಾರಲು ಒಬ್ಬ ಮಂತ್ರಿಯನ್ನು ನೇಮಿಸಿರುವ ಒಂದೇ ದೇಶ ಭಾರತ ಇರಬಹುದು ! ಬ್ಯಾಂಕುಗಳಲ್ಲಿ ಸಾರ್ವಜನಿಕರ ಹಣವನ್ನು ಸಾಲವಾಗಿ ಪಡೆದ ತಿಮಿಂಗಿಲಗಳು ಅದನ್ನು ನುಂಗಿ ಕೊಬ್ಬಿವೆ. ನಮ್ಮ ಅರ್ಥ ಮಂತ್ರಿಗೆ ಇದು ಅನರ್ಥವೆಂದು ತೋರುವುದಿಲ್ಲ.

ಈ ಹಿನ್ನೆಲೆಯಲ್ಲಿ, ಮೇ ದಿನವನ್ನಾಚರಿಸುವಾಗ ದುಡಿಯುವ ಜನತೆಯ ದೃಷ್ಟಿ ಯಾವುದಾಗಬೇಕು ? ಸ್ವಂತದ ಹಿತರಕ್ಷಣೆಗಾಗಿ ನಡೆಸಬೇಕಾದ ಹೋರಾಟದೊಂದಿಗೆ ತನ್ನ ವರ್ಗ ಮತ್ತು ರಾಷ್ಟ್ರದ ಭವಿಷ್ಯವನ್ನು ಸುಭದ್ರಗೊಳಿಸುವಂತಹ ಚಿಂತನೆ ಮತ್ತು ಕ್ರಿಯೆ ದುಡಿಯುವವನಿಗೆ ಇಂದು ಅತ್ಯಗತ್ಯವಾದ ಮೌಲ್ಯಗಳಾಗಿವೆ. ವರ್ಗಸ್ವರೂಪ ಮತ್ತು ವರ್ಗಹೋರಾಟಗಳ ಬಗೆಗಿನ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವ ಜವಾಬ್ದಾರಿ ಇಂದು ನಮ್ಮ ಮೇಲಿದೆ. ಒಂದು ಕಡೆ, ಸಂಘ ಪರಿವಾರವು ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ನಿರ್ದೇಶಿಸುವ ಹಂತಕ್ಕೆ ನಮ್ಮ ದೇಶದ ಅಧಃಪತನವಾಗಿದೆ; ಇನ್ನೊಂದು ಕಡೆ, ನಮ್ಮ ಆರ್ಥಿಕ ನೀತಿಗಳನ್ನು ವಿಶ್ವ ಬ್ಯಾಂಕಿನಂತಹ ಪಾತಕಿಗಳು ರೂಪಿಸುವಂತಹ ಅಧೋಗತಿಯನ್ನು ನಾವು ಮುಟ್ಟಿದ್ದೇವೆ. ನಮ್ಮ ದೇಶದ ಈಚಿನ ಕೆಲವು ಬೆಳವಣಿಗೆಗಳನ್ನು ದುಡಿಯುವ ಜನ ಎಚ್ಚರದಿಂದ ವಿಮರ್ಶಿಸಿಕೊಳ್ಳಬೇಕು. ಒಂದೆರಡು ಉದಾಹರಣೆಗಳನ್ನು ನೋಡಬಹುದು: ಅಮೆರಿಕಾದ ಕೇಂದ್ರ ಗೂಢಚಾರ ಸಂಸ್ಥೆಯು ಇಂದು ಭಾರತದಲ್ಲಿ ಬಹಿರಂಗವಾಗಿ ತನ್ನ ಚಟುವಟಿಕೆಗಳಲ್ಲಿ ತೊಡಗಿದೆ. ಅದರ ಉನ್ನತಮಟ್ಟದ ಕಾರ್ಯಕರ್ತರನೇಕರು ದಿನಬೆಳಗಾದರೆ ನಮ್ಮ ದೇಶದ ಕೇಂದ್ರ ಮಂತ್ರಿಗಳೊಡನೆ ಗುಪ್ತ ಮಾತುಕತೆ ನಡೆಸುತ್ತಾರೆ. ಅಮೆರಿಕಾದ ಎಲ್ಲ ಮಿಲಿಟರಿ ವಿಭಾಗಗಳೊಡನೆ ನಮ್ಮ ಸಹಯೋಗ ಅಪಾಯದ ಮಟ್ಟ ಮುಟ್ಟಿದೆ. ನಮ್ಮ ಬಂದರುಗಳಲ್ಲಿ ಅಮೆರಿಕೆಯ ನೌಕಾಸೈನ್ಯ ಬೀಡುಬಿಟ್ಟಿದೆ. ಇಷ್ಟು ಸಾಲದೆಂಬಂತೆ, ನೇಪಾಳದಲ್ಲಿ ಜನಸಮುದಾಯದ ಹೋರಾಟಗಳನ್ನು ಹತ್ತಿಕ್ಕಲು ಅಮೆರಿಕಾದೊಡನೆ ನಮ್ಮ ದೇಶವು ಕೈಜೋಡಿಸುವ ಕುತಂತ್ರವೊಂದು ದೆಹಲಿಯಲ್ಲಿ ರೂಪುಗೊಳ್ಳುತ್ತಿದೆ. ವಾಜಪೇಯಿ - ಜಸ್ವಂತ ಸಿಂಗ್ - ಅದ್ವಾನಿ ಬಣವು ನಮ್ಮ ದೇಶದ ಸೈನ್ಯವನ್ನು ನೆರೆರಾಷ್ಟ್ರವೊಂದರಲ್ಲಿ ರಕ್ತಪಾತ ನಡೆಸಲು ದೂಡುತ್ತಿರುವುದು ಅಕ್ಷಮ್ಯವಾದ ಅಪರಾಧ. ನೇಪಾಳದ ದುಡಿಯುವ ಜನರ ಹತ್ಯೆಯನ್ನು ಮಾಡಲು ನಮ್ಮ ದುಡಿಯುವ ಜನ ಪಾಲುದಾರರಾಗಬೇಕೆ? ನೇಪಾಳದ ರೈತಸಮುದಾಯವು ಜಮೀನ್ದಾರಿ ಮತ್ತು ರಾಜಶಾಹಿ ಪ್ರಭುತ್ವದ ವಿರುದ್ಧ ಬಂಡೆದ್ದರೆ ಅದನ್ನು ಭಯೋತ್ಪಾದಕತೆಯೆಂದು ಖಂಡಿಸುವ ಕ್ಷುದ್ರ ಅಮೆರಿಕಾದೊಡನೆ ನಮ್ಮ ದೇಶ ಶಾಮೀಲಾಗುವುದು ಎಂತಹ ಸಂಸ್ಕೃತಿ ಮತ್ತು ಯಾರ ಸಂಸ್ಕೃತಿ ? ಅಮೆರಿಕಾದ ಅಧ್ಯಕ್ಷನ ಪಾದಧೂಳಿಯನ್ನು ತಲೆಯ ಮೇಲೆ ಹಾಕಿಕೊಳ್ಳುವವರು ನಮ್ಮ ದೇಶದ ಆಡಳಿತ ಸೂತ್ರ ವಹಿಸಲು ಸರ್ವಥಾ ಅಯೋಗ್ಯರೆಂದು ನಮ್ಮ ದುಡಿಯುವ ಜನ ಗಟ್ಟಿಯಾಗಿ ಹೇಳಬೇಕಾಗಿದೆ.

ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಚಿಲಿಯ ಚುನಾಯಿತ ಅಧ್ಯಕ್ಷ ಅಲೆಂಡೆಯವರನ್ನು ಕೊಂದು ಪಿಶಾಚಿ ಪಿನೋಶೆಯನ್ನು ಅಧಿಕಾರಕ್ಕೆ ತಂದ ಅಮೆರಿಕಾ ಈಗ ವೆನಿಝೂಲಾದ ಅಧ್ಯಕ್ಷ ಹ್ಯೂಗೋ ಶವೆ ಅವರನ್ನು ಪದಚ್ಯುತಗೊಳಿಸಿ

ಅಲ್ಲಿಯ ಮಿಲಿಟರಿಗೆ ಅಧಿಕಾರ ತಂದುಕೊಡುವ ಯತ್ನ ಮಾಡಿತು. ಜನತೆ ಅದನ್ನು ವಿಫಲಗೊಳಿಸಿತು. ತನ್ನ ಕುಖ್ಯಾತ ಬೇಹುಗಾರ ಸಂಸ್ಥೆಯ ಮೂಲಕ ಅಮೆರಿಕಾದ ಅಧ್ಯಕ್ಷ ಎಷ್ಟೋ ಚುನಾಯಿತ ಸರ್ಕಾರಗಳನ್ನು ಉರುಳಿಸುವುದರಲ್ಲಿ ನೇರವಾಗಿ ಪಾಲ್ಗೊಳ್ಳುತ್ತಾನೆ. ೧೯೭೩ರಲ್ಲಿ ಚಿಲಿಯ ತಾಮ್ರದ ಲೂಟಿ ಕಾರಣವಾಗಿದ್ದರೆ ಈಗ ವೆನಿಝೂಲಾದಲ್ಲಿ ತೈಲದ ಲೂಟಿ ಕಾರಣವಾಗಿದೆ. ಒಂದು ಲಕ್ಷ ಜನರನ್ನು ಎತ್ತಿಕಟ್ಟಲು ಸಾಕಾಗುವಷ್ಟು ಹಣವನ್ನು ವೆನಿಝೂಲಾದಲ್ಲಿ ಹರಿಸಿ ಶವೆ ಅವರ ಜನಪರ ಕಾರ್ಯಗಳಿಗೆ ಭಂಗ ಉಂಟುಮಾಡಲು ಹವಣಿಸಿದ್ದ ಅಮೆರಿಕಾಕ್ಕೆ ಹಿಡಿಶಾಪ ಹಾಕುವ ಬದಲು ಭಾರತದ ಸರ್ಕಾರ ಆ ದೇಶದ ತೆಕ್ಕೆಗೆ ಸಿಲುಕಿಹಾಕಿಕೊಳ್ಳುತ್ತಿದೆ. ಫ್ಯಾಸಿಸ್ಟ್ ದುಷ್ಕರ್ಮಿಗಳ ಘೋರನೃತ್ಯವನ್ನು ಗುಜರಾತಿನಲ್ಲಿ ನೋಡಿರುವ ದುಡಿಯುವ ಜನ ಅಮೆರಿಕಾದ ಬಂಧನಕ್ಕೆ ನಮ್ಮ ದೇಶವನ್ನು ಬಿಟ್ಟುಕೊಟ್ಟರೆ ಎರಡು ಕರಾಳ ಶಕ್ತಿಗಳ ನಡುವೆ ಇಕ್ಕಳದಲ್ಲಿ ಸಿಕ್ಕಿಕೊಂಡು ತಾನು ದಾಸ್ಯಕ್ಕೊಳಗಾಗಬೇಕಾಗುತ್ತದೆ. ಇದನ್ನು ಹಿಮ್ಮೆಟ್ಟಿಸುವ ಸಾಮರ್ಥ್ಯ ದುಡಿಯುವ ಜನಕ್ಕಲ್ಲದೆ ಬೇರಾರಿಗೂ ಇಲ್ಲ. ಆದ್ದರಿಂದಲೇ ದಿನನಿತ್ಯದ ಜಂಜಾಟ ಮತ್ತು ಹೋರಾಟಗಳ ನಡುವೆ ನಮ್ಮ ದೇಶದ ದುಡಿಯುವ ಜನ ಐಕ್ಯತೆಯಿಂದ ನಮ್ಮ ಭವಿಷ್ಯವನ್ನು ರೂಪಿಸಬೇಕಾಗಿದೆ, ನಮ್ಮ ಸಾರ್ವಭೌಮತ್ವವನ್ನು ಉಳಿಸಿ ವಿಸ್ತರಿಸಬೇಕಾಗಿದೆ, ನಮ್ಮ ಆರ್ಥಿಕ ನೀತಿಗಳ ವಿರೂಪವನ್ನು ತೊಡೆದುಹಾಕಿ ಅದನ್ನು ಜನಪರವಾಗಿಸಬೇಕಾಗಿದೆ, ಜನಸಂಸ್ಕೃತಿಯನ್ನು ಆಳವಡಿಸಿಕೊಳ್ಳಬೇಕಾಗಿದೆ, ಮತ್ತು ಸ್ವತಃ ದುಡಿಯುವ ಜನರ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಬೇಕಾಗಿದೆ. ೨೦೦೨ನೇ ವರ್ಷದ ಮೇ ದಿನದಂದು ಇದನ್ನೆಲ್ಲಾ ಸಾಧಿಸಲು ದುಡಿಯುವ ಜನ ಒಮ್ಮನಸ್ಸು ಮಾಡಲಿ, ಅವರ ಸಂಕಲ್ಪ ಈಡೇರಲಿ ಎಂದು 'ಹೊಸತು' ಆಶಿಸುತ್ತದೆ.

## ಸಂವಿಧಾನ ಪರಾಮರ್ಶೆ ಆಯೋಗದ ವರದಿ

ಉತ್ತರ ಪ್ರದೇಶ, ಪಂಜಾಬ್, ಉತ್ತರಾಂಚಲ, ಮಣಿಪುರ ವಿಧಾನಸಭೆಗಳಿಗೆ ನಡೆದ ಚುನಾವಣೆಗಳ ಹಾಗೂ ಇತ್ತೀಚೆಗೆ ದೆಹಲಿ ಮಹಾನಗರ ಪಾಲಿಕೆಗೆ ನಡೆದ ಚುನಾವಣಾ ಫಲಿತಾಂಶದಿಂದ ದಿಕ್ಕೆಟ್ಟು ಕಂಗಾಲಾಗಿರುವ ಸಂಘ ಪರಿವಾರಕ್ಕೆ ಒದಗಿದ ಇನ್ನೊಂದು ಆಘಾತವೆಂದರೆ, ಸರ್ವೋಚ್ಚ ನ್ಯಾಯಾಲಯದ ಮಾಜಿ ಮುಖ್ಯ ನ್ಯಾಯಮೂರ್ತಿ ಶ್ರೀ ಎಂ. ಎನ್. ವೆಂಕಟಾಚಲಯ್ಯ ಅವರು ಸಂವಿಧಾನ ಪರಾಮರ್ಶೆಯ ಆಯೋಗದ ವರದಿಯನ್ನು ಸರಕಾರಕ್ಕೆ ಸಲ್ಲಿಸಿದ್ದು ಇವರ ಎಣಿಕೆಗಳು ತಲೆಕೆಳಕಾಗಿ, ತಲೆನೋವಾಗಿ ಪರಿಣಮಿಸಿರುವುದು.

ಭಾರತೀಯ ಜನತಾ ಪಕ್ಷ ಕೇಂದ್ರದಲ್ಲಿ ಅಧಿಕಾರದ ಗದ್ದುಗೆಯೇರಿದ ಕೆಲವು ದಿನಗಳಲ್ಲೇ ಸಂಘ ಪರಿವಾರದ ಪ್ರಮುಖ ಬೇಡಿಕೆಗಳಲ್ಲೊಂದಾದ ಸಂವಿಧಾನ ಬದಲಾವಣೆಗೆ ಪೂರಕವಾಗಿ ಒಂದು ರಾಷ್ಟ್ರೀಯ ಆಯೋಗವನ್ನು ಸಂವಿಧಾನ ಪರಾಮರ್ಶೆಗಾಗಿ ರಚಿಸಲು ತೀರ್ಮಾನಿಸಿದ ಹಿನ್ನೆಲೆಯಲ್ಲಿ ರಾಷ್ಟ್ರಾದ್ಯಂತ ಪ್ರತಿಭಟನೆ-ವಿರೋಧ ಬೃಹತ್ ಪ್ರಮಾಣದಲ್ಲಾಗದಿದ್ದರೂ, ವ್ಯಾಪಕವಾಗಿ ಪ್ರಕಟಗೊಂಡಿದ್ದಿತು. ಸರ್ವಾಧಿಕಾರಿ ವ್ಯವಸ್ಥೆಯ ಸೃಷ್ಟಿಗಾಗಿ ಸಂವಿಧಾನವನ್ನು ತಿರುಚುವ ಸಂಘ ಪರಿವಾರದ ಆಕಾಂಕ್ಷೆಯ ಸಾಕಾರಕ್ಕೆ ಈ ಪರಾಮರ್ಶೆಯ ಕಸರತ್ತು ಕೇವಲ ಒಂದು ತೋರಿಕೆಯೆಂಬ ಗುಮಾನಿಗೆ ಸಾಕಷ್ಟು ಆಧಾರವಿತ್ತು.

ಸಂವಿಧಾನ ಪರಾಮರ್ಶೆಯ ಬಗ್ಗೆ ರಾಷ್ಟ್ರಪತಿ ಶ್ರೀ ಕೆ. ಆರ್. ನಾರಾಯಣನ್ ಮಾಡಿದ ಟೀಕೆ ಹಾಗೂ ಆಯೋಗದ ರಚನೆಗೆ ಪೂರ್ವಭಾವಿಯಾಗಿ ಬಂದಂತಹ ವಿಮರ್ಶೆ ವಿರೋಧಗಳು ಕೇಂದ್ರ ಸರ್ಕಾರವನ್ನು ಮತ್ತು ಆಯೋಗದ ಸದಸ್ಯರುಗಳನ್ನು ಸಾಕಷ್ಟು ರಕ್ಷಣಾತ್ಮಕವನ್ನಾಗಿಸಿದ್ದು ಈ ಪ್ರತಿಭಟನೆಗಳ ಪ್ರತಿಫಲ. ಸಂವಿಧಾನದ ಮೂಲ ಲಕ್ಷಣಗಳನ್ನು ಬದಲಾಯಿಸಲು ಸಾಧ್ಯವಿಲ್ಲ ಎಂಬುದನ್ನು ಸರ್ಕಾರ ಒಪ್ಪಿಕೊಳ್ಳಬೇಕಾಯಿತು. ಭಾರತ ಸಂವಿಧಾನ ಅನೇಕ ತಿದ್ದುಪಡಿಗಳನ್ನು ಕಂಡಿದೆ. ಆಡಳಿತವರ್ಗದ ನಿರಾತಂಕ ಆಳ್ವಿಕೆಯ ಅನುಕೂಲಕ್ಕಾಗಿಯೇ ಸಂವಿಧಾನಕ್ಕೆ ಅನೇಕ ತಿದ್ದುಪಡಿಗಳನ್ನು ಆಗಾಗ್ಗೆ ಮಾಡಲಾಗಿದೆ ಎಂಬುದಕ್ಕೆ ೧೯೭೬ರಲ್ಲಿ ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ತಂದ ೪೨ನೇ ತಿದ್ದುಪಡಿಯೇ ಸಾಕ್ಷಿ. ಈ ಕಾರಣದಿಂದಾಗಿಯೇ ಬಿ.ಜೆ.ಪಿ. ಸರ್ಕಾರದ ಸಂವಿಧಾನ-ಪರಾಮರ್ಶೆಯ ಪ್ರಯತ್ನ ಅತ್ಯಂತ ಹೆಚ್ಚಿನ ಅನುಮಾನ, ಆತಂಕವನ್ನು ಜನತೆಯಲ್ಲಿ ಹುಟ್ಟಿಸಿದ್ದು ಸ್ವಾಭಾವಿಕ. ಗುಜರಾತಿನ ದುರ್ಘಟನೆಗಳ ನಂತರ ಆ ಆತಂಕವು ಇನ್ನೂ ಹೆಚ್ಚು ಅರ್ಥವತ್ತಾಗಿ ಪರಿಣಮಿಸಿದೆ.

ಸಂವಿಧಾನದ ಮುನ್ನುಡಿಯಲ್ಲಿರುವ ಸಮಾಜವಾದದ ಬಯಕೆ ಹೊಸ ಬಂಡವಾಳಶಾಹಿ ಆರ್ಥಿಕ ನೀತಿ – ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣ – ಜಾರಿಗೆ ಬಂದನಂತರ ಅಪ್ರಸ್ತುತವಾಗಿದೆ ಎಂದು ಅಡ್ವಾನಿ ಒಂದು ಹೇಳಿಕೆ ನೀಡಿ, ಸಂವಿಧಾನ ಪರಾಮರ್ಶೆ ಆಯೋಗ ಈ ವಿಚಾರವನ್ನು ಗಮನಿಸಬೇಕೆಂದು ಒತ್ತಾಯಿಸಿದ್ದು ಸಂಘ ಪರಿವಾರದ ಬಯಕೆಗೆ ಹಿಡಿದ ಕನ್ನಡಿಯಾಗಿತ್ತು. ಅದೇ ರೀತಿ ಶ್ರೀಮತಿ ಸೋನಿಯಾ ಗಾಂಧಿಯವರನ್ನು ದೃಷ್ಟಿಯಲ್ಲಿಟ್ಟುಕೊಂಡು ವಿದೇಶಿ ಮೂಲದ ವ್ಯಕ್ತಿಗಳು ಭಾರತದ ಪ್ರಜೆಗಳೆನಿಸಿಕೊಂಡಿದ್ದರೂ, ರಾಷ್ಟ್ರಪತಿ, ಪ್ರಧಾನ ಮಂತ್ರಿ, ಇತ್ಯಾದಿ ಅತ್ಯುನ್ನತ ಹುದ್ದೆಗಳಿಗೆ ನೇಮಕಗೊಳ್ಳಲು ಅನರ್ಹರು ಎಂಬಂತೆ ಸಂವಿಧಾನಕ್ಕೆ ತಿದ್ದುಪಡಿಯಾಗಬೇಕು ಎಂಬುದು ಪ್ರಮುಖ ಬೇಡಿಕೆಯಾಗಿತ್ತು. ಈ ಬಗ್ಗೆ ಶ್ರೀಮತಿ ಸೋನಿಯಾ ಗಾಂಧಿಯವರ ವಿರುದ್ಧ ಧ್ವನಿ ಎತ್ತಿ ಕಾಂಗ್ರೆಸ್ ಪಕ್ಷವನ್ನು ತೊರೆದ ಶ್ರೀ ಪಿ. ಎ. ಸಂಗ್ಮಾ ಅವರನ್ನು ಆಯೋಗದ ಓರ್ವ ಸದಸ್ಯನನ್ನಾಗಿ ನೇಮಿಸಿದ್ದು ಹೆಚ್ಚಿನ ವಿವಾದಕ್ಕೆ ಎಡೆಮಾಡಿತು. ಈ ವಿವಾದಗ್ರಸ್ತ ವಿಷಯವನ್ನು ಆಯೋಗಕ್ಕೆ ಒಪ್ಪಿಸಿದ್ದು ಆಯೋಗದ ಶಿಫಾರಸ್ಸು ಏನಾಗಬಹುದು ಎಂಬುದು ದೇಶದ ಕುತೂಹಲವನ್ನು ಕೆರಳಿಸಿತ್ತು. ಅಧ್ಯಕ್ಷೀಯ ಮಾದರಿ ಸರಕಾರ, ಸಮಾನ ನಾಗರಿಕ ಸಂಹಿತೆ, ಅಲ್ಪಸಂಖ್ಯಾತರಿಗೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡದ ಜನರಿಗೆ ಸಂವಿಧಾನದಲ್ಲಿರುವ ಹಕ್ಕುಗಳ ಬಗ್ಗೆ ಪುನರಾಲೋಚನೆ ಇತ್ಯಾದಿ ವಿಷಯಗಳ ಬಗ್ಗೆ ಸಂಘ ಪರಿವಾರದ ಒಲವು ನಿಲುವುಗಳು ಸ್ಪಷ್ಟವಾಗಿ ವ್ಯಕ್ತವಾಗಿತ್ತು. ಈ ಎಲ್ಲಾ ವಿಷಯಗಳ ಪರಾಮರ್ಶೆಯಾಗಬೇಕೆಂಬ ಆಕಾಂಕ್ಷೆ ಅವರದಾಗಿತ್ತು; ಅಂದರೆ, ಅವರು ಬಯಸಿದ ರೀತಿಯಲ್ಲಿ ಬದಲಾಗಬೇಕು ಎಂಬರ್ಥವಾಗಿತ್ತು.

ಈ ಹಿನ್ನೆಲೆಯಲ್ಲಿ ನೋಡಿದಾಗ ಆಯೋಗವು ಅತ್ಯಂತ ಒತ್ತಡದ ಪರಿಸ್ಥಿತಿಯಲ್ಲಿ ಕೆಲಸವನ್ನು ನಿರ್ವಹಿಸಬೇಕಾಗಿ ಬಂದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಸುಮಾರು ೧೭೦೦ ಪುಟಗಳ ವರದಿಯನ್ನು ಅಧ್ಯಕ್ಷರು ೩೧.೦೩.೨೦೦೨ರಂದು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ವಿವಿಧ ವಿಷಯಗಳನ್ನು ಕುರಿತು ಸುಮಾರು ೨೫೦ ಶಿಫಾರಸ್ಸುಗಳನ್ನು ಮಾಡಿದ್ದಾರೆ.

ಸಂವಿಧಾನ ಪರಾಮರ್ಶೆ ಆಯೋಗವು ಹಲವಾರು ಗಣನೀಯ ಶಿಫಾರಸ್ಸುಗಳನ್ನು ಮಾಡಿದೆ ಎಂದು ವರದಿಯಾಗಿದೆ. ಮಾನವ ಹಕ್ಕು, ಶೈಕ್ಷಣಿಕ ಹಕ್ಕು ಮತ್ತು ಪತ್ರಿಕಾ ಸ್ವಾತಂತ್ರ್ಯದ ಹಕ್ಕನ್ನು ಮೂಲಭೂತ ಹಕ್ಕುಗಳೆಂದು ಪರಿಗಣಿಸಬೇಕೆಂಬ ಶಿಫಾರಸ್ಸುಗಳು ಅತ್ಯಂತ ಗಮನಾರ್ಹ ಹಾಗೂ ಸ್ವಾಗತಾರ್ಹವಾದಂಥವು. ವಿಚಾರಣೆಯಿಲ್ಲದೆ ಯಾರನ್ನೂ ಆರು ತಿಂಗಳಿಗಿಂತ ಹೆಚ್ಚಿಗೆ ಜೈಲಿನಲ್ಲಿರಿಸ ಕೂಡದೆಂಬ ಆಯೋಗದ ಶಿಫಾರಸ್ಸು, ಪೋಟಾ ಎಂಬ ಹೊಸ ಶಾಸನವು ಮಾನವ ಹಕ್ಕುಗಳ ದಮನಕಾರೀ ಕಾನೂನು ಎಂಬುದನ್ನು

(ಮುಂದಿನ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೫೩೦೨

## ಪತ್ರಗಳು

ಏಪ್ರಿಲ್ ೨೦೦೨ರ ಸಂಪಾದಕೀಯ ಓದಿದೆ. ಸಂಪಾದಕರು ಸಮಗ್ರ ಭಾರತದ ಇಂದಿನ ಚಿತ್ರ ನಮ್ಮ ಕಣ್ಮುಂದೆ ಇರಿಸಿದ್ದಾರೆ. ಗುಜರಾತದಲ್ಲಿಯ ಗೋಧ್ರ ನರಹತ್ಯೆ ನಂತರದ ಬೆಳವಣಿಗೆಗಳನ್ನು, ಮುಖ್ಯಮಂತ್ರಿ ಶ್ರೀ ನರೇಂದ್ರ ಮೋದಿಯವರ ನಿಷ್ಕ್ರಿಯತೆಯನ್ನು ಎಳೆಎಳೆಯಾಗಿ ವಿವರಿಸಿದ್ದಾರೆ.

'ಹೊಸತು' ಪತ್ರಿಕೆ ಕನ್ನಡ ನಾಡಿನಲ್ಲಿ ಜಾಗೃತಿ ಮೂಡಿಸುವಲ್ಲಿ ಮುಂಚೂಣಿಯಲ್ಲಿದೆ. ಜಿ. ರಾಮಕೃಷ್ಣ ಅವರಿಗೆ ಧನ್ಯವಾದಗಳು.

*ಮುಧೋಳ* — ***ಎಂ. ಎಚ್. ಕೆಸರಟ್ಟಿ***

ಮಾರ್ಚ್ ತಿಂಗಳಲ್ಲಿ ಪ್ರಕಟವಾದ ನನ್ನ ನಾಟಕದ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತ ಶ್ರೀ ಬ. ನಾ. ರಘುರಾಮ ಅವರು ಯಾವುದೇ ಮತವನ್ನು ಲೇವಡಿ ಮಾಡಬಾರದಾಗಿ ಹೇಳಿದ್ದಾರೆ. ಈ ಅಭಿಪ್ರಾಯದೊಡನೆ ನನ್ನ ಸಹಮತವಿದೆ. ಯಾಕೆಂದರೆ ಯಾವುದೇ ಮತವನ್ನು ವಿಡಂಬಿಸುವುದರ (ವೈಚಾರಿಕತೆಗೆ ಒಳಪಡಿಸುವುದು ಬೇರೆ) ವಿರುದ್ಧವೇ ನನ್ನ ನಿಲುವಿದೆ. ಆದರೆ 'ವೈಷ್ಣವ ಗರ್ವಭಂಗ'ದಲ್ಲಿ ಕೇಡಿ ಕೆಲಸ ಮಾಡುವ ರಾಜಕಾರಣ ವಿಡಂಬನೆಗೆ ಒಳಗಾಗಿದೆ ಎಂದೇ ನನ್ನ ಗ್ರಹಿಕೆಯಾಗಿದೆ. ಅಲ್ಲಿ ವಿಷ್ಣು, ನಾರದ ಮತ್ತು ವಿಶ್ವಾಮಿತ್ರ ತಾಂತ್ರಿಕ ಅವಶ್ಯಕತೆಯಾಗಿ ಬಂದಿದ್ದಾರೆಯೇ ಹೊರತು ಎಲ್ಲಿಯೂ ವೈಷ್ಣವ ಮತದ ಟೀಕೆ ಇಲ್ಲ. ಇದು ಅಗ್ಗದ ಹಾಸ್ಯವನ್ನು ಖಂಡಿತವಾಗಿ ಉದ್ದೇಶಿಸಿಲ್ಲ. ಹಾಗೆ ಅದು ಮತ ಖಂಡನೆ ಎಂಬ ಭಾವನೆ ಉಂಟುಮಾಡಿದರೆ ಅದು ನನ್ನ ಬರವಣಿಗೆಯ ಸೋಲು ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಪ್ರೊ॥ ಶಿವರಾಮಯ್ಯನವರ ಬರಹದಲ್ಲಿ ಅಗ್ಗದ ಹಾಸ್ಯ ಯಾವುದು?

*ಆರೆ ಅಂಗಡಿ* — ***ಆರ್. ವಿ. ಭಂಡಾರಿ***

### 'ನೆನಪು'

ಕನ್ನಡದ 'ಚೋಮನ ದುಡಿ' ಚಲನಚಿತ್ರದ ನಟ ವಾಸುದೇವ ರಾವ್ ನಿಧನದ ಸುದ್ದಿ ಕೇಳಿ ಒಂದೆರಡು ವಾಕ್ಯ ಬರೆಯಬೇಕೆನಿಸಿತು.

ಕನ್ನಡದ ಹೆಸರಾಂತ ಹಿರಿಯ ಸಾಹಿತಿ ದಿ॥ ಶಿವರಾಮ ಕಾರಂತರ ಪ್ರಖ್ಯಾತ ಕೃತಿ ಚೋಮನ ದುಡಿ ಪುಸ್ತಕ ಪ್ರಪಂಚದಿಂದ ಸಿನಿಮಾ ಪ್ರಪಂಚಕ್ಕೆ ಕಾಲಿಟ್ಟಿದ್ದು ಕನ್ನಡಿಗರೆಲ್ಲರೂ ಹೆಮ್ಮೆ ಪಡುವಂಥದ್ದು.

ಸ್ವರಾಜ್ಯಕ್ಕೆ ಪೂರ್ವದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ರಿಟಿಷ್ ಆಳರಸರ ಹಾಗೂ ಅವರ ಕೃಪಾಛತ್ರದಡಿಯಲ್ಲಿ ಪೋಷಿಸಲ್ಪಡುತ್ತಿದ್ದ ಪಾಳೆಯಗಾರೀ ಭೂ ಮಾಲೀಕ ಪದ್ಧತಿ ಅಡಿಯಲ್ಲಿ ಬಡಜನತೆಯ ಜೀವನವು ಅದರಲ್ಲೂ ಹಿಂದುಳಿದ ಸಮಾಜದ, ಬಡ ಕೃಷಿ ಕೂಲಿಗಾರ ರೈತರಲ್ಲಿ ಅಧಿಕ ಸಂಖ್ಯೆಯಲ್ಲಿ ಶೋಷಣೆಗೆ ಒಳಗಾಗಿದ್ದ ಹರಿಜನ ಗಿರಿಜನರ ಜೀವನವು ಎಂತಹ ಕಠೋರ ಜೀವನವಾಗಿತ್ತೆಂಬುದನ್ನು ಮನಕರಗುವಂತೆ ಚಿತ್ರಿಸಿ ಸಮಸ್ತ ಸಮಾಜವನ್ನು ಎಚ್ಚರಿಸಿದ ಕೃತಿ ಡಾ॥ ಕಾರಂತರ ಚೋಮನ ದುಡಿ. ಈ ಚಿತ್ರದಲ್ಲಿ ನಟಿಸಿದ ವಾಸುದೇವ ರಾವ್ ಪಾತ್ರ ಹಿರಿಯದಾದದ್ದು.

ಸ್ವರಾಜ್ಯ ಬಂದು ೫೫ ವರ್ಷಗಳಾದರೂ ಸಹ ದಲಿತ ಜನತೆಯ ಜೀವನದಲ್ಲಿ ಮೂಲಭೂತ ಬದಲಾವಣೆಗಳೇನೂ ಆಗಿಲ್ಲ. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಶೋಷಣೆಗಳು ಹಿಂದಿನಂತೆಯೇ ನಡೆಯುತ್ತಿರುವುದು ದುರದೃಷ್ಟಕರ. ಇಂತಹ ಪರಿಸ್ಥಿತಿಯಲ್ಲಿ ದಲಿತರ ಸಾಮಾಜಿಕ ಬವಣೆಯ ಬಗ್ಗೆ ಜನತೆಯನ್ನು ಜಾಗೃತಗೊಳಿಸುವಂತಹ ಮಹತ್ವದ ಪಾತ್ರಧಾರಿ ವಾಸುದೇವ ರಾವ್‌ರನ್ನು ಸ್ಮರಿಸಬೇಕು.

*ತುಮಕೂರು* — ***ಆರ್. ರವೀಂದ್ರ ನಾಯಕ್***

ಈ ಸಲದ ಮುಖಪುಟ ಚಿತ್ತಾಕರ್ಷಕವಾಗಿದೆ. ಅದರ ವಿಸ್ತಾರ, ಆಳ, ವರ್ಣವೈಭವದ ದೃಶ್ಯಾನುಭವ ಮಾತಿಗೆ ಮೀರಿದ್ದು. ಅಭಿನಂದನೆಗಳು.

*ಚಿಗಟೇರಿ* — ***ಮುದೇನೂರ ಸಂಗಣ್ಣ***




ಏಪ್ರಿಲ್ ೨೦೦೨ರ 'ಹೊಸತು'ವಿನಲ್ಲಿ ಪ್ರಕಟವಾದ ಅಡ್ಡೂರು ಕೃಷ್ಣರಾವ್ ಅವರ ಲೇಖನ ''ಮಕ್ಕಳನ್ನು ರೂಪಿಸಲು ಹೆತ್ತವರು ಕಲಿಯೋಣ'' ರಜಾವಧಿಯಲ್ಲಿ ಮಕ್ಕಳ ಕುರಿತು ತಂದೆ-ತಾಯಿಗಳನ್ನು ಚಿಂತನೆಗೆ ಹಚ್ಚುವುದು.

ದೇಶದ ಮಕ್ಕಳನ್ನು ಮನೆಯಲ್ಲಿಯೂ ಸರಿಯಾಗಿ ಅರ್ಥಮಾಡಿಕೊಳ್ಳುವುದಿಲ್ಲ ಮತ್ತು ಶಾಲೆಯಲ್ಲಿಯಂತೂ ಗಿಳಿಪಾಠ ಒಪ್ಪಿಸುವವರಂತೆ ತಯಾರಾಗಿರುತ್ತಾರೆ. ಭಾರತೀಯ ಮಕ್ಕಳು ಕನಿಷ್ಠ ಪ್ರಶ್ನಿಸುವ ಹಕ್ಕನ್ನು ಪೋಷಕರಿಂದ, ಶಿಕ್ಷಕರಿಂದ ಕಳೆದುಕೊಂಡಿದ್ದಾರೆ.

ಒಳ್ಳೆಯ ಲೇಖನ ಓದಿದ ಅನುಭವ. ಧನ್ಯವಾದ.

*ಸೇಡಂ* — ***ಅಣ್ಣಾ ಸಾಗರ್ ಬಿ. ಆರ್.***

ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಪ್ರಾಂಶುಪಾಲರಾದ ಡಾ॥ ಎಸ್. ಬಾಲಚಂದ್ರ ರಾವ್ ಅವರನ್ನು ಭಾರತ ರಾಷ್ಟ್ರೀಯ ವಿಜ್ಞಾನ ಅಕಾಡೆಮಿಯು ಅಮೆರಿಕಾದ ಪ್ರಿನ್ಸ್‌ಟನ್‌ನಲ್ಲಿರುವ ಅಂತರರಾಷ್ಟ್ರೀಯ ಗಣಿತಶಾಸ್ತ್ರ ಸಂಘದ ಆಯೋಗಕ್ಕೆ ಸದಸ್ಯರನ್ನಾಗಿ ನಾಮಕರಣ ಮಾಡಿದೆ. ಗಣಿತಶಾಸ್ತ್ರದ ಇತಿಹಾಸ ವಿಭಾಗದಲ್ಲಿ ಕೆಲಸ ಮಾಡಲು ಡಾ॥ ಬಾಲಚಂದ್ರ ರಾವ್ ಅವರಿಗೆ ಇದರಿಂದ ಅಂತರರಾಷ್ಟ್ರೀಯ ಮನ್ನಣೆ ದೊರೆತಂತಾಗಿದೆ. ಶ್ರೀಯುತರಿಗೆ 'ಹೊಸತು' ಹಾರ್ದಿಕ ಅಭಿನಂದನೆ ಸಲ್ಲಿಸುತ್ತದೆ.

***– ಸಂಪಾದಕ***

*(....೫ನೇ ಪುಟದಿಂದ)* *ಸಂಪಾದಕೀಯ*

ಸ್ಪಷ್ಟವಾಗಿ ಸಾರಿದಂತಾಗಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ ಜನರ ಶಕ್ತಿ ಸಂವರ್ಧನೆಗೆ ಸೂಕ್ತ ಮಾರ್ಗೋಪಾಯಗಳನ್ನು ಒದಗಿಸುವ ಶಿಫಾರಸ್ಸು ಕೂಡ ಸಮರ್ಪಕವಾಗಿದೆ. ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರ ನೇಮಕಾತಿಗಾಗಿ ರಾಷ್ಟ್ರೀಯ ನ್ಯಾಯಾಂಗ ಆಯೋಗ ರಚಿಸಬೇಕೆಂಬ ಶಿಫಾರಸ್ಸು ವಿವಾದಾತ್ಮಕವಾಗುವುದರಲ್ಲಿ ಸಂದೇಹವಿಲ್ಲ. ನ್ಯಾಯಾಧೀಶರ ಅತಿಕ್ರಮ ವರ್ತನೆಗಳ ಬಗ್ಗೆ ಫಿರ್ಯಾದುಗಳನ್ನು ಪರಿಶೀಲಿಸಲು ಒಂದು ಉಪ ಆಯೋಗವನ್ನು ರಚಿಸಬೇಕೆಂಬ ಶಿಫಾರಸ್ಸು ಜನಪರವಾದದ್ದು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಅಲ್ಲಿಯೂ ಅರ್ಜಿಗಳು ಅನಿರ್ದಿಷ್ಟ ಕಾಲ ಕೊಳೆತು ಕೂತಿರುತ್ತವೆಯೇ ಎಂಬ ಪ್ರಶ್ನೆ ಅಪ್ರಸ್ತುತವಲ್ಲ. ಹಾಗೆಯೇ ಸರ್ಕಾರದ ''ಸ್ಥಿರತೆ''ಯನ್ನು ದೃಷ್ಟಿಯಲ್ಲಿಟ್ಟು ಈಗಿರುವ ಚುನಾವಣಾ ಪದ್ಧತಿಯನ್ನು ಬದಲಾಯಿಸುವ ಬಗ್ಗೆ ಮಾಡಿರುವ ಶಿಫಾರಸ್ಸು ಮುಂದಿನ ದಿನಗಳಲ್ಲಿ ಹೆಚ್ಚಿನ ಚರ್ಚೆಗೊಳಗಾಗುವ ವಿಷಯಗಳಲ್ಲೊಂದಾಗುತ್ತದೆ. ರಾಜ್ಯ ಸರ್ಕಾರವನ್ನು ಕಠಿಣ ಪರಿಸ್ಥಿತಿಯಲ್ಲಿ ಮಾತ್ರ ವಜಾ ಮಾಡುವ ಅಧಿಕಾರ ಕೇಂದ್ರ ಸರ್ಕಾರಕ್ಕಿರಬೇಕೆಂಬ ಸಂವಿಧಾನದ ೩೫೬ನೇ ವಿಚ್ಛೇದದ ಬಳಕೆಯ ಬಗ್ಗೆ ಆಯೋಗದ ಶಿಫಾರಸ್ಸು ಸಮಯೋಚಿತವಾಗಿದೆ. ಕೇಂದ್ರ ಮತ್ತು ರಾಜ್ಯಗಳ ಸಂಬಂಧವು ಮೊದಲಿಗಿಂತಲೂ ಹೆಚ್ಚು ಕಠಿಣವಾಗುವ ಇಂದಿನ ಸನ್ನಿವೇಶದಲ್ಲಿ ಇದನ್ನು ಗಂಭೀರವಾಗಿ ಪರಿಗಣಿಸಬೇಕು.

ಸಂಘಪರಿವಾರದವರಿಗೆ ಅತ್ಯಂತ ನಿರಾಸೆಯನ್ನುಂಟು ಮಾಡಿರುವ ವಿಷಯವೆಂದರೆ, ವಿದೇಶಿ ಮೂಲದ ಪ್ರಶ್ನೆಯನ್ನು ರಾಜಕೀಯ ಪಕ್ಷಗಳೇ ನಿರ್ಧರಿಸಬೇಕೆಂದು ತಿಳಿಸಿ ವಿಷಯವನ್ನು ಆಯೋಗವು ಕೈಬಿಟ್ಟಿರುವುದು. ಬಹುಶಃ ಆಯೋಗದ ದೃಷ್ಟಿಯಲ್ಲಿ ಇದು ಸಂವಿಧಾನದ ಪ್ರಶ್ನೆಯಲ್ಲ, ಕೇವಲ ರಾಜಕೀಯ ತೀರ್ಮಾನ. ''ವಿದೇಶಿ ಮೂಲ'' ವಿರೋಧಿಸಿದ ಜನರ ಮುಖದ ಮೇಲೆ ಈಗ ತಣ್ಣೀರೆರಚಿದಂತಾಗಿದೆ. ಅಲ್ಪಸಂಖ್ಯಾತರಿಗೆ, ಅದರಲ್ಲೂ ಮುಸ್ಲಿಮರಿಗೆ, ಲೋಕಸಭೆಯಲ್ಲಿ ಹೆಚ್ಚಿನ ಪ್ರಾತಿನಿಧ್ಯ ಕೊಡಬೇಕೆಂಬುದು, ಮುಸ್ಲಿಂ ಮಕ್ಕಳಿಗೆ, ವಿಶೇಷವಾಗಿ ಮುಸ್ಲಿಂ ಹೆಣ್ಣು ಮಕ್ಕಳಿಗೆ, ವಿದ್ಯಾಸಂಸ್ಥೆಗಳಲ್ಲಿ ಮೀಸಲಾತಿ ಒದಗಿಸಬೇಕೆಂಬ ಶಿಫಾರಸ್ಸು ಮಾಡಿರುವುದು, ಸಮಾನ ನಾಗರಿಕ ಸಂಹಿತೆಯ ಬಗ್ಗೆ ಯಾವ ಶಿಫಾರಸ್ಸೂ ಮಾಡದಿರುವುದು, ಬಿ.ಜೆ.ಪಿ. ಅನುಯಾಯಿಗಳಿಗೆ ನುಂಗಲಾರದ ತುತ್ತಾಗಿದೆ.

ಸಂವಿಧಾನ ಪರಾಮರ್ಶೆ ಆಯೋಗವು ವಿವಾದದೊಡನೆ ಜನಿಸಿ, ಬದುಕಿ, ತನ್ನ ವರದಿಯನ್ನು ಒಪ್ಪಿಸಿ, ಕೊನೆಗೊಂಡಿದೆ. ಆಯೋಗ ಕೊನೆಗೊಂಡರೂ ಅದು ಸಲ್ಲಿಸಿರುವ ವರದಿ ಮುಂಬರುವ ದಿನಗಳಲ್ಲಿ ರಾಷ್ಟ್ರಾದ್ಯಂತ ಹೊಸ ಚರ್ಚೆಗೆ ಎಡೆಯಾಗುವ ಎಲ್ಲಾ ಸಂಕೇತಗಳಿವೆ. ಸಂಘಪರಿವಾರದವರಿಗೆ ಹೊಸ ಸಂಕಟವಾಗಿ ಪರಿಣಮಿಸಿರುವ ಆಯೋಗದ ವರದಿ ಮಾನವ ಹಕ್ಕುಗಳ ಸಂವರ್ಧನೆಯ ಹೋರಾಟಕ್ಕೆ ಹೊಸ ಶಕ್ತಿಯನ್ನು, ಆಯಾಮವನ್ನು ಕೊಡುವಲ್ಲಿ ಸಫಲವಾಗಿದೆ ಎಂದು ಮಾತ್ರ ಸದ್ಯಕ್ಕೆ ಹೇಳಬಹುದು. ಗುಜರಾತಿನ ನರಮೇಧದ ಹಿನ್ನೆಲೆಯಲ್ಲಿ ಭಾರತೀಯ ಜನತಾ ಪಕ್ಷ ಮತ್ತು ಅದರ ಪರಿವಾರಕ್ಕೆ ಸಂವಿಧಾನ, ಕಾನೂನು ಇವೆಲ್ಲಾ ಗಣನೆಗೆ ಬರಬಹುದೇ ಎಂಬುದು ಬೇರೆಯೇ ಪ್ರಶ್ನೆ. ಆ ಬಗ್ಗೆ ಸಾರ್ವತ್ರಿಕ ಎಚ್ಚರ ಅತ್ಯಗತ್ಯ.

***– ಮುರಲೀಧರ್***

# ದೇಶವನ್ನಾವರಿಸುತ್ತಿರುವ ಧಾರ್ಮಿಕ ಫ್ಯಾಸಿಸಂ

ಸನತ್‌ಕುಮಾರ ಬೆಳಗಲಿ

**ಗು**ಜರಾತ್‌ನಲ್ಲಿ ಇತ್ತೀಚೆಗೆ ನಡೆದುದು ಕೋಮು ಗಲಭೆಯೋ ಇಲ್ಲ ಜನಾಂಗವೊಂದರ ನಿರ್ನಾಮ ಕಾರ್ಯಕ್ರಮವೋ ಎಂಬ ಜಿಜ್ಞಾಸೆ ಎಲ್ಲೆಡೆ ಆರಂಭವಾಗಿದೆ. ಎರಡು ಗುಂಪುಗಳು ಘರ್ಷಣೆ ಗಿಳಿದರೆ ಅದನ್ನು ಮತೀಯ ದಂಗೆ ಎಂದು ಕರೆಯಲಾಗುತ್ತದೆ. ಹಿಂದೆ ಭಿವಂಡಿ, ಖಾನಾಪುರ ಮುಂತಾದ ಕಡೆ ಇಂಥ ಘರ್ಷಣೆ ನಡೆದಾಗ ಸತ್ತವರಲ್ಲಿ ಎರಡೂ ಸಮಾಜದವರು ಸೇರಿರುತ್ತಿದ್ದರು. ಸಂಖ್ಯಾ ಪ್ರಮಾಣದಲ್ಲಿ ಕಡಿಮೆ ಇರುವ ಸಮುದಾಯಕ್ಕೆ ಹೆಚ್ಚು ನಷ್ಟವುಂಟಾದರೂ ಬಹುಸಂಖ್ಯಾತರಲ್ಲೂ ಕೆಲವರಿಗೆ ಏಟು ಬಿದ್ದಿರುತ್ತಿತ್ತು. ನಂತರ ಶಾಂತಿಸಭೆ ನಡೆದು ಎಲ್ಲ ತಣ್ಣಗಾಗುತ್ತಿತ್ತು.

ಆದರೆ ಗುಜರಾತ್‌ನಲ್ಲಿ ಇತ್ತೀಚೆಗೆ ನಡೆದುದು ಈ ರೀತಿಯ ಘರ್ಷಣೆ ಅಲ್ಲ. ಘರ್ಷಣೆ ನಡೆದಾಗ ಧಾವಿಸಿ ಲಾಠಿ ಪ್ರಹಾರ, ಗೋಲಿಬಾರ್ ಮಾಡಿ ಗಲಭೆಕೋರರನ್ನು ಚದುರಿಸುವ ಪೊಲೀಸರೂ ಇಲ್ಲಿ ನಾಪತ್ತೆಯಾಗಿದ್ದರು. ಸರ್ಕಾರ ಎಂಬುದು ಗಲಭೆಕೋರರೊಂದಿಗೆ ಶಾಮೀಲಾಗಿತ್ತು. ತಾನು ಮುಖ್ಯಮಂತ್ರಿ ಎಂಬುದನ್ನೇ ಮರೆತ ನರೇಂದ್ರ ಮೋದಿ ಆರ್. ಎಸ್. ಎಸ್. ಪ್ರಚಾರಕನಂತೆ ವರ್ತಿಸಿದರು. ಕಾನೂನು ಮತ್ತು ಶಾಂತಿಯನ್ನು ಕಾಪಾಡುವ ಹೊಣೆ ಹೊತ್ತ ಆತ ಇದು ಗೋಧ್ರಾ ಘಟನೆಯ ಪ್ರತಿಕ್ರಿಯೆ ಎಂಬ ಉಡಾಫೆಯ ಮಾತನ್ನಾಡಿದರು.

ಭಾರತ ವಿಭಜನೆಯಾದಾಗಲೂ ದೇಶದ ತುಂಬ ಕೋಮುಗಲಭೆಗಳು ಅಲ್ಲಲ್ಲಿ ನಡೆದಿದ್ದವು. ಪಾಕಿಸ್ತಾನ ದಿಂದ ಬರುವ ರೈಲುಗಳು ಹಿಂದೂಗಳ, ಇಂಡಿಯಾ ದಿಂದ ಪಾಕಿಸ್ತಾನಕ್ಕೆ ಹೋಗುತ್ತಿದ್ದ ಟ್ರೈನುಗಳು ಮುಸಲ್ಮಾನರ ಹೆಣಗಳನ್ನು ಹೊತ್ತುಕೊಂಡೇ ಸಂಚರಿಸು ತ್ತಿದ್ದವು. ನೌಕಾಲಿಯಲ್ಲಿ ನಡೆದ ಅತ್ಯಂತ ಭೀಕರ ಹಿಂಸಾಚಾರದಿಂದ ದಿಗ್ಭ್ರಮೆಗೊಂಡ, ಗಾಂಧೀಜಿ ಸ್ವತಃ ಕೋಲೂರಿಕೊಂಡು ಅಲ್ಲಿ ಹೋದರು. ಅವರು ನಡೆದು ಬಂದ ದಾರಿಯಲ್ಲಿ ಕಲ್ಲು, ಮುಳ್ಳು, ಗಾಜಿನ ಚೂರುಗಳನ್ನು ಚೆಲ್ಲಿದ ಮತಾಂಧರು ಆ ನೈತಿಕ ಶಕ್ತಿಯ ಮುಂದೆ ತಲೆ ಎತ್ತಿ ನಿಲ್ಲಲಾಗಲಿಲ್ಲ.

ಆದರೆ ಅದೇ ಗಾಂಧೀಜಿ ಜನಿಸಿದ ಗುಜರಾತ್ ನಲ್ಲಿ ಫೆಬ್ರವರಿ ಕೊನೆಯ ವಾರದಲ್ಲಿ ನಡೆದುದು ಬರೀ ಎರಡು ಕೋಮುಗಳ ನಡುವಿನ ಘರ್ಷಣೆ ಮಾತ್ರ ಆಗಿದ್ದರೆ ಇಂದಲ್ಲ ನಾಳೆ ಎಲ್ಲ ಸರಿ ಹೋಗಬಹುದೆಂದು ಸಮಾಧಾನದ ನಿಟ್ಟುಸಿರು ಬಿಡಬಹುದಾಗಿತ್ತು. ಆದರೆ ಅಲ್ಲಿ ನಡೆದುದು ಜನಾಂಗ ನಿರ್ಮೂಲನ ಹಿಂಸಾಚಾರ. ಮತಾಂಧತೆಯಿಂದ ವಿವೇಕ ಕಳೆದುಕೊಂಡ ಜನಜಂಗುಳಿ, ಇನ್ನೊಂದು ಸಮಾಜದ ಜನರನ್ನು ಮಕ್ಕಳು ಮಹಿಳೆಯರೆನ್ನದೆ ಕೊಚ್ಚಿಹಾಕಿದ, ಸುಟ್ಟು ಹಾಕಿದ ದುರಂತ.

ಕಳೆದ ಶತಮಾನದ ಮೂವತ್ತರ ದಶಕದಲ್ಲಿ ಜರ್ಮನಿಯಲ್ಲಿ ಅಡಾಲ್ಫ್ ಹಿಟ್ಲರ್ ನಡೆಸಿದ ಇದೇ ಮಾದರಿಯ ಜನಾಂಗ ನಿರ್ಮೂಲನೆ ಕಾರ್ಯಕ್ರಮ ಚರಿತ್ರೆಯ ಪರಿಜ್ಞಾನವಿದ್ದವರ ಕಣ್ಣಿಗೆ ಕಟ್ಟಿದಂತಿದೆ. ಆರ್ಯನ್ ರಕ್ತ ಶ್ರೇಷ್ಠ. ಜರ್ಮನ್ ಜನಾಂಗ ಮಹೋನ್ನತ. ಈ ಜನಾಂಗವನ್ನು ಹೊರತುಪಡಿಸಿ ಉಳಿದವರೆಲ್ಲ ದೇಶದಲ್ಲಿರಲು ಯೋಗ್ಯರಲ್ಲ ಎಂದು ಅಬ್ಬರಿಸಿದ ಆತ ಲಕ್ಷಾಂತರ ಯಹೂದಿಗಳನ್ನು ಗ್ಯಾಸ್ ಚೇಂಬರಿಗೆ ಹಾಕಿ ನಿರ್ನಾಮ ಮಾಡಿದ, ಈ ಜನಾಂಗದ ಹಸುಗೂಸು ಉಳಿಯಕೂಡದು ಎಂದು ಆಜ್ಞಾಪಿಸಿದ. ಇಟಲಿಯಲ್ಲಿ ಮುಸಲೋನಿ ಅದನ್ನೇ ಮಾಡಿದ.

ಅಡಾಲ್ಫ್ ಹಿಟ್ಲರ್‌ನನ್ನು ಜಗತ್ತಿನ ಮಾನವತೆ ಕ್ಷಮಿಸಲಿಲ್ಲ. ಕೊನೆಗೆ ಆತ ಚರಿತ್ರೆಯ ಕಸದ ಬುಟ್ಟಿ ಸೇರಿದ. ಆದರೆ ಈ ಜನಾಂಗ ದ್ವೇಷಿ ಇಂದಿಗೂ ವಿಶ್ವದ ಕೆಲವರಿಗೆ, ಸ್ಫೂರ್ತಿಯ ಸೆಲೆಯಾಗಿದ್ದಾನೆ. ಈತನಿಂದ ಪ್ರೇರಣೆ ಪಡೆದ ಸಂಘಟನೆಗಳಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘವೂ ಒಂದು. ಅಂತಲೇ ಆರ್. ಎಸ್. ಎಸ್. ಗುರು ಗೋಳ್ವಲಕರ ಜನಾಂಗೀಯ ಹಿರಿಮೆಯನ್ನು, ರಾಷ್ಟ್ರಾಭಿಮಾನವನ್ನು ನಾವು ಹಿಟ್ಲರ್‌ನಿಂದ ಕಲಿತುಕೊಳ್ಳಬೇಕೆಂದು ಹೇಳಿದ್ದರು. ಗುರುವಿನ ಆದೇಶದಂತೆ ಹಿಟ್ಲರನಿಂದ ಕಲಿತ ಪಾಠವನ್ನು ಗುರೂಜಿ ಶಿಷ್ಯರು ಗುಜರಾತ್‌ನಲ್ಲಿ ಅನುಷ್ಠಾನಕ್ಕೆ ತರುತ್ತಿದ್ದಾರೆ.

ಹಿಟ್ಲರ್ ಮುಸಲೋನಿಗಳಿಗೆ ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿರಲಿಲ್ಲ. ಯಹೂದಿಗಳು ಹಾಗೂ ಕಮ್ಯುನಿಸ್ಟರು ಅವರ ಮೊದಲ ಶತ್ರುವಾಗಿದ್ದರು. ಅಂತಲೆ ಈ ಅವಳಿ ಶತ್ರುಗಳನ್ನು ನಿರ್ನಾಮ ಮಾಡುವುದೇ ಅವರ ಕಾರ್ಯಕ್ರಮವಾಗಿತ್ತು. ಇಲ್ಲಿ ಆರ್. ಎಸ್. ಎಸ್.ನ ಮರಿ ಹಿಟ್ಲರ್‌ಗಳಿಗೂ ಮುಸಲ್ಮಾನರು, ಕ್ರೈಸ್ತರು ಹಾಗೂ ಸಮಾನತೆಯನ್ನು ಪ್ರತಿಪಾದಿಸುವ ಕಮ್ಯುನಿಸ್ಟರು, ಸೋಷಲಿಸ್ಟರು ಪ್ರಥಮ ಶತ್ರುವಾಗಿದ್ದಾರೆ. ಈ ಶತ್ರುಗಳನ್ನು ದೈಹಿಕವಾಗಿ ನಾಶ ಮಾಡಲು ಸಂಘಪರಿವಾರ ಕಾರ್ಯಕ್ರಮ ರೂಪಿಸಿದೆ.

ಹಿಟ್ಲರನಿಗಿರದಿದ್ದ ಕೆಲ ವಿಶೇಷತೆಗಳನ್ನು ಸಂಘ ಪರಿವಾರ ಹೊಂದಿದೆ. ಆತನಿಗೆ ಜರ್ಮನ್ ಜನಾಂಗದ ಹಿರಿಮೆಯನ್ನು ಮೆರೆಸುವ ಹುಚ್ಚಿತ್ತು. ಆದರೆ ಇವರು ಹಿಂದುತ್ವದ ರಕ್ಷಾಕವಚವನ್ನಿಟ್ಟು ಕೊಂಡು ವರ್ಣಾಶ್ರಮ ಪದ್ಧತಿಯನ್ನು ಮತ್ತೆ ಪುನರುಜ್ಜೀವನಗೊಳಿಸುವ, ಪುರೋಹಿತಶಾಹಿ ಶ್ರೇಷ್ಠತೆಯನ್ನು, ಯಜಮಾನಿಕೆಯನ್ನು ದೇಶದ ಮೇಲೆ ಹೇರುವ ಅಜೆಂಡಾವನ್ನು ಹೊಂದಿದ್ದಾರೆ. ಅಂತಲೆ ಅಯೋಧ್ಯೆಯ ರಾಮಮಂದಿರ ನಿರ್ಮಾಣದ ಹೆಸರಿನಲ್ಲಿ ಯಜ್ಞ-ಯಾಗಾದಿಗಳು ಅವ್ಯಾಹತವಾಗಿ ನಡೆದಿವೆ. ಮುಂದಿನ ಸಾವಿರ ವರ್ಷ ಕಾಲ ದೇಶದಲ್ಲಿ ಉಳಿದವರು ಪುರೋಹಿತಶಾಹಿ ಬೊಜ್ಜು ಬೆಳೆಸಲು



ದುರ್ಮುಖ !
ಯಾವ ಮುಖ ?
- ಎಂತು ಮುಖ ?
- ಎಂದೆಲ್ಲ ಸೋಗೇಕೆ ?

ಕಳಚಿ ಬಿಡು
ಮುಖವಾಡ.
ಹಿಂದಿರುವುದೊಂದೆ
ಮುಖ !

ಅದೇ ನನ್ನದು, ಮತ್ತೆ
ನಿನ್ನದೂ ಮುಖ !

ಜಾತಿ -ಧರ್ಮ ದ್ವೇಷ
ಸರ್ವಮಾನವ ದ್ವೇಷ

ಭಟ್ಟಿಯಿಳಿಸಿದ ಕ್ರೂರ
ಹಿಂದುತ್ವ ದುರ್ಮುಖ
ಏನೆಲ್ಲ, ಸೋಗೇಕೆ
ಮೋಡಿ ಮುಖ
ನಿನ್ನದೇ
ನಿನ್ನದೇ ದುರ್ಮುಖ !

ಪಿ. ಎಸ್. ಪಾಟೀಲ್
'ಸತ್ಯಾಶ್ರಯ', ಅಕ್ಕಮಹಾದೇವಿ ಕ್ರಾಸ್ ರೋಡ್
ಬಿಜಾಪುರ-೫೮೬೧೦೦

ಬೆವರಿಳಿಸುವಂಥ ವ್ಯವಸ್ಥೆಯನ್ನು ದೇಶದ ಮೇಲೆ ಹೇರುವ ಹುನ್ನಾರ ನಡೆದಿದೆ. ಈ ಹುನ್ನಾರದ ಭಾಗವಾಗಿ ಗುಜರಾತ್‌ನಲ್ಲಿ 'ಹಿಂದೂರಾಷ್ಟ್ರ'ದ ರಚನೆಯ ಪ್ರಯೋಗ ನಡೆದಿದೆ. ಪ್ರಭುತ್ವವನ್ನು ಅಸ್ತ್ರವನ್ನಾಗಿ ಬಳಸಿಕೊಂಡು ಉಳಿದ ಜನಾಂಗಗಳ ಜನರನ್ನು ನಿರ್ಮೂಲನ ಮಾಡುವ ಕಾರ್ಯ ಅಲ್ಲಿ ಆರಂಭಗೊಂಡಿದೆ. ಮೊದಲು ಕ್ರೈಸ್ತರ ಮೇಲೆ ಹಲ್ಲೆ ನಡೆದು ಅವರ ಚರ್ಚುಗಳನ್ನು ಸುಟ್ಟುಹಾಕಲಾಯಿತು. ಕ್ರೈಸ್ತ ಧರ್ಮಗುರುಗಳನ್ನು ಜೀವಂತ ಸುಡಲಾಯಿತು. ಈಗ ಮುಸಲ್ಮಾನರ ನಿರ್ಮೂಲನ ಕಾರ್ಯಕ್ರಮ ನಿರಾತಂಕವಾಗಿ ನಡೆದಿದೆ. ಅಲ್ಲಿನ ಇಡೀ ಹಿಂದೂ ಸಮಾಜವನ್ನು ಕೋಮುವಾದೀಕರಣಗೊಳಿಸುವ ಯತ್ನ ಘೋರವಾಗಿ ಆರಂಭವಾಗಿದೆ.

ದೇಶದ ಉಳಿದ ರಾಜ್ಯಗಳ ಬಹುಸಂಖ್ಯಾತರು ಸಂಘಪರಿವಾರದ ಮೋಸದ ಬಲೆಗೆ ಬಿದ್ದಿರಲಿಕ್ಕಿಲ್ಲ. ಆದರೆ ಗುಜರಾತ್‌ನ ಹಿಂದುಗಳ ಒಂದು ದೊಡ್ಡ ವಿಭಾಗವನ್ನು ದಾರಿತಪ್ಪಿಸುವಲ್ಲಿ ಮತಾಂಧರು ಸಫಲರಾಗಿದ್ದಾರೆ. ಮತದಾರ ಪಟ್ಟಿಗಳಲ್ಲಿ ಹಾಗೂ ಆರ್‌ಟಿಓ ಕಛೇರಿಗಳ ಮೂಲಕ ಮುಸಲ್ಮಾನರು ಎಲ್ಲಿದ್ದಾರೆ, ಎಷ್ಟಿದ್ದಾರೆ ಎಂಬ ವಿವರ ಸಂಗ್ರಹಿಸಿ ಹುಡುಕಿ ಹುಡುಕಿ ಅವರ ಮನೆಗಳನ್ನು ಸುತ್ತುವರಿದು ಸಾಮೂಹಿಕವಾಗಿ ಸುಟ್ಟುಹಾಕುವ ಪ್ರಕ್ರಿಯೆ ಗುಜರಾತ್‌ನಲ್ಲಿ ಅತ್ಯಂತ ವ್ಯವಸ್ಥಿತವಾಗಿ ನಡೆಯಿತು.

ಹೀಗಾಗಿ ಗುಜರಾತ್ ಸಮಾಜ ಇಂದು ಹೋಳುಹೋಳಾಗಿದೆ. ಹಿಂದೂ ಮುಸಲ್ಮಾನ ಕ್ರೈಸ್ತರು ಪರಸ್ಪರ ಕೂಡಿ ಬದುಕುವ, ಕೊಟ್ಟು ತೆಗೆದುಕೊಳ್ಳುವ ಸಹಜ ಜೀವನ ವಿಧಾನದಲ್ಲಿ ನಂಬಿಕೆಯನ್ನು ಕಳೆದುಕೊಂಡಿದ್ದಾರೆ. ಗೋಧ್ರಾ ಘಟನೆ ನಂತರ ಅಹ್ಮದಾಬಾದ್, ಸೂರತ್, ಬರೋಡಾಗಳಲ್ಲಿ ನಡೆದುದು ಘರ್ಷಣೆ ಅಲ್ಲ. ಮನೆಯಲ್ಲಿ ಮಲಗಿಕೊಂಡಿದ್ದ, ಅಂಗಡಿಗಳಲ್ಲಿ ವ್ಯಾಪಾರ ಮಾಡುತ್ತಿದ್ದ ಮುಸಲ್ಮಾನರನ್ನು ಗುರುತಿಸಿ ಜೀವಂತ ಸುಟ್ಟುಹಾಕಲಾಗಿದೆ. ಉಳಿದೆಡೆಗಳಂತೆ ಎಲ್ಲ ಕೋಮುಗಳ ಜನ ಅಲ್ಲಿ ಒಂದೇ ಕಡೆ ವಾಸಿಸುವಂತಿಲ್ಲ. ತಮ್ಮದೇ ಪ್ರತ್ಯೇಕ ಬಡಾವಣೆಗಳನ್ನು ಮಾಡಿಕೊಂಡಿದ್ದಾರೆ.

೧೯೬೯ರಿಂದ ಅವ್ಯಾಹತವಾಗಿ ನಡೆಸುತ್ತಲೇ ಬಂದ ಕೋಮು ಹಿಂಸಾಚಾರ ಇದೀಗ ಜನಾಂಗ ನಿರ್ಮೂಲನ ಕಾರ್ಯಕ್ರಮವಾಗಿ ರೂಪಾಂತರಗೊಂಡಿದೆ. ಮಹಾತ್ಮಾ ಗಾಂಧೀಜಿ ಅವರನ್ನು ದೈಹಿಕವಾಗಿ ಕೊಂದ ಶಕ್ತಿಗಳು ಈಗ ಅವರ ಜನ್ಮಭೂಮಿಯಲ್ಲಿ ಬಾಪೂಜಿ ನಂಬಿದ ಶಾಂತಿ ಸಹಬಾಳ್ವೆಯ ಮೌಲ್ಯಗಳಿಗೆ ಕೊಳ್ಳಿ ಇಟ್ಟಿವೆ. ಇದರಿಂದ ಹೆಚ್ಚಿನ ಅನುಕೂಲ ಪಡೆದ ಪಕ್ಷ ಯಾವುದಾದರೂ ಇದ್ದರೆ ಅದು ಬಿಜೆಪಿ.

ಪಾಕಿಸ್ತಾನದಲ್ಲಿ ತಲೆ ಎತ್ತಿದ ಮದರಸಾಗಳಲ್ಲಿ ತಾಲಿಬಾನ್‌ಗಳು ಸೃಷ್ಟಿಯಾಗಿ ಇಡೀ ಅಫ್ಘಾನಿಸ್ತಾನವನ್ನು ವಿನಾಶದ ಅಂಚಿಗೆ ತಂದು ನಿಲ್ಲಿಸಿದರು. ಎಲ್ಲ ಮದರಸಾಗಳು ಹಾಗಿಲ್ಲವಾದರೂ ಮತಾಂಧರ ಕಪಿಮುಷ್ಟಿಯಲ್ಲಿದ್ದ ಕೆಲ ಮದರಸಾಗಳಲ್ಲಿ ಮತಾಂಧರು ಹುಟ್ಟಿಕೊಂಡರು. ಅದೇ ರೀತಿ ಗುಜರಾತಿನ ಆರ್. ಎಸ್. ಎಸ್. ಶಾಖೆಗಳಲ್ಲಿ, ವಿಶ್ವ ಹಿಂದೂ ಪರಿಷತ್ ನಡೆಸುವ ಭಾರತೀಯ ಸಂಸ್ಕೃತಿ ಶಿಬಿರಗಳಲ್ಲಿ ಜನಾಂಗದ್ವೇಷಿ ನರಹಂತಕ ಭಜರಂಗಿಗಳು ಸೃಷ್ಟಿಯಾದರು. ಅದರ ವಿಷಫಲವನ್ನು ಇಡೀ ದೇಶ ಈಗ ಉಣ್ಣಬೇಕಾಗಿ ಬಂದಿದೆ.

ಮುಸಲ್ಮಾನರ ಆರ್ಥಿಕ ಬೆನ್ನುಮೂಳೆ ಮುರಿಯಲು ಅವರ ಅಂಗಡಿ, ವಾಣಿಜ್ಯ ಮಳಿಗೆ, ಉದ್ದಿಮೆ, ವಠಾರಗಳಿಗೆ ಬೆಂಕಿ ಹಚ್ಚಿ ಅವುಗಳನ್ನು ಧ್ವಂಸಗೊಳಿಸಲಾಗಿದೆ. ಮನೆಮಾರು ಕಳೆದುಕೊಂಡ ಲಕ್ಷಾಂತರ ಅಲ್ಪಸಂಖ್ಯಾತರು ಈಗ ದರ್ಗಾಗಳಲ್ಲಿ ಆಶ್ರಯ ಪಡೆದಿದ್ದಾರೆ. ಇಂಥ ಹತ್ಯಾಕಾಂಡವನ್ನು ಖಂಡಿಸಬೇಕಾದ ಮಠಾಧೀಶರು ಇದಕ್ಕೆಲ್ಲ ಮುಸಲ್ಮಾನರೇ ಕಾರಣ ಎಂದು ಪ್ರವಚನ ನೀಡುತ್ತಾ ಇಡೀ ವಾತಾವರಣವನ್ನೇ ಹದಗೆಡಿಸುತ್ತಿದ್ದಾರೆ.

ಮಠಾಧೀಶರನ್ನು, ಮುಲ್ಲಾಗಳನ್ನು ಹದ್ದು ಬಸ್ತಿನಲ್ಲಿಡದಿದ್ದರೆ ಈ ದೇಶ ಉಳಿಯುವುದಿಲ್ಲ ಎಂದು ಖ್ಯಾತ ವಿಚಾರವಾದಿ ಜಿ. ಕೆ. ಗೋವಿಂದರಾವ್ ಇತ್ತೀಚೆಗೆ ಹೇಳಿದ ಮಾತು ವಿಚಾರಪೂರ್ಣವಾಗಿದೆ. ಎಲ್ಲ ಪ್ರಗತಿಪರ ಪ್ರಜ್ಞಾವಂತರು, ಎಡಶಕ್ತಿಗಳು, ಒಂದುಗೂಡಿ ಪ್ರತಿರೋಧ ಒಡ್ಡದಿದ್ದರೆ ಭಾರತ ಇನ್ನೊಂದು ಜರ್ಮನಿಯಾಗುತ್ತದೆ. ಒಬ್ಬ ಹಿಟ್ಲರ್ ನಿಂದ ಸೃಷ್ಟಿಯಾದ ಫ್ಯಾಸಿಸಂ ಆತನ ಸಾವಿನಿಂದ ಅಂತ್ಯಗೊಂಡಿತು. ಆದರೆ ಇಲ್ಲಿ ತಲೆ ಎತ್ತಿರುವ ಧಾರ್ಮಿಕ ಫ್ಯಾಸಿಸಂ ಸಾವಿರಾರು ಹಿಟ್ಲರ್‌ಗಳನ್ನು ಸೃಷ್ಟಿಸಿದೆ. ಪ್ರಖರವಾದ ವೈಚಾರಿಕ ಸಂಘರ್ಷವಿಲ್ಲದೆ ಈ ಶನಿಸಂತಾನ ನಿರ್ನಾಮವಾಗಲು ಸಾಧ್ಯವಿಲ್ಲ.

ನಿಜ, ಎಲ್ಲ ಹಿಂದೂಗಳ ಬೆಂಬಲ ಸಂಘಪರಿವಾರಕ್ಕಿಲ್ಲ. ಶೇ. ೧೦ ರಿಂದ ೧೫ರಷ್ಟು ಹಿಂದೂಗಳ ಬೆಂಬಲ ಮಾತ್ರ ಪಡೆದಿರುವ ವಿಶ್ವ ಹಿಂದೂ ಪರಿಷತ್ ೯೮ ಕೋಟಿ ಹಿಂದೂಗಳ ಪರವಾಗಿ ಅಬ್ಬರಿಸುತ್ತಿದೆ. ಸಾವಿರಾರು ಜಾತಿ, ಮತ, ಭಾಷೆಗಳಿರುವ ಭಾರತದಲ್ಲಿ ಫ್ಯಾಸಿಸಂ ಹೇರಿಕೆ ಸುಲಭವಲ್ಲ. ಆದರೆ ಹಿಂದುತ್ವದ ಬುಲ್ಡೋಜರ್ ಅಡಿಯಲ್ಲಿ ಇಲ್ಲಿನ ವೈವಿಧ್ಯಪೂರ್ಣ ಬದುಕು ನಾಶವಾಗುವುದಿಲ್ಲ ಎಂದು ಹೇಗೆ ಹೇಳಲು ಸಾಧ್ಯ? ಇಂಥ ಕರಾಳ ದಿನಗಳು ಬರುವ ಮುನ್ನ ಮಾನವತಾವಾದಿ ಶಕ್ತಿಗಳೆಲ್ಲ ಒಗ್ಗೂಡಿ ನಿಲ್ಲಬೇಕಾಗಿದೆ.

'ದೇಹವೇ ದೇಗುಲ' ಎಂಬ ಬಸವಣ್ಣನವರ ನುಡಿಯನ್ನು, ಪುರೋಹಿತಶಾಹಿಯನ್ನು ತೊಲಗಿಸಲು ಸ್ವಾಮಿ ವಿವೇಕಾನಂದ ನೀಡಿದ ಕರೆಯನ್ನು, ಗುಡಿ-ಚರ್ಚು - ಮಸೀದಿಗಳನ್ನು ಬಿಟ್ಟು ಹೊರಬರಲು ರಾಷ್ಟ್ರಕವಿ ಕುವೆಂಪು ಅವರು ನೀಡಿರುವ ಸಂದೇಶವನ್ನು ಮಾತ್ರವಲ್ಲ, ಭಾರತದ ಸಹಬಾಳ್ವೆಯ ಉದಾತ್ತ ಪರಂಪರೆಯನ್ನು ಪ್ರತ್ಯಸ್ತ್ರವಾಗಿ ಬಳಸಿಕೊಂಡು ಹಿಂದೂ ಮುಖವಾಡ ಹಾಕಿರುವ ಪುರೋಹಿತಶಾಹಿ ಫ್ಯಾಸಿಸಂನ್ನು ನಾವು ಸಂಹಾರ ಮಾಡಬೇಕಾಗಿದೆ.

**ಸನತ್‌ಕುಮಾರ ಬೆಳಗಲಿ**
ಎಲ್. ಎಫ್. ೧೭/೬, ಬಿ.ಡಿ.ಎ. ಫ್ಲ್ಯಾಟ್ಸ್
ಮೈಕೋ ಲೇಔಟ್, ಪೊಲೀಸ್ ಸ್ಟೇಷನ್ ಎದುರು
ಬಿ.ಟಿ.ಎಮ್. ಲೇ ಔಟ್, ಬೆಂಗಳೂರು-೫೬೦ ೦೭೬

## ಸಾದರ ಸ್ವೀಕಾರ

**ಪ್ರಥಮ ಶ್ರೀಕಾಳಿ ಪ್ರಶಸ್ತಿಪುರಸ್ಕೃತ**
**ಡಾ॥ ಚಂದ್ರಶೇಖರ ಕಂಬಾರ** *ಡಾ॥ ವಿರೇಶ ಬಡಿಗೇರ*
*ಪುಟ : ೧೨೮* *ಬೆಲೆ ರೂ. ೩೦*
**ಶ್ರೀ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆ (ರಿ)**
ಶಿರಸಂಗಿ, ಸವದತ್ತಿ ತಾ॥ ಬೆಳಗಾಂವಿ ಜಿಲ್ಲೆ

**ಶೀಲ ಸಂಕ್ರಾಂತಿ (ಯಕ್ಷಗಾನ ಪ್ರಸಂಗ)**
*ದಿವಾಕರ ಹೆಗಡೆ*
*ಪುಟ : ೬೦* *ಬೆಲೆ ರೂ. ೩೫*
**ಪುಸ್ತಕ ಹೊಂಬಾಳೆ**
ಕೆಳದಿ-೫೭೭೪೦೧, ಶಿವಮೊಗ್ಗ

**ಮಕ್ಕಳ ರಂಗಭೂಮಿ (ವಿಚಾರ ಸಂಕಿರಣ)**
*ಸಂ. ಕಿರಣ ಭಟ್*
*ಪುಟ : ೭೦* *ಬೆಲೆ ರೂ. ೨೦*
**ಚೇತನಾ ಪ್ರಿಂಟಿಂಗ್ ಆ್ಯಂಡ್ ಪಬ್ಲಿಷಿಂಗ್**
**ಕೋ-ಆಪರೇಟಿವ್ ಸೊಸೈಟಿ. ಲಿ.,**
ಶಿರಸಿ, ಉತ್ತರ ಕನ್ನಡ

**ಮಾತಾಡುವ ಮರದ ತುಂಡು (ಮಕ್ಕಳ ಕಥೆಗಳು)**
*ಆರ್. ಬಸವರಾಜ್*
*ಪುಟ : ೭೬* *ಬೆಲೆ ರೂ. ೪೦*

**ನಲಿಯಿತು ನವಿಲು (ಮಕ್ಕಳ ನಾಟಕ)** *ಗ. ಸು. ಭಟ್ಟ*
*ಪುಟ : ೮೪* *ಬೆಲೆ ರೂ. ೪೦*

**ಚಿಟ್ಟೆಯ ಮೊಟ್ಟೆ (ಮಕ್ಕಳ ನಾಟಕ)** *ಗ. ಸು. ಭಟ್ಟ*
*ಪುಟ : ೩೪* *ಬೆಲೆ ರೂ. ೨೫*

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ನಿರ್ಮಲ ಪ್ರಕಾಶನ**
೯೫೭, ಸಂತೋಷ ಸಾಗರ
ಗೋವಿನಪುರ ಬಡಾವಣೆ
ತಿಪಟೂರು-೫೭೨ ೨೦೨

**ಕನ್ನಡದಲ್ಲಿ ಇಂಗ್ಲಿಷ್ ಸಂಕ್ಷಿಪ್ತ ವ್ಯಾಕರಣ**
*ಆರ್. ವಿ. ಭಂಡಾರಿ*
*ಪುಟ : ೬೮* *ಬೆಲೆ ರೂ. ೨೫*
**ಅಧ್ಯಯನ ಪ್ರಕಾಶನ**
ಪಂಡಿತ ಸಾರ್ವಜನಿಕ ಗ್ರಂಥಾಲಯ ಕಟ್ಟಡ
ಶಿರಸಿ, ಉ.ಕ.-೫೮೧೪೦೧

**ಹುಜೂರ್ (ಕತೆಗಳು)** *ಜಗದೀಶ ಪೂಜಾರ*
*ಪುಟ : ೫೪* *ಬೆಲೆ ರೂ. ೪೦*
**ಕಂನಾಡು ಪ್ರಕಾಶನ**
ಬೆಟಗೇರಿ - ಗದಗ

# ಕಾರ್ಮಿಕರ ದಿನಾಚರಣೆ - ಇತಿಹಾಸದ ಗುಂಗಿನಲ್ಲಿ

ನಾ. ದಿವಾಕರ

**ಮೇ** ೧ ಕಾರ್ಮಿಕ ದಿನಾಚರಣೆ. ದೇಶದ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಜೀವನದ ಅಡಿಪಾಯವಾದ ದುಡಿಯುವ ಜನತೆ ಹೆಮ್ಮೆಯಿಂದ ಆಚರಿಸುವ ದಿನ, ಮೇ ದಿನ. ಅದು ಒಬ್ಬ ವ್ಯಕ್ತಿಯ ಜನ್ಮದಿನ ಅಥವಾ ಅಗಲಿದ ದಿನವಲ್ಲ. ಅದೊಂದು ಚರಿತ್ರಾರ್ಹ ಘಟನೆಯ, ಮೈನವಿರೇಳಿಸುವ ಇತಿಹಾಸದ ಸ್ಮರಣೆ. ರೈತರು, ಕೃಷಿ ಕಾರ್ಮಿಕರು, ಕಾರ್ಖಾನೆ ಕಾರ್ಮಿಕರು, ಯುವಕರು, ನಿರುದ್ಯೋಗಿಗಳು, ಕೂಲಿ ಕಾರ್ಮಿಕರು, ಒಟ್ಟಾರೆ ಶ್ರಮಜೀವಿಗಳು ಹಾಗೂ ಆಳುವ ವರ್ಗಗಳ ನಡುವಿನ ಸಂಘರ್ಷವನ್ನು ಬಲಿಷ್ಠಗೊಳಿಸುವ ಸಂಕಲ್ಪವನ್ನು ನೀಡುವ ದಿನ, ಮೇ ದಿನ. ಈ ಮೇ ದಿನಾಚರಣೆಗೆ ಬಾವುಟಗಳು, ಬ್ಯಾನರುಗಳು, ಘೋಷಣೆಗಳಿಗಿಂತಲೂ ಶೋಷಕ ವರ್ಗಗಳ ವಿರುದ್ಧ ಅವಿರತವಾಗಿ ಹೋರಾಡುವ ದೃಢ ಸಂಕಲ್ಪ, ರಾಜಕೀಯ, ಸಾಮಾಜಿಕ ಪರಿಕಲ್ಪನೆ ಅತ್ಯಗತ್ಯ. ಮೇ ದಿನಾಚರಣೆ – ಕೆಂಪು ಬಾವುಟ – ಶ್ರಮ ಜೀವಿ ವರ್ಗ ಇವುಗಳ ನಡುವೆ ಇರುವ ಸೂಕ್ಷ್ಮವಾದ ಐತಿಹಾಸಿಕ ಸಂಬಂಧವನ್ನು ಗ್ರಹಿಸದೇ ಹೋದಲ್ಲಿ ಮೇ ದಿನಾಚರಣೆಯೂ ಒಂದು ಬರಡು ಉತ್ಸವವಾಗುವುದರಲ್ಲಿ ಸಂಶಯವೇ ಇಲ್ಲ.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧವು ಹೋರಾಟಗಳ, ಸಂಘರ್ಷಗಳ ಅವಧಿಯೆಂದೇ ಹೇಳಬಹುದು. ಮಾರ್ಕ್ಸ್ ಮತ್ತು ಎಂಗೆಲ್ಸ್‌ರವರ ಕಮ್ಯುನಿಸ್ಟ್ ಪ್ರಣಾಳಿಕೆಯಿಂದ ಪ್ರಭಾವಿತರಾದ ಕಾರ್ಮಿಕರು ವಿಶ್ವದಾದ್ಯಂತ ತಮ್ಮ ಹಕ್ಕುಗಳಿಗಾಗಿ ಹೋರಾಟಗಳನ್ನು ಹೂಡಿದ ಕಾಲ ಇದು. ೧೮೭೧ರ ಪ್ಯಾರಿಸ್ ಕಮ್ಯೂನ್ ವಿಫಲಗೊಂಡರೂ, ಅದರಿಂದ ಹೊರಚಿಮ್ಮಿದ ಕ್ರಾಂತಿಯ ಕಿಡಿಗಳನ್ನು ಆರಿಸಲು ಬಂಡವಾಳಶಾಹಿಗಳಿಗೆ ಸಾಧ್ಯವಾಗಲಿಲ್ಲ. ''ವಿಶ್ವದ ಕಾರ್ಮಿಕರೇ ಒಂದಾಗಿ, ನೀವು ನಿಮ್ಮ ದಾಸ್ಯದ ಸಂಕೋಲೆಗಳನ್ನು ಹೊರತಾಗಿ ಬೇರೇನನ್ನೂ ಕಳೆದುಕೊಳ್ಳುವುದಿಲ್ಲ'' ಎಂಬ ಮಾರ್ಕ್ಸ್‌ರವರ ಘೋಷಣೆ ವಿಶ್ವ ಕಾರ್ಮಿಕರ ಕಿವಿಗಳಲ್ಲಿ ನಿರಂತರವಾಗಿ ಮೊಳಗುತ್ತಲೇ ಇತ್ತು.

ಈ ಐತಿಹಾಸಿಕ ದೃಷ್ಟಿಕೋನದಿಂದ ನೋಡಿದಾಗ ಮೇ ದಿನ ಎಂದೊಡನೆ ಥಟ್ಟನೆ, ಬಾಂಬ್ ಹಾಕಿದರೆಂಬ ಆಪಾದನೆಯ ಮೇಲೆ ನೇಣುಗಂಬ ಏರಿದ ಚಿಕಾಗೋ ನಗರದ ಆ ನಿರಪರಾಧಿ ಯುವಕರು ನೆನಪಾಗುತ್ತಾರೆ. ೧೮೮೬ರಲ್ಲಿ, ಅಂದರೆ ೧೧೬ ವರ್ಷಗಳ ಹಿಂದೆ, ಕಾರ್ಮಿಕರು ಕೆಲಸದ ಅವಧಿಯನ್ನು ೮ ಘಂಟೆಗಳಿಗೆ ಸೀಮಿತಗೊಳಿಸಲು ಆಕ್ರಮಣಕಾರಿ ಹೋರಾಟಕ್ಕೆ ಇಳಿದಿದ್ದೇ ಈ ಮೇ ದಿನದ ಬುನಾದಿ. ಒಂದು ರೀತಿಯಿಂದ ನೋಡಿದರೆ ಅಮೆರಿಕಾದಲ್ಲಿನ ೧೮೮೦-೯೦ರ ಅವಧಿಗೂ, ಜಾಗತೀಕರಣದ ಬಿರುಗಾಳಿಗೆ ಸಿಲುಕಿರುವ ಇಂದಿನ ನಮ್ಮ ಪರಿಸ್ಥಿತಿಗೂ ಬಹಳಷ್ಟು ಹೋಲಿಕೆ ಕಂಡುಬರುತ್ತದೆ. ಆ ದಶಕದಲ್ಲಿ ಉತ್ಪಾದನೆ ಕ್ಷೇತ್ರದಲ್ಲಿನ ಬಂಡವಾಳ ಹೂಡಿಕೆ ೩ ಪಟ್ಟು ಹೆಚ್ಚಾಗಿದ್ದು, ಸಣ್ಣಪುಟ್ಟ ಬಂಡವಳಿಗರ ಸ್ಥಾನದಲ್ಲಿ ದತ್ತಿ ಸಂಸ್ಥೆಗಳು, ಏಕಸ್ವಾಮ್ಯತೆ ಉದ್ಭವಿಸಿದ್ದವು. ಕಾರ್ಮಿಕರ ಸಂಖ್ಯೆ ೨.೭ ದಶಲಕ್ಷದಿಂದ ೫.೯ ದಶಲಕ್ಷಕ್ಕೆ ಏರಿತ್ತು.

ಈ ಅವಧಿಯಲ್ಲಿ ೧೦ ಸಾವಿರಕ್ಕೂ ಹೆಚ್ಚು ಕಾರ್ಮಿಕರನ್ನು ಹೊಂದಿರುವ ಅನೇಕ ಕಾರ್ಖಾನೆಗಳು ಹುಟ್ಟಿಕೊಂಡವು. ಶ್ರೀಮಂತರ ಐಶಾರಾಮ ಜೀವನ ಪರಾಕಷ್ಠೆ ತಲುಪಿತ್ತು. ಅದೇ ವೇಳೆ ದುಡಿಯುವ ವರ್ಗಗಳ ದಾರಿದ್ರ್ಯ ಹೇಳತೀರದಾಗಿತ್ತು. ಅಂದಿನ ಶ್ರೀಮಂತವರ್ಗಗಳು ಡಾರ್ವಿನ್ನರ 'ಬಲಿಷ್ಠರಾದವರು ಬಾಳಿಯಾರು' ಎಂಬ ನೀತಿಯ ಆರಾಧಕರಾಗಿದ್ದರು. ಇಂದಿನ ಬಲಬಂಧೀಯರಂತೆ ''ದಾರಿದ್ರ್ಯ ಅವರವರ ಪೂರ್ವಜನ್ಮದ ಪಾಪದ ಫಲ. ಶ್ರೀಮಂತಿಕೆ ಅವರ ಯೋಗ್ಯತೆಯ ಪ್ರತೀಕ'' ಎಂದೇ ವಾದಿಸುತ್ತಿದ್ದರು.



**ಆರಂಭದ ದಿನಗಳು**

೧೮೭೦ರಲ್ಲಿ ದೇಶದಾದ್ಯಂತ ಉದ್ಭವಿಸಿದ್ದ ಹಣಕಾಸು ಮುಗ್ಗಟ್ಟು ಹಾಗೂ ಆರ್ಥಿಕ ಹಿನ್ನಡೆಯ ಪರಿಣಾಮವಾಗಿ ಅನೇಕ ಕಡೆ ಗಲಭೆಗಳು ಉಂಟಾಗುತ್ತಿದ್ದವು. ಈ ಗಲಭೆಗಳನ್ನು ಮಹಾದಂಗೆ ಎಂದೂ ಕರೆಯಲಾಗುತ್ತಿತ್ತು. ೧೮೮೦ರ ಆರಂಭದಲ್ಲಿ ನಿರುದ್ಯೋಗ ಶೇ. ೨೦ ರಷ್ಟಿತ್ತು.

೧೮೮೨-೮೬ರ ಅವಧಿಯಲ್ಲಿ ವೇತನಮಟ್ಟ ಶೇ. ೧೫ರಷ್ಟು ಇಳಿತವಾಗಿತ್ತು. ನಂತರ ೧೮೮೬ರ ಹೊತ್ತಿಗೆ ತುಂಬಾ ಸುಧಾರಣೆ ಕಂಡಿತ್ತು. ಕಾರ್ಮಿಕರು ವಾರಕ್ಕೆ ಆರು ದಿನ, ದಿನಕ್ಕೆ ೧೨ರಿಂದ ೧೬ ಘಂಟೆಗಳ ಕಾಲ ಕೆಲಸ ಮಾಡಬೇಕಾಗಿತ್ತು. ಬಾಲ ಕಾರ್ಮಿಕ ಪದ್ಧತಿ ಸರ್ವೇಸಾಮಾನ್ಯವಾಗಿತ್ತು. ಕಾರ್ಖಾನೆಗಳಲ್ಲಿ ಕಾರ್ಮಿಕರಿಗೆ ವಿಧಿಸಲಾಗುತ್ತಿದ್ದ ಕೆಲಸದ ನಿಯಮಾವಳಿಗಳು ಭಯಾನಕವಾಗಿದ್ದವು. ಗಾಯಾಳು ಕಾರ್ಮಿಕರ ಸಂಖ್ಯೆ ಉಲ್ಬಣಿಸುತ್ತಿತ್ತು. ದುಡಿಯುವ ವರ್ಗಗಳ ಪ್ರಮುಖ ಅಸ್ತ್ರವಾದ ಬಹಿಷ್ಕಾರ, ಮುಷ್ಕರಗಳಿಗಿಂತಲೂ ಯಶಸ್ವಿಯೆನಿಸಿದ್ದವು. ಮಾಲೀಕರ ಖಾಸಗಿ ಸೈನ್ಯ ''ಹಳದಿ ನಾಯಿ ಸಂಬಂಧಿ''ಗಳು (ಅಂದರೆ ಕೆಲಸಕ್ಕೆ ಸೇರುವ ಮೊದಲು ಕಾರ್ಮಿಕರಿಂದ ಯಾವುದೇ ಯೂನಿಯನ್‌ಗೆ ಸೇರದಂತೆ ಪ್ರಮಾಣ ಮಾಡಿಸಿಕೊಳ್ಳುವುದು) ಸಾಮಾನ್ಯವಾಗಿತ್ತು. ಕಾರ್ಮಿಕ ಸಂಘಟನೆ ಕಾನೂನುಬಾಹಿರವಾಗಿದ್ದು ಅವು ಪಿತೂರಿ, ಆಪಾದನೆಗಳಿಗೆ ಗುರಿಯಾಗಬೇಕಾಗಿತ್ತು. ಕಾರ್ಖಾನೆಗಳಂತೆಯೇ ಕಾರ್ಮಿಕರಿಗೆ ಮನೆಗಳಲ್ಲೂ ಪರಿಸ್ಥಿತಿ ವ್ಯಸನ ತರುವಂಥದೇ ಆಗಿತ್ತು. ಮದರ್ ಜೋನ್ಸ್ ಹೇಳುತ್ತಿದ್ದಂತೆ ಅಂದಿನ ಪರಿಸ್ಥಿತಿ ಹಸಿವು, ದಾರಿದ್ರ್ಯ, ಹತಾಶೆಯ ದಿನಗಳಾಗಿದ್ದವು.

ಅನೇಕ ಕಾರ್ಖಾನೆಗಳಲ್ಲಿ ಹೊರದೇಶದ ಕಾರ್ಮಿಕರು ಹೇರಳವಾಗಿದ್ದರು. ೧೮೮೦ರ ದಶಕದಲ್ಲಿ ಅಮೆರಿಕಾಗೆ ಬರುತ್ತಿದ್ದ ಕೆಲಸಗಾರರನ್ನು ಉದ್ಯೋಗ ಸಂಸ್ಥೆಗಳು ಕೂಡಲೇ ಸಂಪರ್ಕಿಸಿ ನೇಮಿಸಿಕೊಳ್ಳುತ್ತಿದ್ದವು. ಈ ನೌಕರರು ಮುಷ್ಕರನಿರತ ಕಾರ್ಮಿಕರಿಗೆ ಸಂಪೂರ್ಣ ಬೆಂಬಲ ನೀಡುತ್ತಿದ್ದರು. ಹಠಾತ್ ಮುಷ್ಕರಗಳು ಸಾಮಾನ್ಯ ಸಂಗತಿಯಾಗಿತ್ತು.

೧೮೭೦ರ ಮಹಾದಂಗೆಯ ನಂತರ ಆಳುವ ವರ್ಗಗಳ ಆಕ್ರಮಣದಿಂದ ದಿಕ್ಕುಗೆಟ್ಟಂತಾದ ಕಾರ್ಮಿಕ ವರ್ಗ ಸಂಪೂರ್ಣ ರಕ್ಷಣಾಹೀನವಾಗಿರಲಿಲ್ಲ. ಬಹುತೇಕ ಕಾರ್ಮಿಕರು ಅಸಂಘಟಿತರಾಗಿದ್ದರೂ ಸಹ ಕಾರ್ಮಿಕ ಚಳುವಳಿಯು ಪುನರ್ ಸಂಘಟನೆಯ ಹಾದಿ ಹಿಡಿದಿತ್ತು. ಅನೇಕ ಕಾರ್ಮಿಕ ಸಂಘಟನೆಗಳ ಪೈಕಿ ''ನೈಟ್ಸ್ ಆಫ್ ಲೇಬರ್'' ಒಂದು

ಪ್ರಮುಖ ಸಂಘಟನೆಯಾಗಿತ್ತು. ಸಮಾಜವಾದಿ ಸಿದ್ಧಾಂತದಿಂದ ಪ್ರಭಾವಿತವಾಗಿದ್ದ ನೈಟ್ಸ್ ಸಂಘಟನೆ ೧೮೬೯ರಲ್ಲಿ ಆರಂಭಗೊಂಡು ೧೮೮೦ರ ವೇಳೆಗೆ ಮುಕ್ತ ಸಂಘಟನೆಯಾಗಿತ್ತು. ಎಲ್ಲಾ ದುಡಿಯುವ ವರ್ಗಗಳ ಸಮಾನತೆ ಬಯಸುತ್ತಿದ್ದ ಈ ಸಂಘಟನೆ ಸ್ವಾಭಾವಿಕವಾಗಿ ಎಲ್ಲಾ ರೀತಿಯ ಕಾರ್ಮಿಕರನ್ನೂ ಆಕರ್ಷಿಸಿತು. ಚೀನಿಯರಿಗೆ ಮಾತ್ರ ಇಲ್ಲಿ ಪ್ರವೇಶವಿರಲಿಲ್ಲ.

ನೈಟ್ಸ್ ಸಂಘಟನೆಯು ರಾಜಕೀಯ ಕ್ರಿಯೆಯಲ್ಲಿ ತೊಡಗಿದ್ದರೂ ಅದಕ್ಕೆ ಪ್ರತ್ಯೇಕ ಕಾರ್ಮಿಕರ ಪಕ್ಷ ಕಟ್ಟುವ ಉದ್ದೇಶವಿರಲಿಲ್ಲ. ಕೇವಲ ವೇತನಕ್ಕಾಗಿ ಹೋರಾಡುವ ಬದಲು ಸರ್ವ ಜನತೆಗೂ ಸಮಾನತೆ ಕಲ್ಪಿಸುವ ಸಹಕಾರಿ ಉತ್ಪಾದನ ಪದ್ಧತಿಯಲ್ಲಿ ನೈಟ್ಸ್ ಸಂಘಟನೆ ವಿಶ್ವಾಸ ವ್ಯಕ್ತಪಡಿಸಿತ್ತು. ನೈಟ್ಸ್ ಸಂಘಟನೆಯ ನಾಯಕರಾಗಿದ್ದ ಪೌಡರ್ಲಿ ಮುಷ್ಕರ ವಿರೋಧಿಯಾಗಿದ್ದು, ಬಹಿಷ್ಕಾರ ನೀತಿಯನ್ನು ಅನುಸರಿಸುತ್ತಿದ್ದರು. ಆದರೂ ಸಾಮಾನ್ಯ ಸದಸ್ಯರು ಅನೇಕ ಬಾರಿ ನಾಯಕರ ತೀರ್ಮಾನಗಳಿಗೆ ವಿರುದ್ಧವಾಗಿ ಮುಷ್ಕರ ನಿರತರಾಗಿದ್ದುಂಟು.

ಈ ಅವಧಿಯಲ್ಲಿ ಕಾರ್ಮಿಕರ ಪರವಾದ ಅನೇಕ ಸುದ್ದಿ ಮಾಧ್ಯಮಗಳೂ ಪ್ರಚಲಿತವಾಗಿದ್ದವು. ೨೦ ಮಾಸಿಕಗಳು ಹಾಗೂ ೪೦೦ ವಾರ ಪತ್ರಿಕೆಗಳು ಕಾರ್ಮಿಕರಿಗೆ ಬೆಂಬಲವಾಗಿದ್ದವು. ಪ್ರಮುಖ ರಾಜಕೀಯ ಪಕ್ಷಗಳಾಗಿ ಸೋಷಲಿಸ್ಟ್ ಲೇಬರ್ ಪಕ್ಷ ಹಾಗೂ ಇಂಟರ್‌ನ್ಯಾಷನಲ್ ವರ್ಕಿಂಗ್ ಪೀಪಲ್ಸ್ ಅಸೋಸಿಯೇಷನ್ ಇದ್ದವು. ಸೋಷಲಿಸ್ಟ್ ಪಕ್ಷದಲ್ಲಿ ವಿದೇಶಿ ಸಮಾಜವಾದಿಗಳು ಹೆಚ್ಚಾಗಿದ್ದು ಯುರೋಪ್‌ನ ಮಾರ್ಕ್ಸ್‌ವಾದದಿಂದ ಅದು ಪ್ರಭಾವಿತವಾಗಿತ್ತು. ಇಂಟರ್‌ನ್ಯಾಷನಲ್ ಪಕ್ಷವು ಅಮೆರಿಕಾದ ಸಮಾಜವಾದಿಗಳು ಹಾಗೂ ಕಮ್ಯುನಿಸ್ಟರನ್ನು ಒಳಗೊಂಡಿದ್ದು ಅರಾಜಕತಾವಾದಿಗಳಿಂದ ಪ್ರಭಾವಿತವಾಗಿತ್ತು.




**ಹೋರಾಟದ ದಿನಗಳು**

೧೮೮೦ರಲ್ಲಿ ಚಿಕಾಗೋ ನಗರವು ರಾಜಕೀಯ ಹಾಗೂ ಕಾರ್ಮಿಕ ಚಳುವಳಿಯ ಪ್ರಮುಖ ಕೇಂದ್ರವಾಗಿತ್ತು. ಅಮೆರಿಕಾದ ವ್ಯಾಪಕ ರೈಲು ವ್ಯವಸ್ಥೆ, ಮಾಂಸ ಹಾಗೂ ಆಹಾರ ಸಂಸ್ಕರಣೆ, ಉತ್ಪಾದನಾ ಕಾರ್ಖಾನೆಗಳು, ಎಲ್ಲದಕ್ಕೂ ಚಿಕಾಗೋ ನಗರ ಕೇಂದ್ರ ಬಿಂದುವಾಗಿತ್ತು. ಅದೇ ವೇಳೆಯಲ್ಲಿ ಅಮೆರಿಕಾದ ಅತ್ಯಂತ ಕ್ರೂರ ಬಂಡವಾಳಶಾಹಿಗಳೂ ಇಲ್ಲೇ ನೆಲೆಯೂರಿದ್ದರು. ಪೊಲೀಸರನ್ನು ಈ ಮಾಲಿಕರು ಖಾಸಗಿ ಸೈನ್ಯಗಳಂತೆ ಉಪಯೋಗಿಸುತ್ತಿದ್ದರು.

ಚಿಕಾಗೋ ನಗರದಲ್ಲಿ ಅರಾಜಕತಾವಾದಿಗಳದೇ ಪ್ರಮುಖ ಎಡಪಂಥೀಯ ಪಕ್ಷವಾಗಿತ್ತು. ಚಿಕಾಗೋ ಕಾರ್ಮಿಕ ಚಳುವಳಿಯ ನಾಯಕ ಅರಾಜಕತಾವಾದಿಯೇ ಆಗಿದ್ದು, ನೈಟ್ಸ್ ಸಂಘಟನೆಯೊಂದಿಗೆ ಸಾಮರಸ್ಯ ಹೊಂದಿದ್ದ. ಆದಾಗ್ಯೂ ಆತ ಸರ್ವ ಸಮಾನತೆಯಲ್ಲಿ ವಿಶ್ವಾಸ ಹೊಂದಿದ್ದನು. ವೇತನ ಗುಲಾಮಗಿರಿಯನ್ನು ತೊಡೆದುಹಾಕಿ, ಬಂಡವಾಳಶಾಹಿಯನ್ನು ಅಂತ್ಯಗೊಳಿಸಿ, ಸಹಕಾರ ಸಂಘಟನೆಯನ್ನು ಪ್ರೋತ್ಸಾಹಿಸುವುದು ಇವರ ಉದ್ದೇಶವಾಗಿತ್ತು.

ಇಂತಹ ಪರಿಸ್ಥಿತಿಯಲ್ಲಿ ೧೮೮೧ರಲ್ಲಿ ಕೇವಲ ೧೫೦ ಸದಸ್ಯರನ್ನೊಳಗೊಂಡ ''ಫೆಡರೇಶನ್ ಆಫ್ ಆರ್ಗನೈಸ್ಡ್ ಟ್ರೇಡ್ ಅಂಡ್ ಲೇಬರ್ ಯೂನಿಯನ್'' ಆರಂಭವಾಯಿತು. ಸಮಾಜವಾದಿಗಳಿಂದ ತುಂಬಿದ್ದ ಈ ಫೆಡರೇಶನ್‌ನಲ್ಲಿ ನೈಟ್ಸ್ ಸಂಘಟನೆಯೂ ಸೇರಿತ್ತು. ಆದರೆ ಆ ವೇಳೆಗೆ ನೈಟ್ಸ್ ಸಂಘಟನೆ ದುರ್ಬಲಗೊಂಡಿತ್ತು. ನೈಟ್ಸ್‌ರಂತೆ ವೇತನ ಪದ್ಧತಿಯನ್ನು ವಿರೋಧಿಸಿದ ಈ ಫೆಡರೇಶನ್ ಕಡ್ಡಾಯ ಶಿಕ್ಷಣ, ಕಾರ್ಮಿಕ ಸಂಘಟನೆಗಳಿಗೆ ಕಾನೂನು ಸಮ್ಮತಿ, ಮುಂತಾದ ರಾಜಕೀಯ ಬೇಡಿಕೆಗಳನ್ನು ಹೊಂದಿತ್ತು. ಸ್ಯಾಮ್ಯುಯಲ್ ಗಾಂಪರ್ಸನ್ ಅಧ್ಯಕ್ಷತೆಯಲ್ಲಿನ ೧೮೮೪ರ ಅಧಿವೇಶನದಲ್ಲಿ ದಿನಕ್ಕೆ ಎಂಟು ಘಂಟೆಯ ಕಾಲ ಕೆಲಸಕ್ಕಾಗಿ ಆಗ್ರಹಿಸಿ ೧೮೮೬ರ ಮೇ ೧ರ ಒಳಗೆ ಅದರ ಅನುಷ್ಠಾನಕ್ಕಾಗಿ ಒತ್ತಾಯಿಸಲಾಯಿತು.

ಕಾರ್ಮಿಕ ಸಂಘಟನೆಗಳಲ್ಲಿ ನಿರತರಾದವರಿಗೆ ಒಂದು ಸತ್ಯಾಂಶದ ಅರಿವಿದ್ದೇ ಇರುತ್ತದೆ. ಯಾವುದೇ ಅಧಿವೇಶನದಲ್ಲಿ ಕೈಗೊಳ್ಳುವ ನಿರ್ಣಯಗಳ ಬಗ್ಗೆ ಬಹುತೇಕವಾಗಿ ಗಮನ ಹರಿಸಲಾಗುವುದಿಲ್ಲ. ಇದೇ ರೀತಿ ಫೆಡರೇಶನ್‌ನ ಎಂಟು ಘಂಟೆ ಕೆಲಸದ ಬೇಡಿಕೆಯೂ ನಿರ್ಲಕ್ಷ್ಯಕ್ಕೊಳಗಾಯಿತು. ಶಾಸಕರಿಗೆ ಪತ್ರಗಳನ್ನು ಬರೆಯುವುದರ ಹೊರತಾಗಿ ಬೇರೇನೂ ಸಾಧಿಸಲಾಗಲಿಲ್ಲ. ನೈಟ್ಸ್ ಸಂಘಟನೆಯೂ ಇದೇ ಹಾದಿ ಅನುಸರಿಸಿತು.

ಆದರೆ ಅಮೆರಿಕಾದ ಲಕ್ಷಾಂತರ ಕಾರ್ಮಿಕರು, ಶ್ರಮಜೀವಿಗಳು ಬೇರೆಯೇ ಆಲೋಚನೆ ಹೊಂದಿದ್ದರು. ಅಲ್ಪಾವಧಿಯ ಕೆಲಸಕ್ಕಾಗಿ ೧೮೩೦ರಿಂದಲೂ ಹೋರಾಡುತ್ತಿದ್ದ ಕಾರ್ಮಿಕರಿಗೆ ಫೆಡರೇಶನ್ ನಿರ್ಣಯ ಒಂದು ವರವಾಗಿ ಪರಿಣಮಿಸಿತು. ೧೮೮೫ರ ವೇಳೆಗೆ ಪ್ರತಿಯೊಂದು ನಗರ, ಪಟ್ಟಣಗಳಲ್ಲೂ ''ಎಂಟು ಘಂಟೆಯ ಒಕ್ಕೂಟ''ಗಳು ಹುಟ್ಟಿಕೊಂಡವು. ಸಾವಿರಾರು ಮಕ್ಕಳು, ಪುರುಷರು, ಮಹಿಳೆಯರು ಮೆರವಣಿಗೆಯಲ್ಲಿ ಭಾಗವಹಿಸಲಾರಂಭಿಸಿದರು. ಕೇವಲ ಭಾಷಣ ಮೆರವಣಿಗೆಗಳಿಗೆ ಸೀಮಿತವಾಗದ ಈ ಚಳುವಳಿ ಅಮೆರಿಕಾದ ಇತಿಹಾಸದಲ್ಲಿಯೇ ಮಹಾಮುಷ್ಕರದ ಅಲೆಯನ್ನು ಸೃಷ್ಟಿಸಿತು. ೧೮೮೦ರಲ್ಲಿ ೫ ಲಕ್ಷ ಕಾರ್ಮಿಕರ ಪೈಕಿ ಶೇ. ೧೦ರಷ್ಟು ಮುಷ್ಕರನಿರತರಾಗಿದ್ದರು. ಆರ್ಥಿಕತೆ ಸುಧಾರಿಸಿದ್ದರಿಂದ ಕಾರ್ಮಿಕರು ವೇತನದ ಬದಲು ಎಂಟು ಘಂಟೆಯ ಕೆಲಸಕ್ಕಾಗಿ ಹೋರಾಡಲಾರಂಭಿಸಿದ್ದರು.

ನೈಟ್ಸ್ ಸಂಘಟನೆಗೆ ಸೇರಿದ ರೈಲು ರಸ್ತೆಯ ಕಾರ್ಮಿಕರು ಈ ಮುಷ್ಕರದ ಮುಂಚೂಣಿಯಲ್ಲಿದ್ದರು. ೧೮೮೫ರಲ್ಲಿ ವೇತನ ಕಡಿತದ ವಿರುದ್ಧ ನಡೆದ ಯಶಸ್ವಿ ಮುಷ್ಕರವು ಮುಂಬರುವ ಕಾಳಗಕ್ಕೆ ನಾಂದಿಯಾಯಿತು. ಸಾವಿರಾರು ಕಾರ್ಮಿಕರು ನೈಟ್ಸ್ ಸಂಘಟನೆಗೆ ಸೇರತೊಡಗಿದರು. ನಾಯಕರಾದ ಪೌಡರ್ಲಿ ಯಾವುದೇ ನಿರ್ದೇಶನ ನೀಡದಾದರು. ೧೮೮೪ರಿಂದ ೧೮೮೬ರ ಅವಧಿಯಲ್ಲಿ ಸಂಘಟನೆಯ ಸಂಖ್ಯೆ ೭೦ ಸಾವಿರದಿಂದ ೭ ಲಕ್ಷ ೩೦ ಸಾವಿರವಾಯಿತು. ೧೮೮೬ರ ಮೇ ೧ರ ದಿನ ಹತ್ತಿರವಾಗುತ್ತಿದ್ದಂತೆ ಪರಿಸ್ಥಿತಿ ಗಂಭೀರವಾಗತೊಡಗಿತು. ಕಾರ್ಮಿಕರು ಮುಷ್ಕರ ಹೂಡಿ ಕಾರ್ಖಾನೆ ಬೀಗ ಮುದ್ರೆ ಆದ ನಂತರ, ಸಂಘಟಿತರಾಗಿ ನೈಟ್ಸ್ ಸಂಘಟನೆಗೆ ಸೇರುವುದು ಸಾಮಾನ್ಯ ಸಂಗತಿಯಾಯಿತು.

ಸುದ್ದಿ ಮಾಧ್ಯಮಗಳಲ್ಲಿ ಈ ಪರಿಸ್ಥಿತಿಯನ್ನು (೧೮೭೦ರ) ''ಪ್ಯಾರಿಸ್ ಕಮ್ಯೂನ್‌ನ ಪುನರಾವರ್ತನೆ'' ಎಂದು ಬಣ್ಣಿಸಲಾಗುತ್ತಿತ್ತು. ಮುಂದಿನ

ಹೋರಾಟಕ್ಕಾಗಿ ಬಂಡವಳಿಗರು, ಕಾರ್ಮಿಕರು ಸಜ್ಜಾಗುತ್ತಿದ್ದರು. ಕಾರ್ಮಿಕರು ಪೆರೇಡುಗಳು, ಮುಷ್ಕರಗಳಿಗಾಗಿ ಸಿದ್ಧತೆ ನಡೆಸುತ್ತಿದ್ದಂತೆ, ಬಂಡವಳಿಗರು ಪೊಲೀಸರನ್ನು ಜಮಾಯಿಸುತ್ತಿದ್ದರು. ಒಟ್ಟಾರೆ ಮೇ ೧ರಂದು ಶನಿವಾರದ ದಿನ ೩ ಲಕ್ಷ ೪೦ ಸಾವಿರ ಜನ ಪೆರೇಡ್ ಮಾಡಿದರೆ, ೧ ಲಕ್ಷ ೯೦ ಸಾವಿರ ಜನ ಮುಷ್ಕರನಿರತರಾಗಿದ್ದರು.

ಈ ಎಲ್ಲಾ ಹೋರಾಟಗಳಿಗೂ ಚಿಕಾಗೋ ನಗರ ಕೇಂದ್ರಬಿಂದುವಾಗಿತ್ತು. ಮೇ ೧ರ ಪೆರೇಡ್‌ನಲ್ಲಿ, ಅದು ರಜಾದಿನವಲ್ಲದಿದ್ದರೂ ೮೦ ಸಾವಿರ ಕಾರ್ಮಿಕರು ಪಾಲ್ಗೊಂಡಿದ್ದರು. ಮೆರವಣಿಗೆ ಶಾಂತಿಯುತವಾಗಿದ್ದು, ಹಬ್ಬದ ವಾತಾವರಣ ಸೃಷ್ಟಿಯಾಗಿತ್ತು. ಪ್ಯಾರಿಸ್ ಕಮ್ಯೂನ್ ಆಗಲಿ, ರಕ್ತಪಾತವಾಗಲಿ ನಡೆದಿರಲಿಲ್ಲ. ಸೋಮವಾರ ಮೇ ಮೂರರಂದು ಭಾರಿ ಕಾರ್ಖಾನೆಯಾದ ಮೆಕಾರ್ಮಿಕ್‌ನ ನೌಕರರು ಬೀಗಮುದ್ರೆಯಾದ ಸನ್ನಿವೇಶದಲ್ಲಿ ಎಂಟು ಘಂಟೆಗಳ ಕೆಲಸಕ್ಕಾಗಿ ಮುಷ್ಕರ ಆರಂಭಿಸಿದರು. ಕಂಪನಿಯ ಮಾಲಿಕರು ಪೊಲೀಸರನ್ನು ಕರೆಸಿದರು. ಕಾರ್ಮಿಕರ ಮೇಲೆ ಲಾಠಿಚಾರ್ಜ್ ಮಾಡಲಾಯಿತು. ೬ ಕಾರ್ಮಿಕರು ಮರಣಹೊಂದಿದರು. ಇವರ ಸ್ಮರಣಾರ್ಥ ಮೇ ೪ರಂದು ಹೇ ಮಾರ್ಕೆಟ್ ಚೌಕದ ರ್ಯಾಲಿಯಲ್ಲಿ ಕೇವಲ ೩ ಸಾವಿರ ಜನರು ಪಾಲ್ಗೊಂಡಿದ್ದರು. ಚಳುವಳಿಯನ್ನು ಸದೆಬಡಿಯಲು ಪೊಲೀಸರ ಸೈನ್ಯವೇ ಅಲ್ಲಿ ಜಮಾಯಿಸಿತ್ತು. ಕೊನೆಯ ಭಾಷಣಕಾರನು ''ಅಂತಿಮವಾಗಿ'' ಎಂದು ಭಾಷಣ ಮುಗಿಸುತ್ತಿದ್ದಂತೆಯೇ ಪೊಲೀಸರ ಸಾಲಿನಲ್ಲಿ ಬಾಂಬ್ ಸ್ಫೋಟಗೊಂಡು ಆರು ಜನ ಪೊಲೀಸರು ಮರಣಹೊಂದಿ ೫೦ ಜನರಿಗೆ ಗಾಯಗಳಾದವು. ಕುಪಿತಗೊಂಡ ಪೊಲೀಸರ ಸೇನೆ ಜನರ ಗುಂಪಿನ ಮೇಲೆ ಆಕ್ರಮಣ ಮಾಡಿದಾಗ ಹಲವಾರು ಕಾರ್ಮಿಕರ ಹತ್ಯೆಗೈಯ್ಯಲಾಯಿತು. ಕಾರ್ಮಿಕರ ಚಳುವಳಿಯನ್ನು ಹತ್ತಿಕ್ಕಲು ಬಂಡವಾಳಶಾಹಿಗಳಿಗೆ ಇದೊಂದು ವರವಾಗಿ ಪರಿಣಮಿಸಿತು. ಆಳುವ ವರ್ಗಗಳು ಶೀಘ್ರವಾಗಿ ಕಾರ್ಯನಿರತರಾಗಿ ''ತೀವ್ರವಾದಿಗಳನ್ನು'' ಎಲ್ಲೆಂದರಲ್ಲಿ ಬಂಧಿಸಿದರು. ಚಿಕಾಗೋ ನಗರದಲ್ಲಿ ನೂರಾರು ಕಾರ್ಮಿಕರನ್ನು ಬಂಧಿಸಲಾಯಿತು. ಅಂತಿಮವಾಗಿ ಬಾಂಬ್ ಹಾಕಿದ ಆರೋಪದ ಮೇಲೆ ೮ ಜನರನ್ನು ವಿಚಾರಣೆಗೆ ಒಳಪಡಿಸಲಾಯಿತು. ಈ ಎಂಟು ಜನರ ಪೈಕಿ ಒಬ್ಬ ಮಾತ್ರ ರ್ಯಾಲಿಯಲ್ಲಿ ಭಾಗವಹಿಸಿದ್ದು ಆತನೂ ಭಾಷಣಕಾರರೊಡನೆ ವೇದಿಕೆಯ ಮೇಲೆ ಇದ್ದನೆಂಬುದು ಗಮನಾರ್ಹ ಅಂಶ. ಆದರೂ ಅದು ಗಣನೆಗೆ ಬಾರದೆ ಹೋಯಿತು.

ಈ ಸಂದರ್ಭದಲ್ಲಿ ಸುದ್ದಿ ಮಾಧ್ಯಮಗಳು ಸಹ ಜನಾಭಿಪ್ರಾಯವನ್ನು ಕಾರ್ಮಿಕರ ವಿರುದ್ಧ ತಿರುಗಿಸುವುದರಲ್ಲಿ ಸಹಾಯಕವಾಗಿದ್ದುವು. ವಿಚಾರಣೆಗಳ ನಂತರ ಏಳು ಜನರಿಗೆ ಮರಣದಂಡನೆ ವಿಧಿಸಲಾಯಿತು. ಆಪಾದಿತರು ನಿರಪರಾಧಿಗಳೆಂದು ಸಾಬೀತುಪಡಿಸಲು ಎಷ್ಟೇ ಪುರಾವೆಗಳನ್ನು ಒದಗಿಸಿದರೂ ನ್ಯಾಯ ದೊರಕದೆ ಹೋಯಿತು. ಕೊನೆಗೂ ನಾಲ್ಕು ಜನರಿಗೆ ಗಲ್ಲು ಶಿಕ್ಷೆ ವಿಧಿಸಲಾಯಿತು. ನಾಲ್ವರು ಅಮಾಯಕ ಕಾರ್ಮಿಕರು ಹುತಾತ್ಮರಾದರು. ಇಂದಿನವರೆಗೂ ಬಾಂಬ್ ಹಾಕಿದವರಾರೆಂದು ಖಚಿತವಾಗಿ ತಿಳಿದುಬಂದಿಲ್ಲ.

ಈ ಪ್ರಕರಣದ ನಂತರ ಕಾರ್ಮಿಕ ಚಳುವಳಿಗಳು ತೀವ್ರ ಹಿನ್ನಡೆ ಕಂಡವು. ಪೌಡರ್ಲಿಯಂತಹ ನಾಯಕರು ಸಹ ಕಾರ್ಮಿಕರ ಹಿತಾಸಕ್ತಿಯನ್ನು ಕಡೆಗಣಿಸಿ ಒಪ್ಪಂದಗಳಿಗೆ ಮಣಿದರು. ನಂತರ ನಡೆದ ಮುಷ್ಕರಗಳೆಲ್ಲವೂ ವಿಫಲಗೊಂಡವು. ಚಳುವಳಿಯ ಹಿನ್ನಡೆಯಿಂದ ಉತ್ತೇಜಿತರಾದ ಬಂಡವಾಳಶಾಹಿಗಳು ಕಾರ್ಮಿಕ ಚಳುವಳಿಗಳನ್ನು ಸದೆಬಡಿಯುವುದರೊಂದಿಗೆ ೮ ಘಂಟೆಗಳ ಕೆಲಸಕ್ಕೂ ಇತಿಶ್ರೀ ಹಾಡಿದರು. ನಂತರ ೧೯೧೮ರವರೆಗೂ ಈ ೮ ಘಂಟೆಯ ಕೆಲಸ ಅನುಷ್ಠಾನಗೊಳ್ಳಲಿಲ್ಲ.

ಇದು ಮೇ ದಿನದ ಇತಿಹಾಸ. ಅಂದು ಚಿಕಾಗೋ ನಗರದ ಬೀದಿಗಳಲ್ಲಿ ಬಂಡವಾಳಶಾಹಿಗಳು ರಕ್ತದ ಕೋಡಿ ಹರಿಸಿದಾಗ, ಅಮಾಯಕ ಕಾರ್ಮಿಕರನ್ನು ಸದೆಬಡಿದಾಗ, ಆ ರಕ್ತದಲ್ಲಿ ಅದ್ದಿದ ಬಟ್ಟೆಯನ್ನು ಬಾವುಟವನ್ನಾಗಿ ಮಾಡಿಕೊಂಡು ಹೋರಾಡಿದ್ದರು ಚಿಕಾಗೋದ ಕಾರ್ಮಿಕರು. ಆ ಕೆಂಪು ಬಾವುಟವೇ ಇಂದು ಕಾರ್ಮಿಕ ವರ್ಗದ ಲಾಂಛನವಾಗಿದೆ. ಕೆಂಪು ಬಾವುಟ ಯಾವುದೇ ಪಕ್ಷಕ್ಕೆ ಸೀಮಿತವಾದುದಲ್ಲ. ಅದು ವಿಶ್ವ ಕಾರ್ಮಿಕರ ಸಂಘರ್ಷ ಹೋರಾಟಗಳ ಪ್ರತೀಕ.

ಆದರೆ ಇಂದು ನಾವು ಕಾಣುತ್ತಿರುವುದೇನು? ೮ ಘಂಟೆಗಳ ಕೆಲಸಕ್ಕೆ ಹೋರಾಟ ನಡೆದ ೧೧೫ ವರ್ಷಗಳ ನಂತರ, ಜನರಿಗೆ ಅದರ ಪ್ರಜ್ಞೆಯೇ ಇಲ್ಲವಾಗಿದೆ. ವಿಶೇಷವಾಗಿ ಕಛೇರಿಗಳಲ್ಲಿ ಕೆಲಸ ಮಾಡುವವರಿಗೆ ಈ ಪ್ರಜ್ಞೆ ಮಾಸಿಹೋಗಿದೆ. ಈ ಸಂಬಳ ಪಡೆವ ಕಾರ್ಮಿಕರನ್ನು ಪ್ರತಿನಿಧಿಸುವ ಯೂನಿಯನ್‌ಗಳಲ್ಲೂ ಈ ಬಗ್ಗೆ ನಿರ್ಲಕ್ಷ್ಯ ತುಂಬಿದೆ. ಅನೇಕ ಕಾರ್ಖಾನೆಗಳಲ್ಲಿ, ಕಛೇರಿಗಳಲ್ಲಿ ಓವರ್‌ಟೈಂ ಸಾಮಾನ್ಯ ಸಂಗತಿಯಾಗಿದೆ. ಇವರಿಂದ ಕಂಪನಿಯ ಮಾಲಿಕರಿಗೆ ಲಾಭ ಇದ್ದೇ ಇದೆ. ಆದರೆ ಕಮ್ಮಿ ಸಂಬಳದಿಂದ ಜೀವನ ನಡೆಸಲಾಗದ ಕಾರ್ಮಿಕರಿಗೂ ಇದು ಅವಶ್ಯವಾಗಿದೆ. ವಿಪರ್ಯಾಸವೆಂದರೆ ಇದರಿಂದ ಶ್ರಮದ ಮೌಲ್ಯ ಕುಗ್ಗುತ್ತಲೇ ಹೋಗುತ್ತಿದೆ. ಆರ್ಥಿಕ ಪರಿಸ್ಥಿತಿಯ ದೃಷ್ಟಿಯಿಂದ ನೋಡಿದಾಗ ಇಂದಿಗೂ ಅಂದಿಗೂ ಸಾಮ್ಯ ಕಂಡುಬರುತ್ತದೆ. ಜಾಗತೀಕರಣದ ಆಕ್ರಮಣದಿಂದ ತತ್ತರಿಸುತ್ತಿರುವ ಭಾರತದ ಜನತೆ ಈಗ ಮುಕ್ತ ಮಾರುಕಟ್ಟೆಯ ಕಹಿ ಅನುಭವ ಪಡೆಯುತ್ತಿದ್ದಾರೆ.




ಉತ್ತರ ಪ್ರದೇಶದ ವಿದ್ಯುಚ್ಛಕ್ತಿ ನೌಕರರ ಮುಷ್ಕರ, ಬಾಲ್ಕೊ ನೌಕರರು, ಕೋಲಾರ ಚಿನ್ನದ ಗಣಿ ಕಾರ್ಮಿಕರು, ಖಾಸಗೀಕರಣಕ್ಕೊಳಪಡುತ್ತಿರುವ ಸಾರ್ವಜನಿಕ ಉದ್ಯಮಗಳು, ಬ್ಯಾಂಕ್ ಮತ್ತು ವಿಮಾ ನೌಕರರು, ಟೆಲಿಕಾಂ ಹಾಗೂ ಏರ್‌ಲೈನ್ಸ್ ನೌಕರರು, ರೈತರು, ಕೃಷಿ ಕಾರ್ಮಿಕರು, ಸಣ್ಣ ವ್ಯಾಪಾರಿಗಳು, ಹೀಗೆ ಎಲ್ಲಾ ಕ್ಷೇತ್ರದವರು ಇಂದು ಹೋರಾಟದ ಹಾದಿ ಹಿಡಿಯುವುದು ಅನಿವಾರ್ಯವಾಗಿದೆ. ಪಕ್ಷ ಸಂಘಟನೆಗಳ ಭೇದ ಮರೆತು ಹೋರಾಡುವ ಪರಿಸ್ಥಿತಿ ಉಂಟಾಗಿದೆ. ಇತ್ತೀಚೆಗೆ ಮಹಾರಾಷ್ಟ್ರದಲ್ಲಿ ನಡೆದ ಕಾರ್ಮಿಕರ ಚಳುವಳಿ ಒಂದು ಪ್ರಥಮ ಹೆಜ್ಜೆಯಷ್ಟೆ.

ಪರಿಸ್ಥಿತಿ ಗಂಭೀರವಾದಾಗ ಚಿಕಾಗೋದಲ್ಲಿ ನಡೆದಂತೆಯೇ ಇಲ್ಲಿಯೂ ಆಗಬಹುದು. ಬೇರೆಬೇರೆ ರಾಜಕೀಯ ಬಣ್ಣಗಳನ್ನು ಪ್ರದರ್ಶಿಸುವ ಕಾರ್ಮಿಕ ನಾಯಕರು ಯಾವುದೇ ಕಾರಣದಿಂದ ವಿದೇಶಿ ಮತ್ತು ಸ್ವದೇಶಿ ಬಂಡವಾಳ ಶಕ್ತಿಯೊಡನೆ ರಾಜಿ ಮಾಡಿಕೊಂಡರೆ ಅದನ್ನು ಪ್ರತಿಭಟಿಸಿ ಕಾರ್ಮಿಕರು ಬೀದಿಗಿಳಿಯುವ ಕಾಲ ಸನ್ನಿಹಿತವಾಗಿದೆ. ಈ ಅಂಶವನ್ನು ಕಾರ್ಮಿಕ ನಾಯಕರು, ಸಂಘಟನೆಗಳು, ರಾಜಕೀಯ ಪಕ್ಷಗಳು, ವಿಶೇಷವಾಗಿ ಎಡಪಕ್ಷಗಳು, ಗಮನಿಸಬೇಕು.

ಮೇ ದಿನಾಚರಣೆಯಂದು ಕೇವಲ ಘೋಷಣೆ ಮತ್ತು ಆಶ್ವಾಸನೆಗಳ ಗುಂಗಿನಲ್ಲಿ ಉಳಿಯದೆ ಇತಿಹಾಸದೊಳಕ್ಕೆ ಇಣುಕಿ ನೋಡುವುದೇ ಕಾರ್ಮಿಕರ ಏಳಿಗೆಗಾಗಿ ನೇಣುಗಂಬ ಏರಿದ ಆ ನಾಲ್ವರು ನಿರಪರಾಧಿಗಳಿಗೆ, ನಾವು ಸಲ್ಲಿಸುವ ಶ್ರದ್ಧಾಂಜಲಿಯಾಗುತ್ತದೆ.

''ಚಿಕಾಗೋ ನಗರದ ಬೀದಿಗಳಲ್ಲಿ
ಹರಿದ ರಕ್ತದ ಕೋಡಿಯಲ್ಲಿ
ಮೂಡಿತೊಂದು ನವಯುಗದ ಬಾವುಟ,
ವಿಶ್ವ ಕಾರ್ಮಿಕರ ಲಾಂಛನ ಕೆಂಬಾವುಟ.''

ಮೇ ದಿನಾಚರಣೆ ಚಿರಾಯುವಾಗಲಿ.

*(ಪ್ರಮುಖ ಆಧಾರ : MONTHLY REVIEW )*

ನಾ. ದಿವಾಕರ
[illegible]

# ಬಂಧನ ಮತ್ತು ಬಿಡುಗಡೆಯ ನಡುವೆ ಹೋರಾಟ

## ಅಕ್ಕಮಹಾದೇವಿ ನಮಗೆಷ್ಟು ಪ್ರಸ್ತುತ ?

*ಅಕ್ಕ ನಮಗೆ ಇಂದು ಯಾಕೆ ಪ್ರಸ್ತುತ ಎನ್ನುವುದನ್ನು ಅವಳ ಬಂಧನ ಹಾಗೂ ಬಿಡುಗಡೆಯ ನಡುವಿನ ಹೋರಾಟದ ಸ್ವರೂಪದ ಮೂಲಕ ಖಚಿತಪಡಿಸಿ ಕೊಳ್ಳಬಹುದು. ಇದನ್ನು ಅವಳ ವಚನಗಳ ಅನುಭಾವಿಕ ನೆಲೆ , ಹೆಣ್ಣುಕಾಯದ ನೆಲೆ ಮತ್ತು ನಿಸರ್ಗದ ನೆಲೆ ಎಂಬ ಮೂರು ನೆಲೆಗಳಲ್ಲಿ ಅಭ್ಯಾಸ ಮಾಡಲಾಗಿದೆ.*

■

**ಡಾ|| ಗಿರಿಜಾ ಶಾಸ್ತ್ರಿ**

*"ಎನಗೇಕಯ್ಯ ಸಾವ ಪ್ರಪಂಚಿನ*
*ಪುತ್ಥಳಿ ನಾನು... ಎನಗೇಕಯ್ಯಾ"*

ಈ ಸಾವ ಪ್ರಪಂಚಿನ ಪುತ್ಥಳಿ ತನ್ನೊಳಗೇ ಸ್ಪಷ್ಟವಾಗಿ ಗೆರೆಮೂಡಿಸಿ ಇರಿಸಿಕೊಂಡ 'ಚೆನ್ನಮಲ್ಲಿಕಾರ್ಜುನ'ನೆಂಬ ಗುರಿ, ಆದರ್ಶ, ಆವೇಶಗಳನ್ನು ತನ್ನ ಮೈ ಹಾಗೂ ಮನದ ತುಂಬ ತುಂಬಿಕೊಂಡು, ಆ ನೆಲೆಯಲ್ಲಿ ಗುಡ್ಡ, ಗಹ್ವರ, ಕಾಡು, ಮೇಡು ಅಲೆಯುತ್ತಾ ನಡೆದಳು. ತನಗೆ ನಂಬಿಕೆಯಿಲ್ಲದ ಅಥವಾ ಲೌಕಿಕದ ಅನೇಕ ಸಿಕ್ಕು ತೊಡರುಗಳಲ್ಲಿ ಸಿಕ್ಕ ಅಕ್ಕಮಹಾದೇವಿ ಅದನ್ನು ಬಿಡಿಸಿಕೊಳ್ಳುವ ಯತ್ನದಲ್ಲಿ ತನ್ನೊಳಗಿನ ಶೋಧಕಿಯನ್ನು ಸದಾ ಜಾಗ್ರತವಾಗಿಟ್ಟುಕೊಂಡವಳು. ಇತ್ತ ತನ್ನ ಸುತ್ತಲಿನ ಚಳವಳಿಯ ಯಾವ ಭರಾಟೆಗೂ ಸಿಲುಕದೇ, ಅತ್ತ ಅಲ್ಲಮ ಪ್ರಭುವಿನ ನಿರಾಕಾರ 'ಸಿದ್ಧಿ ಸಮಾಧಿ'ಗೂ ಒಳಗಾಗದೇ, ತಾನು ನೆಚ್ಚಿಕೊಂಡಿದ್ದುದರತ್ತ ಅಲೆಯುತ್ತಾ, ಸಿಕ್ಕ 'ಭಿಕ್ಷಾನ್ನ' ಗಳನ್ನುಣ್ಣುತ್ತಾ, ಹತ್ತು ಹಲವು 'ಕೆರೆ ಹಳ್ಳ ಬಾವಿಗಳ' 'ಬಹೂದಕ' ಕುಡಿಯುತ್ತಾ ಸಾಗಿದ ಒಂಟಿ ಜೀವ ಅಕ್ಕಮಹಾದೇವಿಯದು.

ಕೌಶಿಕನಂತಹ ಒಬ್ಬ ಸಾಮಾನ್ಯ ಪಾಳೆಯಗಾರನೊಬ್ಬನ ಸಂಪರ್ಕಕ್ಕೆ ಬಂದಳೆನ್ನಲಾದ ಈ ಅಕ್ಕ ಒಂಬೈನೂರು ವರುಷಗಳ ಕಾಲಮಾನಗಳ ವಿಕೋಪವನ್ನೂ ಮೀರಿ ಇಂದಿಗೂ ಉಳಿದಿರುವುದು ಅಚ್ಚರಿಯ ಸಂಗತಿಯಾಗಿದೆ. ಅಕ್ಕಮಹಾದೇವಿಯದು ಭಕ್ತಿ ಚಳವಳಿಯ ಚೌಕಟ್ಟನ್ನೂ ಮೀರಿ ಬೆಳೆದ ವ್ಯಕ್ತಿತ್ವ. ಆದ್ದರಿಂದಲೇ ಅವಳು ಅನೇಕ ಕಾಲಮಾನಗಳಲ್ಲಿ ಪ್ರಸ್ತುತಳಾಗುತ್ತಾ ಬಂದಿದ್ದಾಳೆ. ಹನ್ನೆರಡನೆಯ ಶತಮಾನದ ನಂತರ ಅವಳು ಮುಂದಿನ ಶತಮಾನಗಳಲ್ಲಿ ಹೇಗೆ ಬೆಳೆದು ಬಂದಳು ಎಂಬುದಕ್ಕೆ ಅವಳ ಬಗೆಗಿನ ನಾಲ್ಕೈದು ಕೃತಿಗಳನ್ನು ಬಿಟ್ಟರೆ ಬೇರೆ ಯಾವುದೇ ಚಾರಿತ್ರಿಕ ಆಧಾರಗಳೂ ದೊರಕುವುದಿಲ್ಲ. ಹೀಗೆ ಹನ್ನೆರಡನೇ ಶತಮಾನದಿಂದ ನೇರವಾಗಿ ಒಂದೇ ಜಿಗಿತದಲ್ಲಿ ೨೦-೨೧ನೇ ಶತಮಾನಕ್ಕೆ ಜಿಗಿದ ಅಕ್ಕಮಹಾದೇವಿ ನಮಗೆ ಎಷ್ಟು ಪ್ರಸ್ತುತಳಾಗಿದ್ದಾಳೆ ಎಂಬುದೇ ಮುಖ್ಯವಾಗುತ್ತದೆ.

ಮೊಗಲರ ಆಕ್ರಮಣದ ಅನಂತರದ ದಿನಗಳಲ್ಲಿ ಭಾರತೀಯ ಮಹಿಳೆಯರ ಸ್ಥಾನಮಾನಗಳಲ್ಲಿ ಬಹಳ ಇಳಿಮುಖತೆ ಕಂಡುಬಂದದ್ದು ಸರ್ವ ವಿದಿತ. ಆಗ ಪತಿ ಹಾಗೂ ಗೃಹದ ಪ್ರಶ್ನೆಯೇ ಮಹಿಳೆಯ ಪ್ರಶ್ನೆಯೂ ಆಗಿಬಿಟ್ಟಿದ್ದು ಅನಿವಾರ್ಯ. ಅದೇ ಅವರಿಗೆ ಮಾದರಿಯೂ ಗತಿಯೂ ಆಯಿತು. ಇವುಗಳನ್ನು ಜತನವಾಗಿ ಕಾಪಾಡುವುದರ ಮೂಲಕವೇ ಮಹಿಳೆಯರು ಭಾರತೀಯ ಸಂಸ್ಕೃತಿಯನ್ನು ರಕ್ಷಿಸಬೇಕೆಂಬ ನಂಬಿಕೆಯನ್ನು ಆಗ ಬಲವಾಗಿ ಮೂಡಿಸಲಾಯಿತು. ಇಂಥ ಸಿದ್ಧಮಾದರಿಗಳಿಗೆ ಒಗ್ಗಿಕೊಳ್ಳುತ್ತಾ ಹೋದ ಮಹಿಳೆಗೆ ಗೃಹ ಹಾಗೂ ಪತಿ ಈ ಎರಡನ್ನೂ "ಒಲೆಯೊಳಗಿಕ್ಕಿ" ನಡೆದ ಅಕ್ಕ ಮಾದರಿಯಾಗುವುದೂ ಸಾಧ್ಯವಿರಲಿಲ್ಲ. ಈ ಕಾರಣಕ್ಕಾಗಿಯೇ ಬಹುಶಃ ಜಾನಪದ ಗರತಿಯರಿಗೂ ಮಹಾದೇವಿ ಮಾದರಿಯಾಗದೇ ಹೋದಳೇನೋ. ಇಂತಹ ಸಿದ್ಧ ಮಾದರಿಗಳಿಂದ ಮುಕ್ತರಾಗಬೇಕೆಂಬ ಪ್ರಜ್ಞೆ ಮಹಿಳೆಯರಲ್ಲಿ ಮೂಡಿದುದೇ ಇಪ್ಪತ್ತನೆಯ ಶತಮಾನದಲ್ಲಾದ್ದರಿಂದ, ಒಮ್ಮೆಲೇ ಮೈಝಾಡಿಸಿಕೊಂಡು ಏಳಹತ್ತಿದ ಮಹಿಳೆಯರಲ್ಲಿ, ವಿಶೇಷವಾಗಿ ಕನ್ನಡದ ಮಹಿಳಾ ಕವಿಗಳಲ್ಲಿ ,ಅಕ್ಕನ ಆವೇಶ ಮೈದುಂಬಿದುದು ಅಚ್ಚರಿಯ ಸಂಗತಿಯೇನಲ್ಲ.

### ಅ) ಅನುಭಾವಿಕ ನೆಲೆ

ಅಕ್ಕಮಹಾದೇವಿಯನ್ನು ನಾವು ಗ್ರಹಿಸುವುದು ಭಕ್ತಿ ಪಂಥದಲ್ಲಿ ಹರಿದುಹೋದ ಒಬ್ಬ ಭಕ್ತಳಾಗಿ, ಸಾಧಕಿಯಾಗಿ. ಅವಳ ಈ ಭಕ್ತಿಯ ನೆಲೆಯಲ್ಲಿ ಕೂಡ ಒಂದು ಬೆಳವಣಿಗೆ ಇದೆ. ಮೊದಲನೆಯ ಹಂತದಲ್ಲಿ ಶಿವ, ಶುದ್ಧ ಭಕ್ತಿಯ ಸಾಕಾರ ಸ್ವರೂಪನಾಗಿ ಕಂಡುಬಂದರೆ, ಎರಡನೆಯ ಹಂತದಲ್ಲಿ ಅಂತಹುದೊಂದು ಸಾಕಾರ ರೂಪ ದ್ರವ್ಯವಾಗಿ ಕೈಗೆಟುಕದೇ ಹೋಗುತ್ತಿರುವ ನಿರಾಸೆಯ, ವಿಪ್ರಲಂಭದ ತಹತಹವಾಗಿ, ಯೋಗಕ್ಕಾಗಿ ಕಾಯುತ್ತಿರುವ ಪ್ರೇಮಿಯ ಹಂಬಲವಾಗಿ ಅಭಿವ್ಯಕ್ತಗೊಳ್ಳುತ್ತದೆ. ಆದರೆ ಮೂರನೆಯ ಹಂತದಲ್ಲಿ ಈ ಎಲ್ಲ ಮೂರ್ತ ಸಾಕಾರ ವಿವರಗಳನ್ನೂ ದಾಟಿ ಅವಳ ಭಕ್ತಿ ಅಮೂರ್ತಕ್ಕೆ ತೆರೆದುಕೊಂಡುಬಿಡುತ್ತದೆ. 'ಇಂದ್ರ ನೀಲ ಗಿರಿಯನೇರಿಕೊಂಡು ಕೊಂಬು ಕಹಳೆ ಬಾರಿಸುತ್ತಾ ಬರುವ ಶಿವ', 'ಹೊಳೆವ ಕೆಂಜಡೆಗಳ ಮಣಿಮುಕುಟದ ಸುಲಿಪಲ್ಲ' ಚೆಲುವನಾಗಿ ಕಾಣಿಸಿಕೊಳ್ಳುತ್ತಾನೆ. ಇಂತಹ ಚಿತ್ರಗಳಲ್ಲಿ ಮೈದಳೆಯುವ ಶಿವನಿಗಾಗಿ ಬರಗೆಟ್ಟು ಕಾಯುತ್ತಿದ್ದ ಅಕ್ಕ "ಭುವನಂ ಬೆಳಗುವ ದಿವ್ಯ ಸ್ವರೂಪನ ಕಂಡೆನ್ನ ಕಂಗಳ ಬರಹಿಂಗಿತ್ತಿಂದು" ಎಂದು ಸಂತೃಪ್ತಳಾಗುತ್ತಾಳೆ. ಬಹುಶಃ ಶ್ರೀಕೃಷ್ಣನ ಮಣಿ ಮುಕುಟವನ್ನು ಶಿವನಿಗಿಟ್ಟು ನೋಡಿದ ವಿಶಿಷ್ಟತೆ ಅಕ್ಕನದು ಮಾತ್ರವೆನಿಸುತ್ತದೆ. ಇದಕ್ಕೆ ಅಂದಿನ ಭಕ್ತಿ ಪಂಥವೂ ಕಾರಣವಾಗಿದ್ದಿರಬಹುದು. ಪ್ರಾರಂಭದ ಹಂತದಲ್ಲಿಯೇ ನಿಜವಾದ ಭಕ್ತಿಯ ಬಗೆಗೆ ಅವಳಿಗೆ ಸ್ಪಷ್ಟ ಕಲ್ಪನೆ ಇದೆ. 'ತನುಕರಗದವರಲ್ಲಿ, ಮನಕರಗದವರಲ್ಲಿ, ಅರಿವು ಕಣ್ತೆರೆಯದವರಲ್ಲಿ' 'ಮಜ್ಜನವನ್ನಾಗಲೀ ... ಪುಷ್ಪ ಆರತಿಗಳನ್ನಾಗಲೀ' ಅವಳ ಶಿವ ಒಳಗೊಳ್ಳನು. ಇಂತಹ ಒಂದು ಆಕೃತಿಯು ಅವಳಿಗೆ ಕೈಗೆಟುಕದಾಗಿದೆ. ಆದ್ದರಿಂದಲೇ ತಾನು 'ನೊಂದ' ಕನಸನ್ನು ಕಂಡುದಾಗಿ ಹೇಳಿಕೊಳ್ಳುತ್ತಾಳೆ. ಯಾಕೆಂದರೆ ಅವಳ ಕೈಮೀರಿ ಹೋಗುತ್ತಿದ್ದ ಶಿವನನ್ನು ಕನಸಿನಲ್ಲಿ ಬೆನ್ನಟ್ಟಿ ಕಣ್ತೆರದಾಕ್ಷಣ ಕೈ ಹತ್ತದೇ ಹೋದ ದುಃಖ ಅವಳಿಗಿದೆ. 'ಏರಿಲ್ಲದ ಗಾಯದಲ್ಲಿ ನೊಂದು, ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದು' ತನ್ನ ವಿಯೋಗದ ದಳ್ಳುರಿಯನ್ನು ವ್ಯಕ್ತಪಡಿಸುತ್ತಾಳೆ. ಹೊಲಬು ತಪ್ಪಿ ಈ ಮೂರ್ತ ವಿವರಗಳಲ್ಲಿ ಅಲೆಯುತ್ತಿದ್ದ ಅವಳ ಹೋರಾಟಕ್ಕೊಂದು ನಿಲುಗಡೆ ಪ್ರಾಪ್ತವಾಗುತ್ತದೆ. ಸಾಕಾರವಾಗಿ ಅವಳಲ್ಲಿ ಬೆಳೆಯ ಹತ್ತಿದ ಶಿವ ಅವಳನ್ನೂ ಬೆಳೆಸುತ್ತಾ ಜಗದಗಲ ಮುಗಿಲಗಲ ವ್ಯಾಪಿಸಿಬಿಡುತ್ತಾನೆ. ಆಗ ಈ ಎಲ್ಲಾ ಸಾಕಾರ ವಿವರಗಳೂ ಅವಳ ಕೈಬಿಟ್ಟು ಹೋಗಿಬಿಡುತ್ತವೆ. ಲೌಕಿಕವಾದ ಎಲ್ಲ ಧರ್ಮ, ಜಾತಿ, ಪ್ರಾದೇಶಿಕ ಎಲ್ಲೆಕಟ್ಟು ಈ ಎಲ್ಲಾ ಉಪಾಧಿಗಳನ್ನು ಹರಿದು ಅವಳ ಶಿವ ಬೆಳೆದುಬಿಡುತ್ತಾನೆ. ಜೊತೆಗೆ ಅವನ ಮಹಾದೇವಿಯೂ.

ಮಣಿ ಮುಕುಟದಿಂದ ಶಿವನನ್ನು ಅಲಂಕರಿಸಿದ ಅದೇ ಅಕ್ಕ ಈಗ ಅದೇ ಶಿವನನ್ನು ತನ್ನ ಅನುಭಾವಕ್ಕೆ ತಂದುಕೊಳ್ಳಲು ಅಮೂರ್ತದ, ನಿರಾಕಾರದ ಬೆನ್ನು ಹತ್ತುತ್ತಾಳೆ. ಅವನು 'ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಭವವಿಲ್ಲದ, ಭಯವಿಲ್ಲದ, ಕುಲಸೀಮೆಯಲ್ಲದ ನಿರ್ಭಯ' ಚೆಲುವನಾಗಿದ್ದಾನೆ. ಈ ಶಿವ ರೂಪಿಲ್ಲದವನೂ ಆದರೆ ಚೆಲುವನೂ ಆಗಿದ್ದಾನೆ. ಈ ಚೆಲುವೆಂಬುದು ಶರೀರಕ್ಕೆ ಸಂಬಂಧಿಸಿದುದಲ್ಲ , ಕಾಣುವ ಕಣ್ಣಿಗೆ ಅನುಭವಕ್ಕೆ ಸಂಬಂಧಿಸಿದುದು. ಅವಳ ಮೊದಲ ಶಿವನ ಮೂರ್ತದ ಕಲ್ಪನೆಗೂ ಆನಂತರದ ನಿರಾಕಾರದ ಶಿವನ ಕಲ್ಪನೆಗೂ ಬಹಳ ಅಂತರವಿರುವಂತೆ, ಅವಳ ಶಿವಭಕ್ತಿ ಬೆಳೆದುದರ ಪ್ರತೀಕವೂ ಆಗಿದೆ. ಅವಳ ಮೊದಲ ಶಿವನ ಚೆಲುವೆನ್ನುವುದು ಶರೀರದ ಆಕೃತಿಗೆ ಸಂಬಂಧಿಸಿದ್ದು. ಆದ್ದರಿಂದಲೇ ಅದು ಅಶಾಶ್ವತವಾದದ್ದು. ಅದಕ್ಕೆ ನಾಶವುಂಟು. ಅದರಿಂದ ದೊರಕುವ ಸುಖ ಕೂಡ ಕ್ಷಣಿಕವಾದುದು. ಆದರೆ ಅವಳ ಆಕೃತಿ ರಹಿತ ಶಿವ ಕಲ್ಪನೆಗೆ ಮಾತ್ರ ಸಾವು ಕೇಡೆಂಬುದಿಲ್ಲ. ಅದು

ಶಾಶ್ವತವಾದದ್ದರಿಂದ, ಅದರಿಂದ ದೊರಕುವ ಸುಖ ಕೂಡ ಶಾಶ್ವತವಾದದ್ದು. ಅಕ್ಕನಿಗೆ ಬೇಕಾಗಿರುವುದು ಶಾಶ್ವತವಾದದ್ದೇ ಹೊರತು ಸಾಯುವಂತಹುದಲ್ಲ. ಇಂತಹ ಶಿವನನ್ನು 'ಕೂಡಿ ಕುಲವಳಿದ'ವಳು ತಾನು ಎಂದು ಹೇಳಿಕೊಳ್ಳುತ್ತಾಳೆ. ಇದು ಅಕ್ಕನ ಶಿವಪ್ರೇಮ ಭಕ್ತಿಯ ಹಂತದಿಂದ ಅನುಭಾವಕ್ಕೆ ಏರಿದ ಹಂತ ಕೂಡ ಹೌದು. ಈ ಹಂತದಲ್ಲಿ ಅವಳ ಮುಂದೆ ಯಾವ ಆಕೃತಿಗಳಲ್ಲಿ ಲಾಂಛನ ಮುದ್ರೆಗಳಿಲ್ಲ. ಕೇವಲ ಬಯಕೆ ಬಾಯಾರಿ ಹೋರಾಡಿ ಪಡೆದ ಧನ್ಯತೆ ಇದೆ. ಆ ಧನ್ಯತೆ ಒದಗಿಸಿಕೊಟ್ಟ ಆನಂದವಿದೆ. ಇಂಥ ಆನಂದಕ್ಕೆ ಬಾಧಕವಾದ ಎಲ್ಲ ಜಾತಿ, ಮತ, ಧರ್ಮ ಮುಂತಾದ ಲೌಕಿಕ ಎಲ್ಲೆಕಟ್ಟುಗಳೆಲ್ಲಾ ಸುಳ್ಳೆಂದು ಸಾರುವ ಆನಂದವಿದು. ಇಡೀ ಮಾನವತೆಯನ್ನು ತನ್ನದೆಂದು ತಬ್ಬಿಕೊಳ್ಳುವ ಆನಂದವಿದು.

ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಟ್ಟು ಈ ಯಾಂತ್ರಿಕ ಯುಗದಲ್ಲಿ ಓಡುತ್ತಿರುವ ನಮಗೋ ಈ ಲಾಂಛನಗಳೇ, ಆಕೃತಿಗಳೇ ಮುಖ್ಯವಾಗಿಬಿಟ್ಟಿವೆ. ಈ ಆಕೃತಿ ಲಾಂಛನಗಳು ಕೇವಲ ಹಾದಿ, ಸಾಧನಗಳಾಗದೇ ಅವುಗಳೇ ನಮಗೆ ಗಮ್ಯವಾಗಿಬಿಟ್ಟಿವೆ. ಆದ್ದರಿಂದಲೇ ಅವುಗಳು ನಮ್ಮ ಕೈಬಿಟ್ಟು ಹೋಗದಂತೆ ಭದ್ರವಾಗಿ ಹಿಡಿದುಕೊಂಡು ಪ್ರಾರಂಭದ ಮಜಲುಗಳಲ್ಲಿ ಕುಳಿತಲ್ಲಿಯೇ ಕುಳಿತುಬಿಟ್ಟಿದ್ದೇವೆ. ಆದ್ದರಿಂದಲೇ ಈ ಆಕೃತಿ, ಲಾಂಛನಗಳ ನಡುವಿನ ತಿಕ್ಕಾಟ, ಹೋರಾಟಗಳು ತಪ್ಪುತ್ತಿಲ್ಲ. ಆದರೆ ಈ ಎಲ್ಲವನ್ನೂ ದಾಟಿದ ಸ್ಥಿತಿಯಲ್ಲಿ ಮಾತ್ರ ಲಾಂಛನಗಳೇ ಇರುವುದಿಲ್ಲ. ಈ ಸಂದರ್ಭದಲ್ಲಿ ಅಲ್ಲಮಪ್ರಭುವಿನ ಒಂದು ವಚನ ನೆನಪಾಗುತ್ತದೆ.

*''ಕಟ್ಟಿದಾತ ಭಕ್ತನಪ್ಪನೆ? ಕೆಡಹಿದಾತ*
*ದ್ರೋಹಿಯಪ್ಪನೆ?*
*ಲಿಂಗವ ಕಟ್ಟಲಿಕ್ಕೆ ತನ್ನ ಕೈಯೊಳಗಿಪ್ಪದೆ? ಕೆಡಹಲಿಕ್ಕೆ*
*ಬೀಳಬಲ್ಲುದೆ?*
*ಆ ಲಿಂಗ ಬಿದ್ದ ಬಳಿಕ ಜಗತ್ತು ಉಳಿಯಬಲ್ಲುದೆ?*
*...............................................*
*ಕೊನೆಗೆ ಲಿಂಗವು ಬಿದ್ದಿತ್ತೆಂದು ನಿಂದಿಸಿ ನುಡಿವ*
*ದ್ರೋಹಿಯ*
*ಮಾತ ಕೇಳಲಾಗದು ಕಾಣಾ ಗುಹೇಶ್ವರಾ''..*

ಕೋಮುವಾದದ ಬಿರುಸಿನಲ್ಲಿ ಮುಟ್ಟಿದರೆ ಸಿಡಿಯುವ ಆಧುನಿಕ ಮನುಷ್ಯ ನಮ್ಮ ಚರಿತ್ರೆಯಿಂದ ಪಾಠ ಕಲಿತುಕೊಳ್ಳದಿದ್ದರೆ ಗತಿಯೇ ಇಲ್ಲ.

**ಆ) ಹೆಣ್ಣುಕಾಯದ ನೆಲೆ**

ಹೆಣ್ಣಿನ ದೇಹದ ಬಗೆಗೆ ಸಮಾಜದಲ್ಲಿ ಪೂರ್ವಗ್ರಹ ಪೀಡಿತವಾದ ಒಂದು ಪರಿಕಲ್ಪನೆ ಇದೆ. ಅದೆಂದರೆ ಈ ಹೆಣ್ಣು ಶರೀರ ಇರುವುದು ಪುರುಷನ ಉಪಭೋಗಕ್ಕಾಗಿ ಮಾತ್ರ ಎನ್ನುವುದು. ಪ್ರಾಚೀನ ಕಾವ್ಯಗಳಿಂದ ಹಿಡಿದು ಇಂದಿನ ಕೆಟ್ಟ ಸಿನಿಮಾಗಳವರೆಗೆ ನಾವು ಕಾಣುತ್ತಿರುವುದು ಉಪಭೋಗಕ್ಕೆ ಪಕ್ಕಾದ ಈ ಹೆಣ್ಣು ಶರೀರವನ್ನೇ. ಕಾವ್ಯಗಳಿಗಾದರೂ ಪ್ರೌಢ ಓದುಗರಿದ್ದಾರೆ. ಆದರೆ ಸಿನಿಮಾ ಒಂದು ದೃಶ್ಯಮಾಧ್ಯಮವಾದ್ದರಿಂದ ಅದರ ಪರಿಣಾಮ ಮಾತ್ರ ಬಹಳ ಅಪಾಯಕಾರಿಯಾದುದು. ಇಡೀ ಸಮಾಜದ ಮೇಲೆ ಹೆಣ್ಣಿನ ಬಗೆಗಿನ ತಪ್ಪು ಅಭಿಪ್ರಾಯಗಳನ್ನೂ ಇವು ಮೂಡಿಸುತ್ತವೆ. ಇದನ್ನು ಬರೆಯುವ ಉದ್ದೇಶವೆಂದರೆ, ಹೆಣ್ಣುಕಾಯದ ಬಗೆಗೆ ಪಿತೃಪ್ರಧಾನ ವ್ಯವಸ್ಥೆಯೊಂದು ರೂಪಿಸಿದ ಇಂತಹ ತಪ್ಪು ಕಲ್ಪನೆಗಳನ್ನು ಧೂಳೀಪಟ ಮಾಡಿದವಳು ಮಹಾದೇವಿ. ಜೇಡರ ದಾಸಿಮಯ್ಯ ಅಕ್ಕನಿಗೂ ಮುನ್ನ ಈ

## ಕಾಮ್ರೇಡ್ ಎಂದು ಕರೆದುಕೊಳ್ಳುವ ಕಾಂಗ್ರೆಸ್ಸಿಗ ಕಂಟೇಸ್ವಾಮಿಗೊಂದು ಕಿವಿಮಾತು

ಈ ಜಗತ್ತು ಹೀಗೇ
ಯಾರನ್ನೂ ನಿರಾಕರಿಸುವುದಿಲ್ಲ
ಯಾರನ್ನೂ ಸ್ಥಿರೀಕರಿಸುವುದಿಲ್ಲ

ನೋಡು ನೀನಿದ್ದೀಯೆ ನಾನಿದ್ದೇನೆ
ಅವನಿದ್ದಾನೆ ಮೂವರೂ ಮಾತು ಬಿಟ್ಟವರು
ಮುಖ ಕಂಡರೆ ಅರುಗಾಗುವವರು
ಹಾಗೆಂದು ನೆಲ ಮುನಿದುಕೊಂಡಿದೆಯಾ?
ಗಾಳಿ ಸಿಟೆದುಕೊಂಡಿದೆಯ?
ನಾನು ಬಿಟ್ಟ ಉಸಿರು ಅವನ ಮುಟ್ಟಿ
ನಿನ್ನ ತಟ್ಟಿ ಒಳಗೊಂದು ಹೊಸಸೃಷ್ಟಿ.

ಪಂಚಭೂತದ ಗುಣವೆ
ಪಂಚಾಗ್ನಿ ಮಧ್ಯಸ್ಥ ಋಣ
ಅದು ಬಿಟ್ಟು ಇದು ಬಿಟ್ಟು
ಶೂ ಬಳೆಯಲ್ಲಿ ಗೂಢಗಂಧ

ನೀನಿಲ್ಲ ಎಂದಾಗ ಮನಸು ಮಾಯಾಜಾಲ
ಮಾತು ಹಂಗು ಹರಿದ ಗಾಳಿಮಿಂಡ
ಇದ್ದಾಗ ನೆದರು ಕೆರೆದೆಬ್ಬಿಸಿದ ಕೆನೆತ
ನೀತಿ ನ್ಯಾಯದ ಕಟ್ಟುಬಂಧ ಕಳೆದ ಕಪಿಮುಷ್ಟಿ
ಅಂದುಕೊಳ್ಳುತ್ತೇನೆ ಅಂತಃಕರಣದ ಕರೆಗೆ
ಮೃದುವಾಗು ಮೃದುವಾಗು ಹದವಾಗು ಎಂದು
ತಪ್ಪಿಲ್ಲ ಗಾಳಿ ಗುದ್ದುವುದು
ಆಗುತ್ತಿಲ್ಲ ಮಾತು ಜ್ಯೋತಿರ್ಲಿಂಗ



ನನ್ನ ಮಾತು ನನಗೇ ಇಲ್ಲದಾಗ
ನಿನಗೆ ಹೇಳಲಿ ಹೇಗೆ
ಹೇಳದಿರಲಿ ಹೇಗೆ?
ಉಭಯ ಸಂಕಟದಲ್ಲಿ
ನೀನು ಫಿರ್ಯಾದಿ ನಾನು ಅಪರಾಧಿ
ನಮ್ಮಿಬ್ಬರ ನಡುವೆ ಅವನಿದ್ದೂ ಇಲ್ಲ

ಇಲ್ಲವೆಂದರೆ ಅವನೆ ಎಲ್ಲ
ಅದು ನಿನ್ನನ್ನು ನೀನು
ನನ್ನನ್ನು ನಾನು
ನಮ್ಮಿಬ್ಬರಲ್ಲೂ ಅವ-ಲೋಕಿಸಿದಾಗ

ನಾನು ನಿದ್ದೆ ಮಾಡುವಾಗ ಸದ್ದಿಲ್ಲದೆ ಬರುತ್ತೀಯ
ನಾನು ಕೆರಳಿ ಮತ್ತೆ ಸುತ್ತೆಲ್ಲ ದುರ್ಗಂಧ
ಕಟ್ಟಿಸಿದ ಮಾತೆಲ್ಲ ಥಟ್ಟನೆ ಬಿದ್ದು
ನನ್ನೊಳಗೆ ನೀನು ರಕ್ತಬೀಜಾಸುರ

ನಿನ್ನ ನೆನಪೆಂದರೆ ಚೆಂಕಿ
ನಮ್ಮೂರಲ್ಲಿ ಚೆಂಕಿಗೆ ಮತ್ತೊಂದು ಅರ್ಥ
ಬೇಡ ಬಿಡು - ಬೇಲಿ ಬದಿಯ ಅಸಹ್ಯ

ನನ್ನ ಜೇಬಿಗೆ ಕೈಹಾಕಿದೆ ನೀನು
ವಿಚಲಿತ ನಾನು
ನನ್ನ ಶ್ರಮಕ್ಕೆ ಲಗ್ಗೆ ಹಾಕಿದೆ ನೀನು
ಉತ್ಸಾಹಿತ ನಾನು
ಮಾತಿನ ಮಂಟಪ ಕಟ್ಟಿದೆ ನೀನು
ಶಬ್ದದೊಳಗಣ ನಿಶಬ್ದ ನಾನು.

**ಪ್ರೊ|| ಎಸ್. ಜಿ. ಸಿದ್ದರಾಮಯ್ಯ**
'ಹೊಂಬಡಳಗು', ನಳಂದ ಶಾಲೆ ಪಕ್ಕ, ಶೆಟ್ಟಿಹಳ್ಳಿಗೇಟ್ ಹತ್ತಿರ
ತುಮಕೂರು - ೫೭೨೧೦೩

ಆಲೋಚನೆಯನ್ನು ಮಾಡಿದ್ದಾನೆ.

*'ಮೊಲೆ ಮೂಡಿ ಬಂದರೆ ಹೆಣ್ಣೆಂಬರು,*
*ಗಡ್ಡ ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿದ ಆತ್ಮ ಹೆಣ್ಣು ಅಲ್ಲ ಗಂಡೂ ಅಲ್ಲ*
*ಕಾಣಾ ರಾಮನಾಥ.'*

ಮೊಲೆ ಮುಡಿಗಳಾಗಲೀ, ಗಡ್ಡ ಮೀಸೆಗಳಾಗಲೀ ಜೈವಿಕ ಭಿನ್ನತೆಗಳೇ ಹೊರತು ಸಾಮಾಜಿಕ ಭೇದಗಳಲ್ಲ. ಯಾಕೆಂದರೆ ಈ ಎರಡು ಅವಕುಂಠನದೊಳಗೆ ತುಡಿಯುತ್ತಿರುವ ಚೈತನ್ಯ ಮಾತ್ರ ಒಂದೇ ಆಗಿರುತ್ತದೆ. ''ಹೆಣ್ಣು ಕೇವಲ ಸ್ತ್ರೀಲಿಂಗಿಯಾಗಿ ಹುಟ್ಟುತ್ತಾಳೆ. ಆದರೆ ಸಮಾಜ ಅವಳನ್ನು ಹೆಣ್ಣಾಗಿ ಬೆಳೆಸುತ್ತದೆ'' (ವಿಜಯಾ ದಬ್ಬೆ, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಪು. ೬೦). ಈ ದೇಹಕ್ಕೆ ಇರುವ ಸಾಧ್ಯತೆ ಒಂದೇ, ಭೋಗದ ನಿಜವೊಂದೇ ಎನ್ನುವ ಸುಳ್ಳನ್ನು ಅದು ಬಲವತ್ತರವಾಗಿ ನಮ್ಮ ಸಂಸ್ಕೃತಿಯಲ್ಲಿ ಬೆಳೆಸಿಬಿಟ್ಟಿದೆ. ಹೆಣ್ಣಿನ ಬಗೆಗಾದ ಈ ಸಾಂಸ್ಕೃತಿಕ ಅಪಮೌಲ್ಯೀಕರಣವನ್ನು ಒಂಬೈನೂರು ವರುಷಗಳ ಹಿಂದೆಯೇ ಪ್ರಶ್ನಿಸಿದ ದಿಟ್ಟ ಹೆಣ್ಣು ಅಕ್ಕ ಎಂಬ ಕಾರಣಕ್ಕಾಗಿ ಅವಳು ನಮಗೆ ಮುಖ್ಯಳಾಗುತ್ತಾಳೆ.

*''ಉಬ್ಬಿಹ ಮೊಲೆಯ ಭರದ ಜವ್ವನದ ಚೆಲುವು*
*ಕಂಡು ಬಂದಿರಣ್ಣಾ....*
*ಅಣ್ಣಾ ನಾನು ಸೂಳೆಯಲ್ಲ ಅಣ್ಣ ನಾನು ಹೆಂಗೂಸಲ್ಲ*
*ಮತ್ತೆ ನನ್ನ ಕಂಡು ಆರೆಂದು ಬಂದಿರಣ್ಣಾ...*
*ಚೆನ್ನಮಲ್ಲಿಕಾರ್ಜುನ ಮಿಕ್ಕಿಹ ಪುರುಷರು ನಮಗಾಗದ*
*ಮೊರೆ ನೋಡಣ್ಣಾ.'''*

ಹೆಣ್ಣಿಗೆ ಇರುವ ಅಸ್ತಿತ್ವದ ಸಾಧ್ಯತೆಗಳು ಎರಡೇ: ಒಂದು ಸತಿ, ಇಲ್ಲವಾದರೆ ಇನ್ನೊಂದು ಸೂಳೆ. ಈ ಎರಡೂ ಅತಿಗಳ ಮಧ್ಯೆ ನಿಜವಾದ ಅಸ್ತಿತ್ವವಿದೆ. ಆದರೆ ಅದು ಸಾಮಾಜೀಕರಣಗೊಂಡಿದೆ. ಅಂತಹ ದುರಂತವನ್ನು ಅಕ್ಕ ಬಯಲಾಗಿಸುತ್ತಾಳೆ.

*'ನಾಣಮರೆಯ ನೂಲು ಸಡಿಲೆ*
*ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿ'*

ಈ ಜೈವಿಕ ಭಿನ್ನತೆಯ ಹೊರ ಆವರಣವೆಂಬುದು ಒಳಗಿನ ಶಕ್ತಿಯನ್ನು ಪರಸ್ಪರ ಆತ್ಮಸಾತ್ ಮಾಡಿಕೊಳ್ಳುವಲ್ಲಿ ಹೇಗೆ ಭ್ರಾಮಕವಾದ ತಡೆಯೊನ್ನೊಡ್ಡಿದೆ, ಎಂಬುದನ್ನು ಸಶಕ್ತವಾಗಿ ಅಭಿವ್ಯಕ್ತಿಸುತ್ತಾಳೆ. ಅವಳ ಕಣ್ಣ ಮುಂದೆ ಅವಳ ಒಳಹೊರಗನ್ನು ತಿಳಿದ ಚೆನ್ನಮಲ್ಲಿಕಾರ್ಜುನನಿರುವಾಗ ಅವನಿಂದ ಏನನ್ನೋ ಬಚ್ಚಿಡುವ ಮನುಷ್ಯರ ಹುಂಬತನ ಅವಳಿಗೆ ನಗೆಪಾಟಲಾಗಿ ಕಾಣುತ್ತದೆ.

ಹೀಗೆ ದೈಹಿಕ ಅಸ್ತಿತ್ವದ ಬಗೆಗಿರುವ ವೈರುಧ್ಯ ಕುರಿತು ಪ್ರಶ್ನೆ ಕೇಳುತ್ತಾ ಹೊರಟ ಅಕ್ಕನ ಈ ಕಾಯದ ಪರಿಕಲ್ಪನೆ ಕೂಡ ಬೆಳೆಯುತ್ತ ಹೋಗುತ್ತದೆ. ಕಾಯದ ಬಗ್ಗೆ ಬಹುಶಃ ಅಕ್ಕನಷ್ಟು ಮಾತನಾಡಿದವರು ಬಹಳ ವಿರಳವೆಂದೇ ಹೇಳಬೇಕು. ಕಾಯವೆಂಬುದು ಇಡೀ ರೂಪಕವಾಗಿ ಕೆಲಸ ಮಾಡುತ್ತದೆ, ಇಲ್ಲಿ.

ಉಪಭೋಗಕ್ಕೆ ಸಾಧನವಾಗಿದೆಯೆಂಬ ಈ ಒಡಲೊಳಗೆ ಅನೇಕ ಹೋರಾಟಗಳಿವೆ, ಅದನ್ನು ನಿಯಂತ್ರಿಸುವ ಮನಸ್ಸೊಂದಿದೆ. ಅದಕ್ಕೆ ಇಹ ಪರಗಳ ದ್ವಂದ್ವವಿದೆ, ದುಮ್ಮಾನಗಳಿವೆ, ಕನಸು ನನಸಾಗದ ಖಿನ್ನತೆಯ ಕ್ಷಣಗಳಿವೆ. ಆದರೆ ಹೆಣ್ಣೊಬ್ಬಳಿಗೆ ಇಂತಹ ಸಂಕೀರ್ಣವಾದ ಮನೋಪಾತಳಿಯೊಂದು ಇರುವುದರ ಅರಿವು ಲೋಕಕ್ಕಿಲ್ಲ. ಇದ್ದರೂ ಪಿತೃಪ್ರಧಾನತೆಯ ಅಹಂಕಾರಗಳು ಅದನ್ನು ಒಪ್ಪಿಕೊಳ್ಳುತ್ತಿಲ್ಲ. ಅಕ್ಕ ನಿಶ್ಚಿತ ಗುರಿಯೊಂದನ್ನು ತಲುಪಲು ಈ ದೇಹ ಪಡುವ ಹೋರಾಟವನ್ನು ಅತ್ಯಂತ ತೀವ್ರವಾಗಿ ದಾಖಲಿಸುತ್ತಲೇ ನಮ್ಮ ಸಾಂಸ್ಕೃತಿಕ ಸುಳ್ಳುಗಳಿಗೆ ನಿಜದ ಕನ್ನಡಿಯನ್ನು ಹಿಡಿಯುತ್ತಾಳೆ. ಅವಳು ತಲುಪಿಬಿಟ್ಟ ಗುರಿಗಿಂತ ಅವಳ ಹೋರಾಟದ ಸ್ವರೂಪವೇ ನಮಗೆ ಮುಖ್ಯವಾಗುತ್ತದೆ. ಯಾಕೆಂದರೆ ಈ ಹೋರಾಟದಲ್ಲಿ ಮಾತ್ರ ಜೀವಂತಿಕೆ ಇರುವುದರಿಂದ, ಆಧುನಿಕ ಮನುಷ್ಯರ ಹೋರಾಟದ ಸ್ವರೂಪವನ್ನು ಅಕ್ಕನ ಹೋರಾಟದ ಜೊತೆಗೆ ಸಮೀಕರಿಸಿಕೊಳ್ಳಬಹುದಾಗಿದೆ.

*ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ*
*ತನ್ನ ನೂಲು ತನ್ನನೆ ಸುತ್ತಿ ಸಾವಂತೆ*
*ಮನ ಬಂದುದನು ಬಯಸಿ ಬೇಯುತ್ತಿದ್ದೆನಯ್ಯಾ*
*ಎನ್ನ ಮನದ ದುರಾಶೆಯ ಮಾಣಿಸಿ*
*ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ.*

ಈ ದೇಹದೊಳಗಿನ ಉರವಣೆಗಳು, ಭ್ರಮೆಗಳು ತನ್ನೊಳಗೆ ಅಡಗಿಕೊಂಡು ಈ ಗೂಡಿನ ಜೊತೆಗೆ ತನ್ನನ್ನೂ ನಾಶಮಾಡಿಬಿಡುವ ಅರಿವು ಅವಳಿಗಿದೆ. ಆದರೆ ಚೆನ್ನಮಲ್ಲಿಕಾರ್ಜುನನನ್ನು ಕಾಣುವವರೆಗೆ ಈ ದೇಹ ಇರಬೇಕಾಗಿದೆ. ಆದ್ದರಿಂದಲೇ ಈ ದೈಹಿಕ ಪರಿಭಾಷೆಗಳ ನೆಲೆಯಲ್ಲಿಯೇ ಅವಳ ಪ್ರೇಮೋತ್ಕಟತೆ ವ್ಯಕ್ತವಾಗುತ್ತದೆ.

*''ಹಗಲಿನ ಕೂಟಕ್ಕೆ ಹೋರಿ ಬೆಂಡಾದೆ*
*ಇರುಳಿನ ಕೂಟಕ್ಕೆ ಇರಿದು ಹತ್ತಿದೆ...''*

''ಅಪ್ಪಿದಡೆ ಅಸ್ಥಿಗಳು ನುಗ್ಗಾಗಬೇಕು.'' ಈ ಎಲ್ಲಾ ಕಡೆ ಅಕ್ಕ ಕಾಣುವುದು ತಾನೊಲಿದವನೊಡನೆ ಅವಿನಾ ಸಂಬಂಧವನ್ನು. ''ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ, ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಮದುವೆಯಾದನು.'' ಇವೆಲ್ಲವೂ ವಾಸ್ತವಿಕವಾಗಿ ಅಸಾಧ್ಯವಾದುದು. ಆದರೆ ಒಂದಕ್ಕೊಂದು ಪೂರಕವಾದುದು. ಕಾಲು ತಲೆಗಳ ಅಭಿನ್ನವಾದ ದೇಹದ ಅಂಗಗಳಂತೆ ಅಕ್ಕ ಹಾಗೂ ಚೆನ್ನಮಲ್ಲಿಕಾರ್ಜುನನ ಸಂಬಂಧವೂ ಅಭಿನ್ನವಾದುದು. ಇದು ದೇಹಾತ್ಮಗಳಂತೆ ಒಂದಕ್ಕೊಂದು ಪೂರಕವಾದುದು. ಅರ್ಧನಾರೀಶ್ವರರಂತೆ ಅಭಿನ್ನವಾದುದು. ಶಿವನಿಲ್ಲದೆ ಶಕ್ತಿಯಿಲ್ಲ, ಶಕ್ತಿ ಇಲ್ಲದ ಶಿವ ಶವನಾಗಿಬಿಡುತ್ತಾನೆ. ಇದು ಸ್ತ್ರೀ ಪುರುಷರ ನಡುವಿನ ಆರೋಗ್ಯಪೂರ್ಣ ಸಂಬಂಧಗಳ ಅತ್ಯುತ್ಕಟವಾದ ಹಂತ ಕೂಡ. ಆದರೆ ಇದು ಸಾಮಾಜಿಕ ವಾಸವತೆಯಲ್ಲಿ ಸಾಧ್ಯವಿಲ್ಲವಾಗಿದೆ. ನಿಜದಲ್ಲಿ ಸ್ತ್ರೀ ಪುರುಷರ ನಡುವಿನ ಈ ಸಂಬಂಧವೆಂಬುದು ಬುಡಮೇಲಾಗಿದೆ. ಇಲ್ಲಿ ಶಿವನ ಅರ್ಧಾಂಗಿಯಾದ ಶಕ್ತಿಗೆ ಪಾರ್ಶ್ವವಾಯು ಹಿಡಿದಿದೆ. ಶಿವನ ಊರ್ಧ್ವಮುಖ ಬೆಳವಣಿಗೆಗೆ ಇಲ್ಲಿ ಶಕ್ತಿ ಮಾರಕಳಾಗಿದ್ದಾಳೆ. ಮಾಯೆಯಾಗಿದ್ದಾಳೆ. ನಿಜದ ಸ್ಥಿತಿಯಲ್ಲಿ ಮೇಲಿನ ಆದರ್ಶ ಸಂಬಂಧದ ಸ್ಥಿತಿಯೊಂದು ಅಸಾಧ್ಯವಾಗಿರುವುದರಿಂದ ಅಕ್ಕ 'ಬೆಡಗಿನ' ಮರೆಯಲ್ಲಿ ಅಡಗಿಕೊಳ್ಳುತ್ತಾಳೆ. ಆದ್ದರಿಂದಲೇ ವಾಸ್ತವಿಕ ಕೌಟುಂಬಿಕ ನೆಲೆಯಲ್ಲಿ ಸ್ತ್ರೀ ಪುರುಷ ನಡುವಿನ ಈ ಸಂಬಂಧವೊಂದು ದುಃಸಾಧ್ಯವಾಗಿರುವಾಗ ಇದರ ಆದರ್ಶ ಸ್ವರೂಪವೊಂದು ಅವಳ ಕಲ್ಪನೆಯಲ್ಲಿ ಸಾಧ್ಯವಾಗುತ್ತದೆ.

ಹೀಗೆ ಪ್ರೇಮೋತ್ಕಟ ಗಳಿಗೆಗಳನ್ನು ಶಿವನೊಡನೆ ಹಂಚಿಕೊಳ್ಳುವ ಅಕ್ಕನೇ ಈ ದೇಹವನ್ನು 'ಮಾಯೆ' 'ಮೂತ್ರವು ಬಿಂದು ಒಸರುವ ತಾಣ' ಎಂದು ತನ್ನನ್ನು ಹಿಂಬಾಲಿಸಿ ಬಂದವರಿಗೆ ದೇಹದ ಬಗೆಗಿನ ಭ್ರಮೆಯನ್ನು ಕಳೆಯುತ್ತಾಳೆ. ಇದು ಮೇಲ್ನೋಟಕ್ಕೆ ವೈರುಧ್ಯವಾಗಿ ಕಾಣುತ್ತದೆ. ಈ ದೇಹಕ್ಕೆ ಎರಡು ಪರಸ್ಪರ ವಿರುದ್ಧ ರೀತಿಯ ಉಪಯೋಗದ ಸಾಧ್ಯತೆ ಇದೆ. ಒಂದು ಕ್ರಿಯಾತ್ಮಕ ಸಾಧ್ಯತೆಯಾದರೆ ಇನ್ನೊಂದು ಜಡವಾದದ್ದು, ಋಣಾತ್ಮಕವಾದದ್ದು, ವಿನಾಶಕಾರಿಯಾದದ್ದು. ಅಕ್ಕಮಹಾದೇವಿಯನ್ನು ಪೀಡಿಸಬಂದ ಪುರುಷರು ಅವಳ ದೇಹವನ್ನು ವಿನಾಶದ ಸಾಧನವನ್ನಾಗಿ ಮಾಡಿಕೊಳ್ಳಲು ಹೊರಟವರು. ಆದ್ದರಿಂದಲೇ ಈ ಶರೀರವನ್ನು 'ಮಲದ ಮಡಕೆ, ಮೂತ್ರದ ಕುಡಿಕೆ, ಕೀವಿನ ಹಡಿಕೆ' ಎಂದು ಜರೆಯುತ್ತಾಳೆ. ಆದರೆ ಸತ್ಯದ ಆವಿಷ್ಕಾರವಾಗುವುದು ಈ ದೇಹ ಸಾಧನದ ಮೂಲಕವೇ ಆದ್ದರಿಂದ, ಮಹತ್ತರ ಸಾಧನೆಗೆ ಕಾರಣವಾಗುವ ಈ ದೇಹವನ್ನು ಅವಳು ನಿರಾಕರಿಸುವುದಿಲ್ಲ.

*ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ*
*ಹಾವಿನ ಸಂಗವೇ ಲೇಸು ಕಂಡಯ್ಯ*
*ಕಾಯದ ಸ್ಥಿತಿಯ ವಿವರಿಸಬಲ್ಲಡೆ ಕಾಯವೇ*
*ಲೇಸು ಕಂಡಯ್ಯ*
*ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು*
*ಚೆನ್ನಮಲ್ಲಿಕಾರ್ಜುನ ನೀನೊಲಿದವರು*
*ಕಾಯಗೊಂಡಿದ್ದರೆನಬೇಡ.*

ಈ ದೇಹ ಮತ್ತು ಅದರ 'ಸ್ಥಿತಿ' 'ಕ್ರಿಯೆ'ಗಳನ್ನು ವಿವರಿಸಬಹುದಾದರೆ, ಅದನ್ನು ಕ್ರಿಯಾತ್ಮಕ, ಇತ್ಯಾತ್ಮಕ ಉದ್ದೇಶಗಳಿಗೆ ಹಸನಾಗಿ ರೂಪಾಂತರಗೊಳಿಸಿಕೊಳ್ಳಲು ಸಾಧ್ಯವಾಗುವುದಾದರೆ ಅಂತಹ ದೇಹವನ್ನು ಹೊಂದಿರುವುದೇ ಲೇಸು. ತಾಯಿ ಮತ್ತು ರಕ್ಕಸಿ ಇವೆರಡು ವಿರುದ್ಧ ಭಾವಸ್ಥಿತಿಗಳು. ತಾಯಿಯ ಜೊತೆಗೆ ಪ್ರೀತಿ, ರಕ್ಷಣೆ, ಕರುಣೆ, ತ್ಯಾಗ ಮುಂತಾದ ಮೃದು ಭಾವನೆಗಳು ಹೊಂದಿಕೊಂಡಿದ್ದರೆ, ರಾಕ್ಷಸಿಯ ಜೊತೆಗೆ ಕೊಲ್ಲುವ, ಆಕ್ರಮಣ ಮಾಡುವ ಒರಟು ಭಾವನೆಗಳು ಹೊಂದಿಕೊಂಡಿವೆ. ವಿನಾಶದ ಹಾದಿಯಲ್ಲಿ ನಡೆದ ಕಾಯವಿಕಾರಕ್ಕೆ ಕಾಯುವ ಕೈಗಳೇ ಕೊಲ್ಲುವ ಕೈಗಳಾಗಿಬಿಡುತ್ತವೆ. ಅದೇ ದೇಹವನ್ನು ಇತ್ಯಾತ್ಮಕ ಕ್ರಿಯೆಗಳಿಗೆ ಸಾಧನವಾಗಿಸಿಕೊಳ್ಳುವಾಗ ಈ ದೇಹವೆಂಬುದು ನಮ್ಮನ್ನು ತಾಯಿಯಂತೆ ಕಾಯುತ್ತದೆ. ಆದ್ದರಿಂದ 'ಚೆನ್ನಮಲ್ಲಿಕಾರ್ಜುನ ನಿನ್ನ ಕಾಣುವ ಕೂಡುವ ಅದಮ್ಯ ಹಂಬಲವಿರುವ ಈ ದೇಹವನ್ನು ಜರೆಯಬೇಡ' ಎನ್ನುತ್ತಾಳೆ. ಇಂತಹ ದೇಹದ ಉರವಣೆಗಳನ್ನು ಅರ್ಥ ಮಾಡಿಕೊಳ್ಳಲು ಶಿವನಿಗೂ ಅಸಾಧ್ಯ. ಆದ್ದರಿಂದಲೇ ಅವನೂ 'ಒಮ್ಮೆ ಒಡಲಗೊಂಡು ನೋಡಬೇಕು'.

ದೈಹಿಕ ಹೋರಾಟಗಳನ್ನು ಪೀಡೆಗಳನ್ನು ಸಹಿಸಿ ಪಾಡು ಪಡುವ ಹಂತ ಇದಾದರೆ ಇದನ್ನು ದಾಟುವ ಹಂತವೊಂದಿದೆ.

*'ಎಸೆಯದಿರು ಎಸೆಯದಿರು ಕಾಮ*
*ಬಾಣಗಳನು*
*ನಾನು ಯಾರಿಗೂ ಅಂಜುವವಳಲ್ಲ*
*ಯಾರಿಗೂ ಅಳುಕುವವಳಲ್ಲ'*

ಏಕೆಂದರೆ ಈ ಅಂಗಭಂಗವನ್ನು, ಮನದ ಭಂಗವನ್ನು

ಒಂದು ಮಹತ್ತರವಾದ ಉದ್ದೇಶಕ್ಕೆ ವರ್ಗಾಯಿಸಿ ಕೊಂಡವಳು ಮಹಾದೇವಿ. ಅವಳ ಪಾಲಿಗೆ ಅಂತಹ ಉದ್ದೇಶವೆಂಬುದು ಶಿವಾನುಭವವೇ ಆಗಿದೆ. ಶಿವನಾದರೋ ಏನು ಮಾಡಿದ? ''ಚೆನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗುಳಹಿದಡೆ, ಮನಸಿಜನ ತಲೆಯ ಬರಹವ ತೊಡೆವನು.'' ಶಿವ ಕಾಮನನ್ನು ಕೊಂದರೂ, ಅವನನ್ನು ಎಲ್ಲರ ಮನಸಿನೊಳಗಿಟ್ಟ, ಆದರೆ ಅಕ್ಕ? 'ಅವನೇನಾದರೂ (ಕಾಮ) ನನ್ನೊಳಗೆ ಚೇಷ್ಟೆ ಆರಂಭಿಸಿದರೆ ಅವನ ಹಣೆಯ ಬರಹವನ್ನೇ ಒರೆಸಿ ಹಾಕುತ್ತೇನೆ' ಎಂದು ಘೋಷಿಸುವ ಅಕ್ಕ ಶಿವನಿಗಿಂತ ಒಂದು ಪಟ್ಟು ಮಿಗಿಲಾಗಿ ಕಾಣಿಸಿಕೊಳ್ಳುತ್ತಾಳೆ.

ಈ ದೇಹಕ್ಕೆ ಇದ್ದ ಉದ್ದೇಶ ಪೂರ್ತಿಯಾದ ಮೇಲೆ ಈ ದೇಹ ಏನಾದರೇನು? ಉದ್ದೇಶದ ಸಾಧನೆಯಾದ ಮೇಲೆ ಈ ದೇಹದ ಕ್ರಿಯೆಗಳು ತಟಸ್ಥವಾಗುತ್ತವೆ. ಆದ್ದರಿಂದ ಜಡವಾದ ಈ ದೇಹವನ್ನು 'ನಾಯಿ ತಿಂದರೇನು ನೀರು ಕುಡಿದರೇನು' 'ಕಾಯ ಕರ್ರನೆ ಕಂದಿದರೇನು' 'ಕಾಯ ಮಿರ್ರನೆ ಮಿಂಚಿದರೇನು'?

ಅಲ್ಲಮ ಪ್ರಭುವಿಗೆ ಮುಖಾಮುಖಿಯಾಗುವುದರ ಜೊತೆಗೆ ಅಕ್ಕ ತನ್ನೊಳಗೇ ಸ್ಪಷ್ಟವಾಗುತ್ತಾ ಗಟ್ಟಿಯಾಗುತ್ತಾ ಸಾಗುತ್ತಾಳೆ.

*ಅಂಗ ಅಂಗನೆಯ ರೂಪಲ್ಲದೆ*
*ಮನ ವಸ್ತುಭಾವದಲ್ಲಿ ಬೆಚ್ಚಂತಿರ್ಪುದು*
*ಬಂದ ಕಥನದಲ್ಲಿ ಬಂದು ಹಿಂಗಿದೆಯಲ್ಲಾ ಅಕ್ಕ!*
*ಗುಹೇಶ್ವರ ಲಿಂಗದಲ್ಲಿ ಉಭಯನಾಮವಳಿದ ಎನ್ನಕ್ಕಾ-*

ಮತ್ತೆ ಜೇಡರ ದಾಸಿಮಯ್ಯನ ವಚನವನ್ನು ನೆನಪಿಗೆ ತರುವ ಪ್ರಭುವಿನ ಈ ಸಾಲುಗಳು ಹೆಣ್ಣಿನ ಎರಡು ಸಾಮಾಜಿಕ ಅಸ್ಮಿತೆಗಳ ಬಗ್ಗೆ ಮಾತನಾಡುತ್ತದೆ. ದೇಹ ಮತ್ತು ಮನಸ್ಸುಗಳು ಅಭಿನ್ನವಾಗಿ ಒಂದು ಸ್ಥಿತಿಯಲ್ಲಿ ಕೇಂದ್ರೀಕರಿಸಿಕೊಂಡಿವೆ. ಇಂತಹ ಸ್ಥಿತಿಯಲ್ಲಿ, ಜಾತಿ ಸೂತಕ – ಲಿಂಗ ಸೂತಕಗಳಿಲ್ಲದ ಮನಸ್ಸಿನಲ್ಲಿ ದೇಹವು ಸೇರಿಹೋಗಿರುವುದರಿಂದ ಅಕ್ಕನ ಶರೀರಕ್ಕೆ ಹೆಣ್ಣು ತನವುಂಟೇ ಹೊರತು ಅವಳ ಅದಮ್ಯ ಚೈತನ್ಯವನ್ನು ಉಕ್ಕಿಹರಿಸುತ್ತಿರುವ ವ್ಯಕ್ತಿತ್ವಕ್ಕಲ್ಲ.

ಹೆಣ್ಣಿಗೆ ಹುಟ್ಟಿನೊಂದಿಗೆ ಬಂದ ಅಸ್ಮಿತೆಯೊಂದು ಕಡೆಯಾದರೆ, ಸೇರಿದ ಮನೆಯೊಂದಿಗೆ ಬರುವ ಅಸ್ಮಿತೆ ಇನ್ನೊಂದು ಕಡೆಗಿದೆ. ಸಮಾಜ ಕೊಟ್ಟ ಈ ಎರಡೂ ಅಸ್ಮಿತೆಯಾಚೆಗೆ ಹೆಣ್ಣಿಗೆ ತನ್ನದೇ ಆದ ಅನೇಕ ನಿಜದ ಸ್ಥಿತಿಗಳಿವೆ, ಇದಕ್ಕೆ ಅನಂತ ಸಾಧ್ಯತೆಗಳಿವೆ. ಈ ಎರಡು ಪಾರಂಪರಿಕ ಸಿದ್ಧ ಮಾದರಿಯಾಚೆಗೆ ಹೊರಟ ಹೆಣ್ಣು ಹೇಗೆ ತನ್ನತನವನ್ನು ಸಾಧಿಸಬಲ್ಲಳು, ಅನನ್ಯತೆಯನ್ನು ಉಳಿಸಿಕೊಳ್ಳಬಲ್ಲಳು ಎಂಬುದನ್ನು ಅಲ್ಲಮ ಪ್ರಭುವಿನ ಈ ವಚನ ಅತ್ಯಂತ ಪರಿಣಾಮಕಾರಿಯಾಗಿ ತೋರಿಸಿ ಕೊಡುತ್ತದೆ. ಇಂತಹ ಸಾಂಸ್ಕೃತಿಕ ಪೂರ್ವಗ್ರಹವನ್ನು ಎತ್ತಿ ತೋರಿಸುವ ಬಹಳ ಮುಖ್ಯವಾದ ಇನ್ನೊಂದು ವಚನದಲ್ಲಿ ಅಲ್ಲಮ ಪ್ರಭು ಹೇಳುತ್ತಾರೆ:

*ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ*
*ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ*
*ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ*
*ಮನದ ಮುಂದಣ ಆಶೆಯೇ ಮಾಯೆ ಕಾಣಾ*
*ಗುಹೇಶ್ವರಾ.*

ಹೆಣ್ಣಿನ 'ಇರುವ' ಹಾಗೂ ಅವಳನ್ನು 'ಕಾಣಿಸುವಿಕೆ'ಯ ನಡುವಿರುವ ಅಗಾಧ ಅಂತರವನ್ನು ಇವು ಬಯಲು ಮಾಡುತ್ತವೆ. ಇಂದಿನ ಆಧುನಿಕ ಯುಗದಲ್ಲಿ ಇವು ಕೇವಲ ಮಹಿಳಾ ಪ್ರಶ್ನೆಗಳಲ್ಲ, ನಮ್ಮ ಸಂಸ್ಕೃತಿಯ ಪ್ರಶ್ನೆಗಳು.

ಹೀಗೆ ತನ್ನ ಅಸ್ಮಿತೆಯನ್ನು ಹುಡುಕಿಕೊಂಡು ಹೊರಟ ಅಕ್ಕ ಕೂಡ ಪಾರಂಪರಿಕ ಸಿದ್ಧ ಮಾದರಿಗಳಿಗೆ (ಸತಿಪತಿ) ಜೋತುಬಿದ್ದಳು ಎನ್ನುವ ಆಕ್ಷೇಪಗಳು ಅನೇಕ ಕಡೆ ಕೇಳಿ ಬಂದಿವೆ. ಅಕ್ಕನ ಆಕ್ಷೇಪವಿರುವುದು ಮದುವೆಯೆನ್ನುವ ಪರಂಪರೆಯ ಬಗೆಗೆ ಅಲ್ಲ. ಆಕ್ಷೇಪವಿರುವುದು ಒಲ್ಲದವನೊಡನೆ ಮದುವೆಯ ಬಗೆಗೆ, ಅಶಾಶ್ವತವಾದುದರ ಬಗೆಗೆ. ಹೆಣ್ಣಿನ ಸಿದ್ಧ ಮಾದರಿಯ ಪ್ರಶ್ನೆಗಳೂ ಕೂಡ ಇಂದು ನಾವು ೨೦-೨೧ನೇ ಶತಮಾನದಲ್ಲಿ ಕೇಳಿಕೊಳ್ಳುತ್ತಿರುವ ಪ್ರಶ್ನೆಗಳು. ಭಾರತೀಯ ಪುನರುಜ್ಜೀವನದ ಸ್ತ್ರೀ ಚಳವಳಿಗಳ ರಭಸದ ಗಳಿಗೆಗಳಲ್ಲೂ ಗಮನಕ್ಕೆ ಬಾರದ ಈ ಪ್ರಶ್ನೆಯನ್ನು ಹನ್ನೆರಡನೇ ಶತಮಾನದ ಸಾಮಾಜಿಕ ಚೌಕಟ್ಟಿನಲ್ಲಿರಿಸಿ ನೋಡಲು ಪ್ರಯತ್ನಿಸುವುದು ಎಷ್ಟು ಸಾಧುವಾದುದು? ಎಷ್ಟು ಪ್ರಸ್ತುತವಾದುದು? ಅಲ್ಲದೆ ಅಕ್ಕನಷ್ಟು ತೀವ್ರವಾಗಿ ಭಕ್ತಿಯ ಪರಿಭಾಷೆಯಲ್ಲಿಯೇ ಆಗಲಿ, ಸ್ತ್ರೀ ಲೈಂಗಿಕತೆಯನ್ನು, ಪ್ರೇಮೋತ್ಕಟತೆಯ ಖಾಸಗಿ ಅನುಭವಗಳನ್ನು ವ್ಯಕ್ತಪಡಿಸಲು ೨೦ನೇ ಶತಮಾನದ ಯಾವ ಕನ್ನಡದ ಮಹಿಳೆಗೆ ಸಾಧ್ಯವಾಗಿದೆ?

ಈ ಶತಮಾನದ ಆಧುನಿಕ ಮಹಿಳೆಯರ ವಿವಿಧ ಮಾದರಿಗಳನ್ನು ಅಕ್ಕಮಹಾದೇವಿಯ ಚೈತನ್ಯದ ಜೊತೆ ಸಮೀಕರಿಸಬಹುದಾಗಿದೆ. ಕುಟುಂಬ ಹಾಗೂ ಉದ್ಯೋಗದ ನಡುವೆ ಸಮತೋಲ ನಡೆಸುತ್ತಿರುವ ಉದ್ಯೋಗಸ್ಥ ಮಹಿಳೆಯರಲ್ಲಾಗಲಿ, ನಾಲ್ಕು ಗೋಡೆಗಳ ಮಧ್ಯೆ ಎಲ್ಲರ ಇಚ್ಛೆಗನುಸಾರವಾಗಿ ಬದುಕುವ ಗೃಹಿಣಿಯರಲ್ಲಾಗಲಿ, ಕನಸುಗಣ್ಣುಗಳಲ್ಲಿ ಬೆಡಗನ್ನು ತುಂಬಿಕೊಂಡ ಪ್ರೇಮಿಗಳಲ್ಲಾಗಲಿ, ವಿರಹಿಗಳಲ್ಲಾಗಲಿ, ಲೌಕಿಕವನ್ನು ಒತ್ತರಿಸಿ ಅನುಭಾವದ ಹಾದಿಗುಂಟ ಸಾಗುವ ಸಾಧಕಿಯರಲ್ಲಾಗಲಿ, ದೃಢನಂಬಿಕೆಯತ್ತ ಗುರಿಯಿಟ್ಟು ಬಿಡುಗಡೆಯ ದಾರಿಯಲ್ಲಿರುವ ಶೋಧಕಿಯರಲ್ಲಾಗಲಿ, ಸ್ವಾತಂತ್ರ್ಯದ ಆತ್ಯಂತಿಕ ಕ್ಷಣಗಳನ್ನು ಅನುಭವಿಸುವ ಮುಕ್ತ ಜೀವಿಗಳಲ್ಲಾಗಲಿ ಅಕ್ಕ ಮರುಹುಟ್ಟನ್ನು ಪಡೆಯುತ್ತಲೇ ಬಂದಿದ್ದಾಳೆ. ಮಹಿಳೆಯೊಬ್ಬಳಲ್ಲಿ ಒಬ್ಬ ಗೃಹಿಣಿ ಹಾಗೂ ಅನುಭಾವೀ ಒಟ್ಟಿಗೇ ಜೀವಿಸಿರುತ್ತಾಳೆ. ತಮ್ಮ ದೈನಂದಿನ ಎಲ್ಲಾ ಚಟುವಟಿಕೆಗಳ ನಂತರ ಯಾವುದೋ ಸ್ಫೂರ್ತಿಯೊಂದು ಮೈಹೊಕ್ಕ ಗಳಿಗೆಗಳಲ್ಲಿ ಪುಸ್ತಕ, ಲೇಖನಿ, ಕಸೂತಿ... ಇಂತಹ ತನ್ನದೆನ್ನುವ ಯಾವುದೋ ಕ್ಷಣಗಳಲ್ಲಿ ಪ್ರತಿಯೊಬ್ಬ ಮಹಿಳೆ ಆಪ್ತವಾದ ಅನುಭವವನ್ನು ಪಡೆದುಕೊಳ್ಳುತ್ತಾಳೆ. ದಿನದ ಯಾಂತ್ರಿಕತೆಯ ನಡುವೆ ತನ್ನದೇ ಗಳಿಗೆಗಳಲ್ಲಿ ಬದುಕುವ ಮಹಿಳೆಯ ಈ ಕ್ಷಣಗಳೇ ಅವಳ ಬಿಡುಗಡೆಯ ಅಥವಾ ಅನುಭಾವದ ಕ್ಷಣಗಳಾಗಿರುತ್ತವೆ. (ಈ ಅನುಭವಗಳು ಪುರುಷರದ್ದೂ ಆಗಿರಬಹುದು). ಅಕ್ಕಮಹಾದೇವಿ ಬೆತ್ತಲೆಯಾಗಿ ಸಾಗಿದ್ದು ಅನೇಕ ವಿಮರ್ಶಕರಿಗೆ ಪ್ರತಿಭಟನೆಯಾಗಿದೆ. ಆದರೆ ನಿಜವಾಗಿ ಅದು ಆತ್ಯಂತಿಕವಾದ ಬಿಡುಗಡೆಯ ಹಂತವಾಗಿದೆ. ಮಹಾದೇವಿಯಾದರೋ ತಾನು ಬಯಸಿದ ಬಿಡುಗಡೆಗಾಗಿ ಲೌಕಿಕದ ಎಲ್ಲಾ ಬಂಧನಗಳನ್ನೂ ತೊರೆದು ಮತ್ತೆ ಮರಳಿ ಬಾರದಂತೆ ಒಮ್ಮೆಲೇ ಹೊರಟುಬಿಟ್ಟಳು. ಇಂದಿನ ಆಧುನಿಕ ಮಹಿಳೆಯಾದರೂ ಹಾಗೇ ಮತ್ತೆ ಮರಳಿಬಾರದಂತೆ ನಡೆಯಲು ಸಾಧ್ಯವಿಲ್ಲವಾದರೂ ಅವಳ ನೆಲೆ ಹಾಗೂ ಮಿತಿಗಳಲ್ಲಿ ಅಕ್ಕ ಅನುಭವಿಸಿದ ಸ್ವಾತಂತ್ರ್ಯದ ಅನುಭಾವದ ಕ್ಷಣಗಳನ್ನು ಕ್ಷಣಿಕವಾಗಿಯಾದರೂ ಅನುಭವಿಸುತ್ತಾಳೆ. 'ಸಾವಿಲ್ಲದ, ಕೇಡಿಲ್ಲದ, ರೂಪವಿಲ್ಲದ' ಇಂತಹ ಅಕ್ಕಮಹಾದೇವಿಯ ಚೈತನ್ಯವೆಂಬುದು ಹೀಗೆ ಜಾತಿ, ಜನಾಂಗ, ಧರ್ಮ, ಭೌಗೋಳಿಕ ಗೆರೆಗಳನ್ನು ದಾಟಿ ಬೆಳೆಯುತ್ತಲೇ ಹೋಗಬೇಕಾಗಿದೆ.




**ಇ) ನಿಸರ್ಗದ ನೆಲೆ**

ಜಾಗತೀಕರಣ ಹಾಗೂ ಉದಾರೀಕರಣ ನೀತಿಗಳಿಂದಾಗಿ ಮನುಷ್ಯ ಹೆಚ್ಚು ಹೆಚ್ಚು ಈ ಭೌತಿಕ ಜಗತ್ತಿಗೆ ಅಂಟಿಕೊಳ್ಳುತ್ತಿದ್ದಾನೆ. ಉಪಭೋಗದ ಬೆನ್ನು ಹತ್ತಿದ್ದಾನೆ. ಎಲ್ಲವನ್ನೂ ಉಪಭೋಗದ ನೆಲೆಯಿಂದಲೇ ನೋಡುವ ಅವನು ಜೀವಕೋಟಿಯ ಉಳಿವಿಗೆ ಹಾಗೂ ಪ್ರಾಕೃತಿಕ ಸಂಪತ್ತಿಗೆ ಮಾರಕವಾಗಿದ್ದಾನೆ. ಉಪಭೋಗದ ಬೆನ್ನು ಹತ್ತಿರುವ ಈ ಮನುಷ್ಯನಿಗೆ ಅದರಿಂದ ಬಿಡುಗಡೆ ಪಡೆದುಕೊಳ್ಳಲು ಇರುವ ಪರ್ಯಾಯವೊಂದೇ. ಅದೆಂದರೆ ಪ್ರಕೃತಿಗೆ ಶರಣುಹೋಗುವುದು. ಪ್ರಕೃತಿಯೊಂದು ನಿಃಸ್ವಾರ್ಥದ ಪ್ರತೀಕ. ಅದಕ್ಕೆ ಕೊಡುವುದು ಗೊತ್ತಿದೆಯೇ ಹೊರತು, ಕಿತ್ತುಕೊಳ್ಳುವುದಲ್ಲ. ಆದರೆ ಅದರ ವಿರುದ್ಧ ಯುದ್ಧ ಸಾರಿರುವ ಮನುಷ್ಯನಿಗೆ ಮಾತ್ರ ಪ್ರಕೃತಿಯನ್ನು ಗೆಲ್ಲುವ ಹವಣಿಕೆಯಲ್ಲಿ ಸದಾ ಅದನ್ನು ಲೂಟಿ ಮಾಡುವ ಕಾತುರ.

ಇಲ್ಲಿ ಕೌಶಿಕ (ಕಸಪ್ಪಯ್ಯ ನಾಯಕ) ಭೌತಿಕ ಜಗತ್ತಿನ ಪ್ರತೀಕವಾದರೆ, ಚೆನ್ನಮಲ್ಲಿಕಾರ್ಜುನ ಪ್ರಕೃತಿಯ ಪ್ರತೀಕವಾಗಿದ್ದಾನೆ. ಈ ಎರಡು ವಿರುದ್ಧ ಸೆಳೆತಗಳಿಗೆ ಸಿಕ್ಕ

ಮಹಾದೇವಿ ಜರ್ಝರಿತಳಾಗಿದ್ದಾಳೆ. ಭೌತಿಕ ಪ್ರಪಂಚವನ್ನು ಅವಳು ಬಿಡಲು ತಯಾರಿದ್ದರೂ, ಅದು ಅವಳನ್ನು ಬಿಡುತ್ತಿಲ್ಲ. ಮತ್ತೆ ಇನ್ನೊಂದು ಕಡೆಗೆ, ನಿಸರ್ಗಕ್ಕೆ ಹೋಗಬೇಕೆನ್ನುವ ಅವಳ ತಹತಹಕ್ಕೆ ಅನೇಕ ಲೌಕಿಕ ಅಡೆತಡೆಗಳಿವೆ. ಉಡುತಡಿಯಿಂದ ಶ್ರೀಶೈಲದವರೆಗೆ ಇನ್ನೂರಕ್ಕೂ ಹೆಚ್ಚು ಮೈಲುಗಳ ದುರ್ಗಮ ಕೋಟೆ ಕೊತ್ತಲಗಳನ್ನು ದಾಟಿ ಚೆನ್ನಮಲ್ಲಿಕಾರ್ಜುನನನ್ನು ಅವಳು ಸೇರಬೇಕಾಗಿದೆ. 'ಎರದ ಮುಳ್ಳಿನಂತೆ ಪರಗಂಡರೆನಗವ್ವ, ಸೂಸಲಮ್ಮೆ ಸುಳಿಯಲಮ್ಮೆ' ಎಂದು ಪರಿತಪಿಸುವ ಅವಳು ಈ ಉಪಭೋಗದ ಬದುಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾರಳು. ಅನೇಕ ದ್ವಂದ್ವಗಳಿಗೆ ಅವಳು ಸಿಕ್ಕಿದ್ದಾಳೆ. ನಿಸರ್ಗದ ಆಕರ್ಷಣೆ ಮಾತ್ರ ಬಲವಾಗುತ್ತಲಿದೆ. ಇಲ್ಲಿ ಅವಳ ಶಿವ ಕೂಡ ಚೆನ್ನಮಲ್ಲಿಕಾರ್ಜುನ. ಅವನು ಮಲ್ಲಿಕಾಳ ಅರ್ಜುನ. ಮಲ್ಲಿಕಾಳಂತೆ ಅರ್ಜುನ (ಬಿಳಿ). ಈ ಮಲ್ಲಿಗೆ ಕೂಡ ನಿಸರ್ಗದ ಒಂದು ಭಾಗವೇ ಆಗಿದೆ. ಅಕ್ಕನ ಪ್ರಕೃತಿಯ ಜೊತೆಗಿನ ಸಂಬಂಧ ಕೂಡ ಅನೇಕ ಹಂತಗಳಲ್ಲಿ ಬೆಳೆಯುತ್ತಾ ಹೋಗುತ್ತದೆ. ಮೊದಲ ಹಂತದಲ್ಲಿ ಈ ಪ್ರಕೃತಿಯ ಬಗೆಗೆ ಅದರ ಹಿಂದೆ ಸೂತ್ರಧಾರನಾಗಿ ನಿಂತ ಚೆನ್ನಮಲ್ಲಿಕಾರ್ಜುನನ ಬಗೆಗೆ ವಿಸ್ಮಯವಿದೆ. 'ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದವರಾರಯ್ಯ' ಎಂದು ಕೇಳುವ ಪ್ರಶ್ನೆಯಲ್ಲಿಯೇ ಉತ್ತರವೂ ಅಡಗಿದೆ. ಅದರ ಬಗ್ಗೆ ಅವಳಿಗೆ ಖಚಿತತೆಯೂ ಇದೆ. ಇಂತಹ ವಿಸ್ಮಯಗಳ ಮೂಲಕವೇ ಕಂಡುಕೊಂಡ ಚೆನ್ನಮಲ್ಲಿಕಾರ್ಜುನ ಅವಳಲ್ಲಿ ಶೋಧನೆಯ ಅರಿವನ್ನೂ ಉಂಟುಮಾಡಿದ್ದಾನೆ. ಈ ವಿಸ್ಮಯದ ಹಂತವೇ ಅವಳನ್ನು ಹುಡುಕಾಟದ ಶೋಧನೆಯ ಹಂತಕ್ಕೆ ಮುಟ್ಟಿಸಿದೆ. ಇಡೀ ಪ್ರಕೃತಿಗೆ ಬೆರಗಾದ ಅಕ್ಕ ಬೆಟ್ಟ ನದಿ ಕಾನನ ಖಗ ಮೃಗಗಳನ್ನೆಲ್ಲಾ ಕೇಳುತ್ತಾ ಅಲ್ಲಿ ಚೆನ್ನಮಲ್ಲಿಕಾರ್ಜುನನನ್ನು ಶೋಧಿಸುತ್ತಾ ಹೊರಟಿದ್ದಾಳೆ.

*ಚಿಲಿಪಿಲಿ ಎಂದೋಡುವ ಗಿಳಿಗಳಿರಾ ನೀವು ಕಾಣಿರೆ?*
*ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ?*
*ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ?*
*ಸರವರದೊಳಗಾಡುವ ಹಂಸಗಳಿರಾ ನೀವು ಕಾಣಿರೆ?*
*ಗಿರಿ ಗಹ್ವರದೊಳಗಾಡುವ ಪುಳಿಂದರುಗಳಿರಾ*
*ನೀವು ಕಾಣಿರೆ?*
*ಚೆನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೆ ?*

ಚೆನ್ನಮಲ್ಲಿಕಾರ್ಜುನನಿಗಾಗಿ ಅಡವಿಯೆಲ್ಲಾ ಅಲೆಯುವ ಅಕ್ಕ ಅವುಗಳಿಂದ ಪಡೆದುಕೊಂಡದ್ದೂ ಬೇಕಾದಷ್ಟಿದೆ. ತನ್ನ ಸ್ವಾರ್ಥಕ್ಕಾಗಿ ಅವುಗಳನ್ನು ಬೇಡಿ ಅವುಗಳ ಹಂಗುಗಿತ್ತಿಯಾದ ದುಃಖ ಅಪರಾಧೀ ಮನೋಭಾವ ಅವಳಿಗಿದೆ.

*ಒಡಲ ಕಳವಳಕ್ಕಾಗಿ ಅಡವಿಯ ಹೊಕ್ಕೆನು*
*ಗಿಡಗಿಡದಪ್ಪದ ಬೇಡಿದೆನು ಎನ್ನಂಗಕ್ಕೆಂದು*
*ಅವು ನೀಡಿದವು ತಮ್ಮ ಲಿಂಗಕ್ಕೆಂದು*
*ಆನು ಬೇಡಿ ಭವಿಯಾದರೆ, ಅವು ನೀಡಿ ಭಕ್ತರಾದವು.*
*ಇನ್ನೂ ಬೇಡಿದೆನಾದಡೆ –ಚೆನ್ನಮಲ್ಲಿಕಾರ್ಜುನಯ್ಯ*
*ನಿಮ್ಮಾಣೆ.*

ಈ ಹೂವು ಹಣ್ಣು ಹೊಳೆ ಹಳ್ಳ ಇಡೀ ಪ್ರಕೃತಿಗೆಲ್ಲಕ್ಕೂ ಭಕ್ತಿ ಪೂಜೆ ಸೇವೆಯೆಂಬ ಉದಾತ್ತ ಉದ್ದೇಶವಿದೆ. ಅವುಗಳು ನಮ್ಮಿಂದ ಏನೂ ಬೇಡುವುದಿಲ್ಲ, ನಾವುಗಳು ಇಲ್ಲದೆಯೂ ಅದು ಇದೆ, ಇರಬಹುದು. ಆದರೆ ವ್ಯತಿರಿಕ್ತವಾಗಿ ಅದು ಸಾಧ್ಯವಿಲ್ಲ. ಅದು ಕೊಡುತ್ತಿರುವುದು ಕೂಡ, ಕೊಡುವ ಅಹಂಕಾರದಿಂದಲ್ಲ ಶಿವಕೈಂಕರ್ಯ ವೆಂಬ ನಿಸ್ವಾರ್ಥ ಭಾವನೆಯಿಂದ, ಪೂಜಾಧನ್ಯತೆಯಿಂದ. ಆದರೆ 'ನಾನೋ ಈ ಒಡಲ ಹಸಿವು ಬಾಯಾರಿಕೆಗಾಗಿ, ಈ ಒಡಲ ಕಳವಳಕ್ಕಾಗಿ ಪ್ರಕೃತಿಯನ್ನು ಬೇಡಿದೆ. ಬೇಡು ಬೇಡುತ್ತಾ ಉಪಭೋಗದ ಬೆನ್ನು ಹತ್ತಿದೆ. ಇನ್ನು ಬೇಡಿದಡೆ ನಿಮ್ಮಾಣೆ' ಎಂದು ಸಂಕಲ್ಪ ಮಾಡುತ್ತಾಳೆ. ಈವರೆಗಿನ ಚೆನ್ನಮಲ್ಲಿಕಾರ್ಜುನ ಹಾಗೂ ಮಹಾದೇವಿಯ ನಡುವಿನ ದ್ವೈತ ಸಂಬಂಧಕ್ಕೊಂದು ತಿರುವು ದೊರೆತಿದೆ. ಇನ್ನು ಬೇಡಲಾರೆನೆಂದು ಶಪಥ ಮಾಡುವುದೆಂದರೆ, ಕೊಡುವುದು, ಕೊಡುವುದೆಂದರೆ ಪ್ರಕೃತಿಯಾಗಿ ಬಿಡುವುದು, ಆ ಮೂಲಕ ಅದರ ಪ್ರತೀಕವಾದ ಚೆನ್ನಮಲ್ಲಿಕಾರ್ಜುನನಲ್ಲಿ ಅಭಿನ್ನವಾಗಿ ಸೇರಿಹೋಗುವುದು. ಹೀಗೆ ಸೇರಿಹೋದ ಅವಳಿಗೆ ಗಿಳಿ, ಕೋಗಿಲೆ, ಗಿರಿಗಹ್ವರಗಳಾಗಲಿ, ನದಿಬೆಟ್ಟಗಳಾಗಲಿ ಬೇರೆಯಾಗಿ ತೋರುವುದೇ ಇಲ್ಲ. ಯಾಕೆಂದರೆ ಚೆನ್ನಮಲ್ಲಿಕಾರ್ಜುನನ ತೋರಲು ಇದುವರೆಗೆ ಮಾಧ್ಯಮವಾಗಿದ್ದ ಇವುಗಳ ಪರದೆ ಮಾಯವಾಗಿ ಎಲ್ಲವೂ ಬಯಲಾಗಿಬಿಟ್ಟಿದೆ. ಎಲ್ಲವೂ ಚೆನ್ನಮಲ್ಲಿಕಾರ್ಜುನನ ಸ್ವರೂಪವಾಗಿ ಮಾರ್ಪಾಡಾಗಿಬಿಟ್ಟಿವೆ. ಅದರೊಳಗೆ ಸೇರಿಹೋದ ಅಕ್ಕ ಕೂಡ ಅದರ ಭಾಗವೇ ಆಗಿಬಿಟ್ಟಿದ್ದಾಳೆ. ಆದ್ದರಿಂದಲೇ,

*ವನವೆಲ್ಲ ನೀವೆ, ವನದೊಳಗಣ ದೇವ ತರುವೆಲ್ಲ*
*ನೀವೆ*
*ತರುವಿನೊಳಗಾಡುವ ಖಗಮೃಗವೆಲ್ಲ ನೀವೆ*
*ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೇಕೆ*
*ಮುಖ ತೋರೆ?*

ಎಂದು ಕೇಳುವ ಅಕ್ಕನ ರೀತಿ ವಿಚಿತ್ರವಾಗಿ ಕಾಣಿಸುತ್ತದೆ. ಯಾಕೆಂದರೆ ಅದರ ಭಾಗವಾಗಿ ಸೇರಿಹೋದ ಅಕ್ಕನಿಗೆ, ಚೆನ್ನಮಲ್ಲಿಕಾರ್ಜುನನನ್ನು ತನ್ನೊಳಗೇ ಇರಿಸಿಕೊಂಡುಬಿಟ್ಟ ಅಥವಾ ಅವನೊಳಗೇ ತಾನು ಸಂಪೂರ್ಣ ಸೇರಿಹೋದ ಅಕ್ಕನಿಗೆ ಚೆನ್ನ ಮಲ್ಲಿಕಾರ್ಜುನನ ಮುಖ ಕಾಣದಾಗಿದೆ. ಇಲ್ಲಿ 'ನೀನು' ಹಾಗು 'ನಾನು' ಎನ್ನುವ ಭಾವ ಅಳಿಸಿಹೋಗಿದೆ. ಅಕ್ಕ ಹಾಗೂ ಪ್ರಕೃತಿಯ ನಡುವೆ ಅದ್ವೈತದ ಸ್ಥಿತಿಯೊಂದು ಪ್ರಾಪ್ತವಾಗಿಬಿಟ್ಟಿದೆ. (ಇದೆಲ್ಲ ನಡೆಯುವುದು ಅನುಭಾವದ ಹಂತದಲ್ಲಿಯೇ ಹೊರತು ಶರೀರದ ನೆಲೆಯಲ್ಲಿ ಅಲ್ಲ). ಹೀಗೆ ಅಕ್ಕ ಪ್ರಕೃತಿಯಲ್ಲಿ ತನ್ನನ್ನು ಗುರುತಿಸಿಕೊಂಡ ಕ್ಷಣದಿಂದಲೇ ಕೌಶಿಕನಿಂದ ಅರ್ಥಾತ್ ಭೌತಿಕ ಪ್ರಪಂಚದಿಂದ, ಉಪಭೋಗದ ನೆಲೆಯಿಂದ ಅವಳಿಗೆ ಸಂಪೂರ್ಣ ಬಿಡುಗಡೆ ದೊರೆತುಬಿಟ್ಟಿದೆ. ಅವಳು ಹೀಗೆ ತನ್ಮಯಳಾಗುವುದಾದರೂ ಎಲ್ಲಿ ? ಕದಳಿಯ ದುರ್ಗಮ ಘೋರಾರಣ್ಯದಲ್ಲಿ. ಇದು ಕೇವಲ ಘೋರಾರಣ್ಯವಲ್ಲ, ಇದು ದೇಹದ ಪ್ರತೀಕವೂ ಆಗಿದೆ.

*ಕದಳಿ ಎಂಬುದು ತನು, ಕದಳಿ ಎಂಬುದು ಮನ*
*ಕದಳಿ ಎಂಬುದು ವಿಷಯಂಗಳು*
*ಕದಳಿ ಎಂಬುದು ಭವ ಘೋರಾರಣ್ಯ*
*ಕದಳಿ ಎಂಬುದ ಗೆದ್ದು ತಡಿ ಬದುಕಿ ಬಂದು*
*ಕದಳಿಯ ಬನದಲ್ಲಿ ಭವಹರನ ಕಂಡೆನು*
*ಭವಗೆಟ್ಟು ಬಂದ ಮಗಳೆಂದು ಕರುಣದಿಂ*
*ತೆಗೆದು ಬಿಗಿಯಪ್ಪಿದರೆ ಚೆನ್ನಮಲ್ಲಿಕಾರ್ಜುನನ*
*ಹೃದಯ ಕಮಲದಲ್ಲಿ ಅಡಗಿದೆನು.*

ಉಪಭೋಗದ ಬೆನ್ನು ಹತ್ತಿದ ಆಧುನಿಕ ಮಾನವ ಅನೇಕ ಹೋರಾಟಗಳಿಗೆ ಸಿಕ್ಕಿ ನರಳುತ್ತಿದ್ದಾನೆ. ಭವಗೆಟ್ಟು ಭ್ರಷ್ಟನಾಗಿದ್ದಾನೆ. ಎಂತಹ ಭ್ರಷ್ಟನನ್ನೂ ತನ್ನ ಮಡಿಲೊಳಗೆ ಬೆಚ್ಚಗೆ ಇರಿಸಿಕೊಂಡು ಸಾಂತ್ವನಗೈಯುತ್ತದೆ ಪ್ರಕೃತಿ. ಅದಕ್ಕೆ, ಅದೇ ಮನುಷ್ಯ ತನ್ನನ್ನು ಸುಲಿಯುತ್ತಿರುವ ಪರಿವೆಯಿಲ್ಲ, ಇದ್ದರೂ ಅದನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದ ತಾಯಿಗುಣ ಅದಕ್ಕೆ. ನಾವು ಇದರಿಂದ ಕೂಡ ಕಲಿತುಕೊಳ್ಳಬೇಕಾದ ಪಾಠ ಬಹಳಷ್ಟಿದೆ. ಪರಿಸರ ಸಮತೋಲನೆಯ ಬಗ್ಗೆ ಹೆಚ್ಚು ಹೆಚ್ಚು ಕೇಂದ್ರೀಕರಿಸುತ್ತಿರುವ ಇಂದಿನ ಸಂದರ್ಭದಲ್ಲಿ ಅದನ್ನು ಸಾಧಿಸುವಲ್ಲಿನ ಹೋರಾಟಗಳ ಹಿನ್ನೆಲೆಯಲ್ಲಿ ಅಕ್ಕನ ಕುರಿತಾದ ಇಂತಹ ಚರ್ಚೆಗಳು ಬಹಳ ಪ್ರಸ್ತುತ ಮತ್ತು ಅರ್ಥಪೂರ್ಣ ಕೂಡ ಆಗಿದೆ. ಹೀಗೆ ಅಕ್ಕಮಹಾದೇವಿ ಜೈವಿಕ ನೆಲೆಯಿಂದ ಪ್ರಾರಂಭಿಸಿ, ಉಪಭೋಗವಾದಿ ಹಾಗೂ ಸಾಂಪ್ರದಾಯಕ ಕೌಟುಂಬಿಕ ಮೌಲ್ಯಗಳನ್ನು ನಿರಾಕರಿಸುತ್ತಲೇ ತನ್ನ ಅಸ್ತಿತ್ವವನ್ನು ನಿಸರ್ಗದಲ್ಲಿ ಕಂಡುಕೊಳ್ಳುತ್ತಾಳೆ. ಅಲ್ಲದೆ ಸ್ತ್ರೀಯಾತ್ಮಕ ಅಭಿವ್ಯಕ್ತಿಗೊಂದು ಮಾದರಿಯೂ ಆಗಿದ್ದಾಳೆ.


ಡಾ|| ಗಿರಿಜಾ [redacted]
ಡಿ/೬, ೨೦೩, ಹಿಮಗಿರಿ, ಸಿ. ಎಚ್. ಎಸ್.
ಲೋಕಧಾರಾ, ಕಲ್ಯಾಣ್ (ಈಸ್ಟ್), ಠಾಣೆ ಜಿಲ್ಲೆ - ೪೨೧೩೦೬


## ನನ್ನ ಮಾತಿಗಿಂತ ಹೆಚ್ಚು

ಮುಲ್ಲನಸ್ರುದ್ದೀನನ ನೆರೆಯವರಿಗೆ ಕತ್ತೆಯ ಅವಶ್ಯಕತೆ ಬಿತ್ತು.

''ಮುಲ್ಲ, ನಿನ್ನ ಕತ್ತೆಯನ್ನು ಸ್ವಲ್ಪ ಕಾಲ ತೆಗೆದುಕೊಂಡು ಹೋಗಿರಲೆ?'' ಅವನಿಗೆ ಅದನ್ನು ಕೊಡಲು ಇಷ್ಟವಿಲ್ಲ.

''ನೋಡಿ, ಅದನ್ನ ಆಗಲೇ ಬೇರೆಯವರು ತೆಗೆದುಕೊಂಡು ಹೋಗಿದ್ದಾರೆ'' ಅಂದ ಕೂಡಲೇ ಕತ್ತೆ ತಾನು ಇಲ್ಲೇ ಇದ್ದೇನೆ ಅನ್ನುವಂತೆ ಕೆನೆಯಿತು.

''ಮುಲ್ಲ, ಕತ್ತೆಯ ಶಬ್ದ ಇಲ್ಲೇ ಕೇಳುತ್ತಿದೆಯಲ್ಲ !''

ಮುಲ್ಲ ಸ್ವಲ್ಪವೂ ವಿಚಲಿತನಾಗಲಿಲ್ಲ. ''ನೋಡ್ರಿ, ನನ್ನ ಮಾತಿಗಿಂತ ಕತ್ತೆಯದೇ ಹೆಚ್ಚು ಅನ್ನುವವರಿಗೆ ನಾನು ಏನನ್ನೂ ಕೊಡಲು ಇಷ್ಟಪಡುವುದಿಲ್ಲ'', ಎಂದ.

# ಅಪೂರ್ವ ಸ್ವಾತಂತ್ರ್ಯ ಹೋರಾಟಗಾರ



**ಎಂ.** ಎನ್. ಜೋಯಿಸ್ ಇನ್ನಿಲ್ಲ. ಅವರದು ವೈಶಿಷ್ಟ್ಯಪೂರ್ಣವಾದ ಜೀವನ. ಬಡತನಕ್ಕೂ ಜೋಯಿಸ್ ಅವರಿಗೂ ಎಲ್ಲಿಲ್ಲದ ನಂಟು. ಸಾಲದ್ದಕ್ಕೆ ಅವರು ಕಾಲೇಜಿನಲ್ಲಿ ಓದುವಾಗ ಮದುವೆಯೂ ಆಯಿತು. ಅವರು ಪಟ್ಟ ಪಾಡುಗಳನ್ನು ನೆನೆಸಿಕೊಂಡರೆ ಮೈನವಿರೇಳುತ್ತದೆ. ಬಡತನ ಅವರ ಧೃತಿಗೆಡಿಸಲಿಲ್ಲ. ಬೇರೆ ಯಾರಾದರೂ ಅವರ ಪರಿಸ್ಥಿತಿಯಲ್ಲಿದ್ದಿದ್ದರೆ ಸಹಜವಾಗಿ ಹೊಟ್ಟೆಪಾಡಿಗಾಗಿ ಒಂದು ಕೆಲಸ ಹುಡುಕಿಕೊಂಡು, ತಮ್ಮ ಪಾಡಿಗೆ ತಾವು ಇದ್ದುಬಿಡುತ್ತಿದ್ದರು. 'ಹೊಟ್ಟೆ ಹಸಿದವನಿಗೆ ದೇವರು ಕಾಣಿಸಿಕೊಂಡರೂ ರೊಟ್ಟಿಯ ರೂಪದಲ್ಲಿ ಕಾಣಿಸಿಕೊಳ್ಳಬೇಕು' ಎಂದು ಗಾಂಧೀಜಿ ಹೇಳಿದ್ದಾರೆ. ಈ ಹೊಟ್ಟೆ ಹಸಿದ ಜೋಯಿಸ್ ದೇವರನ್ನು, ಭಾರತಮಾತೆಯ ದಾಸ್ಯದ ಬಿಡುಗಡೆಯಲ್ಲಿ ಕಾಣಲು ತೊಡಗಿದ್ದು ಒಂದು ಸೋಜಿಗ. ಅದಕ್ಕಿಂತ ಹೆಚ್ಚಿನ ಸೋಜಿಗ, ಅವರು ದೇಶದ ಬಿಡುಗಡೆಗೆ, ಗುರಿಸಾಧನೆಯಾಗುವವರೆಗೂ ಎಡೆಬಿಡದೆ ತಮ್ಮನ್ನು ತೊಡಗಿಸಿಕೊಂಡಿದ್ದು.

ಗಾಂಧೀಜಿ ಜೋಯಿಸ್ ಅವರ ದೇವರು. ಈ ದೇವರು ದೇಶದ ಎಷ್ಟು ಲಕ್ಷ ಜನರಲ್ಲಿ ಇಂತಹ ಸತ್ಪ್ರೇರಣೆ ಮೂಡಿಸಿದರೋ ಅದರ ಲೆಕ್ಕ ಇಟ್ಟವರಾರು?

ನರಸಿಂಹ ಜೋಯಿಸ್ ಹುಟ್ಟಿದ್ದು ೧೯೦೪, ಡಿಸೆಂಬರ್ ೧೪ರಂದು. ಅವರ ತಂದೆ ನಾರಾಯಣ ಜೋಯಿಸ್ ಮರಿಮಲ್ಲಪ್ಪ ಶಾಲೆಯಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದರು. ನಾರಾಯಣ ಜೋಯಿಸರಿಗೆ ೩ ಗಂಡು ಮಕ್ಕಳು ೪ ಹೆಣ್ಣು ಮಕ್ಕಳು. ನರಸಿಂಹ ಜೋಯಿಸರೇ ಹಿರಿಯರು. ನಾರಾಯಣ ಜೋಯಿಸ್ ಟೆನಿಸ್ ಆಡುತ್ತಿದ್ದರು. ಮೈಸೂರಿನಲ್ಲಿ ಸೈಕಲ್ ಇಟ್ಟ ಮೊದಲಿಗರು. ಶಿಸ್ತುಗಾರ ಪುಟ್ಟಸ್ವಾಮಿ. ಅವರಿಗೆ ಮೈಸೂರಿನಲ್ಲಿ ನಡೆಯುವ ಸಂಗೀತ, ಸಾಹಿತ್ಯ, ಕ್ರೀಡೆ ಎಲ್ಲ ಕಾರ್ಯಕ್ರಮಗಳಲ್ಲೂ ತೀವ್ರ ಆಸಕ್ತಿ, ರಾಜ್ಯಮಟ್ಟದ ಕ್ರೀಡೆಗಳನ್ನು ನಡೆಸಲು ಅವರದೇ ಸಾರಥ್ಯ. ಹೀಗಿದ್ದ ನಾರಾಯಣ ಜೋಯಿಸರು ಹಠಾತ್ತನೆ ಬೇನೆ ಬಿದ್ದು, ಹಾಸಿಗೆ ಹಿಡಿಯುವಂತಾಯಿತು. ಬಡತನ ಅವರ ಸಂಸಾರವನ್ನು ಕಾಡತೊಡಗಿತು. ನರಸಿಂಹ ಜೋಯಿಸರ ತಮ್ಮ ರಾಮಚಂದ್ರ ಜೋಯಿಸ್ ಕಾಲೇಜಿನಲ್ಲಿ ಓದುತ್ತಿದ್ದರು. ಅವರು ರಾತ್ರಿ ಹೊತ್ತು ತನ್ನ ಸೋದರಿ ಮುತ್ತಮ್ಮನನ್ನು ಜೊತೆಗೂಡಿಕೊಂಡು ಭಿಕ್ಷಾನ್ನ ವೃತ್ತಿ ಕೈಗೊಂಡು ತನ್ನ ಸೋದರ ಸೋದರಿಯರಿಗೆ ಊಟ ಒದಗಿಸುತ್ತಿದ್ದರು.

ಜೋಯಿಸ್, ಮುದವೀಡು ಕೃಷ್ಣರಾಯರ ಭಾಷಣ ಕೇಳಿ ಹೈಸ್ಕೂಲು ಮೊದಲ ತರಗತಿಯಲ್ಲಿರುವಾಗಲೇ ಅವರಿಂದ ಪ್ರೇರಣೆ ಪಡೆದರು. ಮುದುವೀಡ್‌ಕರ್ ನಡೆಸಿದ ಪರದೇಶಿ ಬಟ್ಟೆಗಳ ದಹನ ಕಾರ್ಯಕ್ರಮದಿಂದ ಸ್ಫೂರ್ತಿಗೊಂಡ ಜೋಯಿಸ್ ತಾವು ಹಾಕಿಕೊಂಡಿದ್ದ ಬನೀನು ಮತ್ತು ಚಡ್ಡಿಗಳನ್ನು ಬೆಂಕಿಯಲ್ಲಿ ಹಾಕಿ ಬರಿಮೈಯಲ್ಲಿ ಮನೆಗೆ ಓಡಿದರು. ಅಂದು ಅವರಿಗೆ ೧೪ ವರ್ಷ ವಯಸ್ಸು. ಅಂದು ಸ್ವೀಕರಿಸಿದ ಸ್ವದೇಶಿ ವ್ರತವನ್ನು ಕಡೆಯುಸಿರೆಳೆಯುವವರೆಗೂ ಪಾಲಿಸಿಕೊಂಡು ಬಂದರು.

ಬಿ. ಎ. ಪದವೀಧರರಾದ ಎಂ. ಎನ್. ಜೋಯಿಸ್ ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ, ಪ್ರಿನ್ಸಿಪಾಲ್ ರಾಲೊ, ಟಿ. ಎಸ್. ವೆಂಕಣ್ಣಯ್ಯ, ಗೋಪಾಲಸ್ವಾಮಿ, ಎಸ್. ವಿ. ಕೃಷ್ಣಸ್ವಾಮಿ ಅಯ್ಯಂಗಾರ್ ಇವರುಗಳಿಂದ ಪ್ರಭಾವಿತರಾದರು.

ಸ್ವಾತಂತ್ರ್ಯ ಹೋರಾಟದ ಆ ದಿನಗಳನ್ನು ಕುರಿತು ಜೋಯಿಸ್ ಹೀಗೆ ಹೇಳಿದ್ದಾರೆ – ''ಅದೊಂದು ಅಪೂರ್ವಕಾಲ, ಊಹೆಗೂ ನಿಲುಕದ ಎಷ್ಟೋ ಘಟನೆಗಳು ನಡೆದುಹೋದ ಕಾಲ. ಶಾಲಿವಾಹನ, ಕುಂಬಾರನ ಮನೆಯಲ್ಲಿ ಬೆಳೆದು, ಮಣ್ಣಿನಲ್ಲಿ ಸೈನಿಕರನ್ನು ಸೃಷ್ಟಿಸಿ, ತನ್ನ ಪ್ರತಿಭೆಯಿಂದ ಆ ಪ್ರತಿಮೆಗಳಿಗೆಲ್ಲಾ ಜೀವ ತುಂಬಿ ಯುದ್ಧದಲ್ಲಿ ತೊಡಗಿಸಿ, ಗೆಲುವನ್ನು ಪಡೆದಂತೆ ನಮ್ಮ ದೇಶದಲ್ಲಿ ಗಾಂಧಿಜಿ, ತಿಲಕ್ ಮೊದಲಾದ ನಾಯಕರು ನಮ್ಮ ಜನರಲ್ಲಿ ದೇಶಪ್ರೇಮ ತುಂಬಿದರು. 'ರಕ್ತ ಗುಲಾಲ್‌ಸೆ ಭರಲೆ ಜೋಲಿ, ಆಜ್ ಹಮಾರಿ ಹೋಲಿ,' ಅಂದರೆ 'ರಕ್ತದ ಓಕುಳಿಯಿಂದ ಪಿಚಕಾರಿಯನ್ನು ತುಂಬು. ಇಂದು ನಮಗೆಲ್ಲಾ ದೀವಳಿಗೆ.' ಹೀಗೆ ಹಾಡುತ್ತಾ ಭಗತ್ ಸಿಂಗ್ ನೇಣುಗಂಬ ಅಪ್ಪಿದ. ಲಾಹೋರಿನ ಸೆರೆಮನೆಯಲ್ಲಿ ೬೪ ದಿನಗಳ ಅಖಂಡ ಉಪವಾಸ ಮಾಡಿ ಜತೀಂದ್ರ ದಾಸ್ ಆತ್ಮಾರ್ಪಣೆ ಮಾಡಿಕೊಂಡರು. ವದೀಜಾ ಎಂಬುವವನು ಬರ್ಮಾದ ಜೈಲಿನಲ್ಲಿ ೧೬೪ ದಿನಗಳು ಉಪವಾಸ ಮಾಡಿ ದೇಹತ್ಯಾಗ ಮಾಡಿದ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇಂತಹ ಉದಾಹರಣೆಗಳೆಷ್ಟೋ! ೧೯ನೇ ೨೦ನೇ ಶತಮಾನಗಳಲ್ಲಿ ಹೋರಾಟಕ್ಕೆ ಧುಮುಕಿ ಮನೆ-ಮಠ, ವ್ಯಾಸಂಗ, ಕಳೆದುಕೊಂಡವರೆಷ್ಟು ಜನರೋ ! ಅವರು ಪಟ್ಟ ಕೋಟಲೆ, ಕಂಡ ಬವಣೆಗಳು ಎಷ್ಟೋ! ಸಂಸಾರಕ್ಕೆ ಸಂಸಾರವನ್ನೇ ಬೂದಿಮಾಡಿಕೊಂಡವರೆಷ್ಟೋ ಮಂದಿ. ಇದರ ಲೆಕ್ಕ ಇಟ್ಟವರಾರು? ಇದಕ್ಕಾಗಿ ನಾವು ವ್ಯಥೆಪಡಲೂಬಾರದು''

**ಎಚ್. ಎಸ್. ದೊರೆಸ್ವಾಮಿ**

ಎಂದು ಉದ್ಗಾರ ತೆಗೆದ ಅವರು ತಮ್ಮನ್ನೂ, ತಮ್ಮ ಹೆಂಡತಿ ಸುಬ್ಬಮ್ಮನವರನ್ನೂ ಉತ್ತರ ಕನ್ನಡದ ಸಿರಸಿ-ಸಿದ್ದಾಪುರದಲ್ಲಿ ನಡೆದ ಕರ ನಿರಾಕರಣ ಚಳುವಳಿ, ಅರಣ್ಯ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ಅಲ್ಲಿ ಅವರಿಬ್ಬರಿಗೂ ಎರಡು ವರ್ಷಗಳ ಸಶ್ರಮ ಶಿಕ್ಷೆ ಆಯಿತು.

ಶಿಕ್ಷೆಯನ್ನು ಅನುಭವಿಸಿದ ಅವರಿಬ್ಬರೂ ೧೯೩೫ರಲ್ಲಿ ಮೈಸೂರಿಗೆ ಹಿಂದಿರುಗಿದರು. ೧೯೩೮ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಯಾಯಿತು. ಶಿವಪುರ ಧ್ವಜ ಸತ್ಯಾಗ್ರಹದೊಂದಿಗೇ ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂತು. ಶಿವಪುರದಲ್ಲಿ ಧ್ವಜಾರೋಹಣ ನಡೆಸಬಾರದೆಂದು ಸರ್ಕಾರ ಹಾಕಿದ್ದ ನಿರ್ಬಂಧವನ್ನು ಮೊದಲು ಮುರಿದು ಧ್ವಜ ಹಾರಿಸಿದ ಕೀರ್ತಿ ಆ ಸಮಾವೇಶದ ಜಿ. ಓ. ಸಿ. ಆಗಿದ್ದ ಎಂ. ಎನ್. ಜೋಯಿಸ್ ಅವರಿಗೇ ಸಲ್ಲಬೇಕು. ಮೈಸೂರು ಕಾಂಗ್ರೆಸ್ ಜನಾಧಾರಿತ ಸಂಸ್ಥೆಯಾಗಿ ರೂಪುಗೊಳ್ಳುವಲ್ಲಿ ಎಂ. ಎನ್. ಜೋಯಿಸ್ ಅವರ ಪಾತ್ರ ಅದ್ವಿತೀಯ. ಅವರು ಕೆ. ಟಿ. ಭಾಷ್ಯಂ, ಎಚ್. ಸಿದ್ದಯ್ಯ, ಟಿ. ಸುಬ್ರಹ್ಮಣ್ಯ, ಬಳ್ಳಾರಿ ಸಿದ್ದಮ್ಮ, ಹರ್ತಿ ಆದಿರಾಜಯ್ಯ ಮುಂತಾದ ತ್ಯಾಗಿ ವಾಗ್ಮಿಗಳೊಡನೆ ಕೂಡಿಕೊಂಡು ಮೈಸೂರು ಸಂಸ್ಥಾನದ ಉದ್ದಗಲಕ್ಕೂ ರೈಲಿನಲ್ಲಿ, ಬಸ್ಸಿನಲ್ಲಿ, ಗಾಡಿಯಲ್ಲಿ, ಕಾಲ್ನಡಿಗೆಯಲ್ಲಿ, ಒಡಕಲು ಕಾರಿನಲ್ಲಿ ಸಂಚಾರ ಮಾಡಿ, ಜನ ಜಾಗೃತಿ ಮಾಡಿದರು. ಎಂ. ಎನ್. ಜೋಯಿಸರದು ಕಂಚಿನ ಕಂಠ. ಆಗ ಮೈಕಾಸುರನ ಆವಿರ್ಭಾವ ಆಗಿರಲಿಲ್ಲ. ಸಾವಿರಾರು ಜನರು ಸೇರಿದ ಸಭೆಯಲ್ಲಿ ಮಾತನಾಡಲು ಇಂಥವರೇ ಬೇಕಾಗಿದ್ದರು.

ತಗಡೂರು ರಾಮಚಂದ್ರರಾಯರು ಹುಟ್ಟು ಹೋರಾಟಗಾರರು. ಇವರ ಸ್ನೇಹ ಜೋಯಿಸ್ ಅವರಿಗೆ ವಿದ್ಯಾರ್ಥಿ ದೆಸೆಯಲ್ಲೇ ಲಭಿಸಿತ್ತು. ತಗಡೂರರು ನಾಟಕೀಯವಾಗಿ ತಮ್ಮ ಚಳುವಳಿಗಳನ್ನು ರೂಪಿಸುತ್ತಿದ್ದರು. ದಸರ ಬಂದರೆ, ಮಹಾರಾಜರು ಪಟ್ಟಕ್ಕೆ ಕೂತರೆಂದರೆ ತಗಡೂರರ ದಸ್ತಗಿರಿಯಾಗುತ್ತಿತ್ತು. ವಿಜಯದಶಮಿ ಉತ್ಸವ ಮುಗಿದ ಮೇಲೆ ಅವರನ್ನು ಸರ್ಕಾರ ಬಿಡುಗಡೆ ಮಾಡುತ್ತಿತ್ತು. ತಗಡೂರರ ಕ್ರಿಶ್ಚಿಯನ್ ಪಾದ್ರಿಗಳ ವಿರುದ್ಧದ ಹೋರಾಟ, ಕಣಿಯರ ಹೋರಾಟ, ಹ್ಯಾಮಿಲ್ಟನ್ ಹೆಸರಿನ ಪೊಲೀಸ್ ಕಟ್ಟಡದ ವಿರುದ್ಧದ ಹೋರಾಟ ಎಲ್ಲದರಲ್ಲೂ ಜೋಯಿಸ್ ಅವರು ಸಕ್ರಿಯ ಪಾಲುದಾರರು. ಹಾಗೆಯೇ ಸೆರೆಮನೆಗೂ ಇಬ್ಬರೂ ಏಕಕಾಲದಲ್ಲಿ ದೂಡಲ್ಪಡುತ್ತಿದ್ದರು.

ಮೈಸೂರಿನ ತಾತಯ್ಯನವರೆಂದೇ ಪರಿಚಿತರಾದ ವೆಂಕಟಕೃಷ್ಣಯ್ಯನವರು ಶಾಸಕರಾಗಿ, ಪತ್ರಿಕಾಕರ್ತರಾಗಿ, ಸಾರ್ವಜನಿಕ ಸೇವಕರಾಗಿ ಪ್ರಜಾಪ್ರಭುತ್ವ ಜಾರಿಗೆ ತರುವುದರಲ್ಲಿ ವಹಿಸಿದ ಪಾತ್ರ ಅದ್ಭುತವಾದದ್ದು, ಅದ್ವಿತೀಯವಾದದ್ದು. ಅರಸರ ನಿರಂಕುಶ ಪ್ರಭುತ್ವ ಇದ್ದ ಕಾಲದಲ್ಲಿ ರಂಗಾಚಾರ್ಲು ದಿವಾನರಾದಾಗ ಪ್ರಜಾಪ್ರತಿನಿಧಿ ಸಭೆಯನ್ನು ಅಸ್ತಿತ್ವಕ್ಕೆ ತಂದುದ್ದಲ್ಲದೆ ವೆಂಕಟಕೃಷ್ಣಯ್ಯ

ನವರಿಗೂ ಸಾರ್ವಜನಿಕ ಸೇವೆಯ ದೀಕ್ಷೆ ನೀಡಿದರು. ವೆಂಕಟಕೃಷ್ಣಯ್ಯನವರು ೨೫ ವರ್ಷಗಳ ಕಾಲ ಅವಿಚ್ಛಿನ್ನವಾಗಿ, ಪ್ರಜಾಪ್ರತಿನಿಧಿಸಭೆಯ ಮತ್ತು ಮೈಸೂರು ಮುನಿಸಿಪಾಲಿಟಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ಪತ್ರಿಕೆಗಳೇ ಇಲ್ಲದ ಆ ಕಾಲದಲ್ಲಿ ಪತ್ರಿಕೋದ್ಯಮ ಆರಂಭಿಸಿ, ಜನತೆಯ ಹಕ್ಕು ಬಾಧ್ಯತೆಗಳಿಗಾಗಿ ಪತ್ರಿಕೆಗಳ ಮುಖಾಂತರ ಹೋರಾಡಿದರು. ಅದರಂತೆಯೇ ಒಬ್ಬ ಮೈಸೂರಿನ ಗಣ್ಯ ನಾಯಕನಾಗಿ ರೂಪುಗೊಂಡ ಅವರು ಬಡವರ, ದುಃಖಿತರ, ದಬ್ಬಾಳಿಕೆಗೆ ಒಳಗಾದವರ ಬಾಯಾಗಿ, ನಾಲಗೆಯಾಗಿ, ಸಾರ್ವಜನಿಕ ಸಭೆಗಳ ಮೂಲಕ ಅವರ ದುಃಖದುಮ್ಮಾನಗಳನ್ನು ಹೊರಗೆಡವುತ್ತಿದ್ದರು. ಸ್ತ್ರೀ ವಿದ್ಯಾಭ್ಯಾಸ, ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಿದುದಲ್ಲದೆ ವಿಧವೆಯರಿಗಾಗಿ ಉತ್ಪನ್ನ ಕೇಂದ್ರಗಳನ್ನು ಸ್ಥಾಪಿಸಿದ ಕೀರ್ತಿ ಅವರದು.

ಇಂತಹ ಮಹಾಮಾನವನ ಹೆಸರನ್ನು ಶಾಶ್ವತಗೊಳಿಸುವುದಕ್ಕಾಗಿ ಮೈಸೂರಿನಲ್ಲಿ ತಗಡೂರು ರಾಮಚಂದ್ರರಾಯರ ನೇತೃತ್ವದಲ್ಲಿ ಜೋಯಿಸ್ ಅವರು ವೆಂಕಟಕೃಷ್ಣಯ್ಯನವರ ಒಂದು ಅಮೃತಶಿಲೆಯ ಪುತ್ಥಳಿಯನ್ನು ಸ್ಥಾಪಿಸಲು ನೆರವಾದರು.

ಜೋಯಿಸ್ ಶಾಸಕರಾಗಿದ್ದಾಗ, ಹನುಮಂತಯ್ಯನವರು ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಶಾಸಕರ ನಾಯಕರಾಗಿ ಆಯ್ಕೆಯಾದರು. ಹನುಮಂತಯ್ಯನವರು, ಎಂ. ಎನ್. ಜೋಯಿಸ್ ಅವರು ಮತ್ತು ಟಿ. ಎಸ್. ರಾಜಗೋಪಾಲ ಅಯ್ಯಂಗಾರ್ಯರು ಕೂಡಿಕೊಂಡು ಕಾಂಗ್ರೆಸ್ ಶಾಸಕರು, ಅಸೆಂಬ್ಲಿ ಮತ್ತು ಕೌನ್ಸಿಲ್‌ಗಳಲ್ಲಿ ಸಕ್ರಿಯ ಪಾತ್ರ ವಹಿಸುವಂತೆ ಮಾಡಿದರು. ಅವರಿಗೆಲ್ಲ ಶಾಸನಸಭೆಯಲ್ಲಿ ಚರ್ಚೆಯಾಗುವ ವಿಷಯಗಳ ಬಗೆಗೆ ವಿವರಣೆ ನೀಡುತ್ತಿದ್ದರು. ತಮ್ಮ ಪಕ್ಷದ ನಿಲುವೇನೆಂಬುದನ್ನು ತಿಳಿಸಿಕೊಡುತ್ತಿದ್ದರು. ಯಾರ‍್ಯಾರು ಯಾವ್ಯಾವ ವಿಷಯದ ಮೇಲೆ ಮಾತನಾಡಬೇಕು ಎಂಬುದನ್ನು ಹಂಚಿಕೊಡುತ್ತಿದ್ದರು. ಅವರು ಹೀಗೆ ಶಾಸಕರು ಅರ್ಥಪೂರ್ಣವಾಗಿ ಶಾಸನಸಭೆಗಳಲ್ಲಿ ಭಾಗವಹಿಸಲು ನೆರವಾಗುತ್ತಿದ್ದರು.

ಸ್ವಾತಂತ್ರ್ಯ ಪ್ರಾಪ್ತವಾದ ಮೇಲೆ ಜೋಯಿಸ್ ಅವರು ಸಕ್ರಿಯ ರಾಜಕೀಯದಿಂದ ದೂರ ಉಳಿದರಾದರೂ, ಅವರಿಗೆ ಯಾವಾಗಲೂ ದೇಶದ್ದೇ ಚಿಂತೆ ಇತ್ತು. ಪತ್ರಕರ್ತರು ಸಂದರ್ಶನ ಮಾಡಿದರೆ, ಜನ ಅವರನ್ನು ಸಾರ್ವಜನಿಕ ಸಭೆಗೆ ಕರೆದರೆ ತಮ್ಮ ಮನದ ದುಗುಡವನ್ನು ಅವರು ಬಿಚ್ಚಿಡುತ್ತಿದ್ದರು. ಶಾಸಕರಲ್ಲಿ, ಸರ್ಕಾರದಲ್ಲಿ, ಸರ್ಕಾರಿ ಅಧಿಕಾರಿಗಳಲ್ಲಿ ಬೆಳೆದುನಿಂತಿರುವ ಭ್ರಷ್ಟಾಚಾರ, ದೇಶದ ಎಲ್ಲೆಡೆ ಹರಡುತ್ತಿರುವ ಹಿಂಸಾಚಾರ, ಬಹುರಾಷ್ಟ್ರೀಯರ ಹಾವಳಿ, ಜಾತೀಯತೆ, ಇವು ಅವರಿಗೆ ಸಹಿಸಲಾರದ ದುಃಖ ತಂದಿದ್ದವು. ಮಹಾತ್ಮಾ ಗಾಂಧಿಯವರು ಕಲ್ಪಿಸಿ ಮಾಡಿದ ಸ್ವತಂತ್ರ ಭಾರತ ಯಾವುದು? ಈಗ ನಡೆಯುತ್ತಿರುವ ವಿದ್ಯಮಾನಗಳೇನು? ಎಂದು ಮಮ್ಮಲ ಮರುಗುತ್ತಿದ್ದರು. ನಮ್ಮ ಕಾಲದ ಯುವಕರಿಗೆ ದೇಶದ ಬಗೆಗೆ, ದೇಶದ ಸಮಸ್ಯೆಗಳ ಬಗೆಗೆ ಇದ್ದ ಕಳಕಳಿ, ಬದ್ಧತೆ ಈಗಿನ ಯುವಕರಲ್ಲಿ ಇಲ್ಲವಲ್ಲಾ ! ಎಂದು ಚಿಂತೆಗೆ ಈಡಾಗುತ್ತಿದ್ದರು.

ದಿಟ್ಟ ಹೋರಾಟಗಾರ, ಸ್ನೇಹ, ಅಪ್ರತಿಮ, ನಿರಾಡಂಬರ ದೇಶಭಕ್ತ, ಪ್ರತಿಭಾನ್ವಿತ ವಾಗ್ಮಿ, ತ್ಯಾಗಜೀವಿ, ಧೀಮಂತ ವ್ಯಕ್ತಿ, ಕೆಚ್ಚೆದೆಯ ನಿಸ್ವಾರ್ಥ ಸೇವಕ ಎಂದೆಲ್ಲ ಗುಣವಾಚಕಗಳಿಂದ ಅವರ ಜೊತೆಗಿದ್ದವರಿಂದ ಶಹಭಾಸ್‌ಗಿರಿ ಪಡೆದು ನಮ್ಮೊಡನೆ ಕೂಡಿಬಾಳಿದ ಎಂ. ಎನ್. ಜೋಯಿಸ್ ಈಗ ಇತಿಹಾಸದ ಪುಟ ಸೇರಿದರು. ಅವರನ್ನು ಇತಿಹಾಸದ ಪುಟಕ್ಕೆ ಸೇರಿಸಿ ಕೃತಾರ್ಥರಾದೆವೆಂದು ಅಂದುಕೊಳ್ಳುವುದಕ್ಕಿಂತ ಅವರಿಂದ, ಅವರ ಹೋರಾಟದ ಜೀವನದಿಂದ ಸ್ಫೂರ್ತಿ ಪಡೆಯಲು ತೊಡಗುವುದು ಇಂದಿನ ಯುವ ಪೀಳಿಗೆಗೆ ಹೆಚ್ಚು ಶ್ರೇಯಸ್ಕರ.

ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ
ಬೆಂಗಳೂರು-೫೬೦ ೦೧೯

# ರಬೈಯಾ ಬಸ್ರಾ



ಅದೇನೂ ಕಷ್ಟವಲ್ಲ ಮಗಳೇ
ಮಾಯದ ವಿದ್ಯೆಯ ಮೈತುಂಬಿಕೊಂಡ
ಮಾಂತ್ರಿಕನ ಹಾಗೆ
ನೀರ ಮೇಲೆ ನಡೆಯುವುದು
ವಾರಗಟ್ಟಲೆ ತೇಲುವುದು
ನೆಲದೊಡಲಲ್ಲಿ ಉಸಿರುಕಟ್ಟಿ
ಸಮಾಧಿಸ್ಥನಾಗುವುದು
ಎಂತೆಂಥದೋ ಮಾಡುವುದು

ಗಾಳಿಯಲ್ಲಿ ತೇಲಿ ತುಡಿತುಡಿದು
ಹೋದ ಗಮಲಿನ ಕಣ
ನೀರಲ್ಲಿ ಕರಗಿ ಹರಿಹರಿದು
ಹೋದ ಮುಗಿಲು
ನೆಲದೊಡಲ ನಿಧಾನದಂತೆ
ಕಿಚ್ಚಲ್ಲಿ ಉರಿದು ಇಷ್ಟು ಬೂದಿ
ಉಳಿದ ಕಿಚ್ಚಿನ ಕಿಡಿ

ಮಾತಾಡಿಕೊಳ್ಳುತ್ತಲಿವೆ
ಹಗಲರಿಯದೆ, ಇರುಳರಿಯದೆ
ನೆಲವರಿಯದೆ, ನೀರರಿಯದೆ
ತಮ್ಮಷ್ಟಕ್ಕೆ ತಾವು
ಜೀವದ ಮಾತೇ ಮಾತು.

ನಾನು ಕೇಳುತ್ತಿದ್ದೇನೆ
ಸುತ್ತ ಮಂಜು ಮುಸುಕಿದ
ಶುಭ್ರ ಮುಂಜಾವದ ಕೊಳದೊಳಗಿಂದ
ಹಬೆ ಹಬೆ ಮಂಜಿನ ಆವಿ
ಅದು ಏರುತ್ತಾ, ಮುಗಿಲಿಂದ
ಆ'ಮಂಜು
ಇಳಿಯುತ್ತಾ
ನೆಲದ ಕೊರಳ ಹಕ್ಕಿ ಹಾಡಿ ಹಾಡುತ್ತಾ
ತಳ ಕಾಣುವ ಶುಭ್ರ ನೀರಲ್ಲಿ
ಹುಣಸೆ ಮೀನು ಕೆಂಪಗೆ ಈಜುತ್ತಾ
ಬಿಸಿ ಬಸುರಿನ ನೆಲದೊಡಲಲ್ಲಿ
ಒಂದು ಬೀಜ ಹೊರ ಜಗತ್ತಿಗೆ
ಬರುವ ತವಕ ತಲ್ಲಣಗಳಲ್ಲಿ
ಮಿಡುಕಾಡುತ್ತಾ ಇರುವ
ಹಾಡುಗಳ ಕಣ ಸಂಗೀತವನ್ನು

ನೀನು ನೀನಾಗಿರು
ಸಂಜೆಯ ಮಗಳೇ

*(ರಬೈಯಾ ಕ್ರಿ. ಶ. ೭೮೦ ರಿಂದ ೮೫೦ ರ ನಡುವೆ ಇರಾಕಿನ ಬಸ್ರಾದಲ್ಲಿ ಬದುಕಿದ್ದ ಸೂಫಿ ಕವಯಿತ್ರಿ)*

ಆರ್. ವಿಜಯರಾಘವನ್
ಸೀನಿಯರ್ ಮೇನೇಜರ್, ಕೋಲಾರ ಗ್ರಾಮೀಣ ಬ್ಯಾಂಕ್
ಪ್ರಧಾನ ಕಛೇರಿ, ಕೋಲಾರ-೫೬೩ ೧೦೧

ಕೆ. ಗಣೇಶ ಕೋಡೂರು

# ಕಳೆದುಕೊಂಡವರು

ಸಾರಾಯಂಗಡಿಯೊಳಗಿನ ಸಿಮೆಂಟ್ ಕಟ್ಟೆಯ ಮೇಲೆ ಕುಳಿತು ಮೂರನೇ ಕೊಟ್ಟೆಯ ತಳಕ್ಕಂಟಿದ್ದ ಅಲ್ಪಸ್ವಲ್ಪ ಸಾರಾಯಿಯನ್ನೂ ಎಳೆದೆಳೆದು ಹೀರುತ್ತಿದ್ದ ವೆಂಟೇಶನಿಗೆ ಒಂದೇ ಗುಕ್ಕಿಗೆ ಓಡಿ ಬಂದು ಏದುಸಿರು ಬಿಡುತ್ತ, 'ವೆಂಕ್ಟಣ್ಣ... ವೆಂಕ್ಟಣ್ಣ... ನಿಮ್ಮ ತಿಮ್ಮ ಮನೇಗೆ ಗ್ಯಾನ ತ...ತಪ್ಪಿ ಬಿದ್ಯಾನೆ... ಸಾವಿತ್ರಕ್ಕ ಎಂತ ಮಾಡ್ಬುಕೂ ತಿಳೀದೇ ಬಾಯ್ಬಡ್ಕಂತಿದ್ಲು... ಅವ್ಳೇಯಾ ನಿಮ್ಮನ್ನ ಕರ್ಕಂಬಾ ಅಂತ ನನ್ನ ಅಟ್ಟಿದ್ಲು... ಬೇಗ ವೆಂಕ್ಟಣ್ಣ...'' ಎಂದು ಪಕ್ಕದ್ಮನೆ ಹುಡುಗ ಹೇಳಿದಾಗ, ಅಷ್ಟು ಹೊತ್ತಿನವರೆಗೆ ಕುಡಿದಿದ್ದ ಸಾರಾಯಿಯ ಮತ್ತೆಲ್ಲ ತಲೆಯಿಂದ ಜರ್‍ರೆಂದು ಇಳಿದು ನೆಲಕಚ್ಚಿತ್ತು. ವೆಂಕಟೇಶ ಮತ್ತೇನೋ ಕೇಳಬೇಕೆನ್ನುವಷ್ಟರಲ್ಲಿ, ಹೇಳಲು ಬಂದಿದ್ದ ಹುಡುಗ ಕೈಗಳೆರಡನ್ನು ಆಚೀಚೆ ತಿರುಗಿಸುತ್ತ, ಡುರ್‍ರೆಂದು ಬಸ್ಸು ಬಿಟ್ಟುಕೊಂಡು ಹೋಗಿಯಾಗಿತ್ತು. ''ಎಂತಾತೋ... ಏನ್ಕತಿಯೋ... ತಗಳೀ ನಾರ್ಣಪ್ಪ'' ವೆಂಕಟೇಶ ಅವತ್ತಿನ ಕೂಲಿಯ ಹತ್ತರ ಆರು ನೋಟುಗಳಲ್ಲಿ, ಮೂರು ನೋಟುಗಳನ್ನು ಸಾರಾಯಂಗಡಿ ನಾರಾಯಣಪ್ಪನಿಗೆ ಕೊಟ್ಟ. ಗಿರಾಕಿ ಕೊಟ್ಟ ಹಣದಲ್ಲಿ ಎಂದು ಕೂಡಾ ಚಿಲ್ಲರೆಯನ್ನು ವಾಪಾಸ್ಸು ಕೊಟ್ಟು ಗೊತ್ತಿಲ್ಲದ ನಾರಾಯಣಪ್ಪ, 'ವೆಂಕ್ಟ, ಚಿಲ್ರೆಯಿಲ್ಲ ಮಾರಾಯಾ... ತಗಾ ಬದ್ಲಿಗೆ ಇದೆರ್ಡ ಮೊಟ್ಟೆ ಕುಡೀ.'' ನಾರಾಯಣಪ್ಪನ ಮೊಟ್ಟೆ ಲೋಳೆಯಂತೆ ಇರುವ ಮಾತುಗಳನ್ನು ಕೇಳಲು ಅಸಹ್ಯವಾಗಿ, ವೆಂಕಟೇಶ ''ಬ್ಯಾಡ್ಬಿಡೀ ನಿಮ್ಮ ಹೊತ್ರಾನೇ ಇರ್‍ಲಿ'' ಎಂದವನೇ ಮನೆಯ ಕಡೆ ಓಡಿದ. ಸೂರ್ಯ ಗುಡ್ಡದ ಬೆನ್ನಲ್ಲಿ ಅಡಗಿ ಕುಳಿತು ಕಣ್ಣಾಮುಚ್ಚಾಲೆಯಾಟವಾಡಲು ಕಣ್ಣಿಗೆ ಬಟ್ಟೆ ಕಟ್ಟಿಕೊಳ್ಳುತ್ತಿದ್ದ.

ಅಂಗಳದಲ್ಲಿ ಆಟವಾಡುತ್ತಿದ್ದ ತಿಮ್ಮ, ಆಟವಾಡುತ್ತಲೇ ಕುಸಿದುಬಿದ್ದಿದ್ದ. ಅವನೊಂದಿಗೆ ಆಟವಾಡುತ್ತಿದ್ದ ಮಕ್ಕಳೆಲ್ಲ ಚೀರಿಕೊಂಡಾಗ, ಮನೆ ಹಿಂದಿನ ತೆಂಗಿನ ಮರದ ಬುಡದಲ್ಲಿ ಮೀನು ಕೊಯ್ಯುತ್ತ ಕುಳಿತಿದ್ದ ಸಾವಿತ್ರಿ, ''ಈ ಮಕ್ಳದ್ದ ದಿನಾ ಎಂತಾರೂ ತರ್‍ಲೆ - ತಾಪತ್ರಯ ಇದ್ದದ್ದೇ'' ಎಂದು ಬೈದುಕೊಳ್ಳುತ್ತ, ಮೀನಿನ ಮಂಡೆ - ಕರಳನ್ನೆಲ್ಲ ತಿನ್ನಲು ಕಾಯುತ್ತ, ಮಿಂಯ್ಯಾವ್... ಮಿಂಯ್ಯಾವ್ ಎಂದು ಕೂಗಿಕೊಳ್ಳುತ್ತಿದ್ದ ರಾಮಿಯನ್ನು ದೂರ ಓಡಿಸಿ, ಅರ್ಧಂಬರ್ಧ ಕೊಯ್ದ ಮೀನುಗಳನ್ನು ಮುಚ್ಚಿಟ್ಟು, ಅಂಗಳಕ್ಕೆ ಬಂದು ನೋಡಿದರೆ ನೆಲದ ಮೇಲೆ ತಿಮ್ಮ ಅಂಗಾತ ಬಿದ್ದುಕೊಂಡಿದ್ದ. ಮಾತಿಲ್ಲ-ಕಥೆಯಿಲ್ಲ. ರಕ್ತವೇ ಇಲ್ಲದಂತೆ ತುಟಿಗಳು ಬಿಳುಚಿಕೊಂಡಿದ್ದವು. ಸಾವಿತ್ರಿ ಮೈ ಅಲುಗಾಡಿಸಿ ಕರೆದರೂ, ಮಿಸುಕಾಡದಾಗ, ತಿಮ್ಮನನ್ನು ಒಳಗೆತ್ತಿಕೊಂಡು ಬಂದು ಚಾಪೆಯ ಮೇಲೆ ಮಲಗಿಸಿ ಮತ್ತೆ ಮತ್ತೆ ಕರೆದಳು. ''ತಿಮ್ಮಾ ...'' ಕರೆಯಲಾಗದೇ ಅಳು ಉಕ್ಕಿ ಬಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಸಾವಿತ್ರಿಯ ಅಳು ಕೇಳಿ, ಮನೆಯೊಳಗೆ ನುಗ್ಗಿದ ಅಕ್ಕ-ಪಕ್ಕದ ಮನೆ ಹೆಂಗಸರು ಏನು ಮಾಡಬೇಕೆಂದು ತಿಳಿಯದೆ, ತಾವೂ ಸಾವಿತ್ರಿಯೊಂದಿಗೆ ಸೇರಿಕೊಂಡು ಅಳಲಾರಂಭಿಸಿದರು. ''ನಮ್ಮ ತಿಮ್ಮಂಗೆ ಎಂತಾತೋ ನೋಡ್ರಿ...'' ಒಳ ಬಂದ ಗಂಡನನ್ನು ನೋಡಿ ಕೂಗಿಕೊಂಡ ಸಾವಿತ್ರಿ ಇನ್ನಷ್ಟು ಜೋರಾಗಿ ಅಳಲಾರಂಭಿಸಿದಳು.

ವೆಂಕಟೇಶ ಅಲುಗಾಡಿಸಿ ಕರೆದಾಗಲೂ, ತಿಮ್ಮ ಚಾಪೆಗೆ... ಚಾಪೆಯ ಕೆಳಗಿನ ಮಣ್ಣು ನೆಲಕ್ಕೆ ಅಂಟಿಕೊಂಡವನಂತೆ... ಒಳಬರಲಾಗದೇ ಬಾಗಿಲಲ್ಲಿ ಇಣುಕುತ್ತಿದ್ದವರ್‍ಯಾರೋ, ''ವೆಂಕ್ಟ, ಭೂತೆಂತೋ ಮೆಟ್ಟೇನೋ. ಧರ್ಮಸ್ಥಳದ ಪ್ರಸಾದ-ಗಿಸಾದ ಇದ್ರೆ ಹಚ್ಚೋ ಸರಿಯಾಗ್ಬೋದು'' ಎಂದು ಹೇಳಿದರು. ''ತಗಳೀ...'' ಎಂದ ಸಾವಿತ್ರಿ, ದೇವರ ಪಟದ ಮುಂದಿಟ್ಟಿದ್ದ ಧರ್ಮಸ್ಥಳ-ಕೊಲ್ಲೂರು-ಶೃಂಗೇರಿ- ಸಿಗಂದೂರಿನ ಪ್ರಸಾದವನ್ನೆಲ್ಲ ತಂದು ಗಂಡನ ಮುಂದೆ ಸುರಿದಳು. ವೆಂಕಟೇಶ ತನಗೆ ಗೊತ್ತಿದ್ದ ದೇವರನ್ನೆಲ್ಲ ನೆನಸಿಕೊಳ್ಳುತ್ತ, ಮಲಗಿದ್ದ ಮಗನ ಹಣೆ, ಎದೆ, ಹೊಟ್ಟೆಗೆಲ್ಲ ಕುಂಕುಮ ಹಚ್ಚಿ ತಿಕ್ಕಿದರೂ, ದೇಹ ತಣ್ಣಗಾಗುತ್ತಲೇ ಇತ್ತು. ''ಡಾಕ್ಟ್ರಿಗಾದರೂ ತೋರ್‍ಸಬೋದಿತ್ತು...'' ಕಣ್ಣಿನಿಂದಿಳಿಯುತ್ತಿದ್ದ ಕಣ್ಣೀರನ್ನು ಸೆರಗಿನ ತುದಿಯಿಂದ ಒರೆಸಿಕೊಳ್ಳುತ್ತ ಸಾವಿತ್ರಿ ಹೇಳಿದ ತಕ್ಷಣ, ವೆಂಕಟೇಶ ಅವಳನ್ನೇ ನೋಡಿದ. ಸಾವಿತ್ರಿಯ ಕಣ್ಣೀರು ವೆಂಕಟೇಶನನ್ನು ಒತ್ತಾಯಿಸಿತು. ಪುಟ್ಟ ಗುಡಿಸಿಲಿನಲ್ಲಿ ಸ್ವಲ್ಪವೂ ಜಾಗವಿಲ್ಲದಂತೆ ತುಂಬಿಕೊಂಡ ಜನ; ತಿಮ್ಮ ಕತ್ತಲಲ್ಲಿ ಕಾಣುತ್ತಲೇ ಇರಲಿಲ್ಲ. ಕುಂಕುಮ ಮೆತ್ತಿಕೊಂಡಿದ್ದ ಕೈಯಲ್ಲೇ ತಿಮ್ಮನನ್ನು ಬಾಚಿ ಎತ್ತಿಕೊಂಡ ವೆಂಕಟೇಶ, ಕತ್ತಲಿನೊಂದಿಗೆ ಸುತ್ತ ನಿಂತಿದ್ದ ಜನರನ್ನು ಸೀಳಿಕೊಂಡು ಆಸ್ಪತ್ರೆಯ ಕಡೆ ಓಡಿದ. ದೇವರಲ್ಲಿ ಬೇಡಿಕೊಳ್ಳುತ್ತ ಸಾವಿತ್ರಿಯು ಗಂಡನ ಹಿಂದೆ ಓಡಲಾರಂಭಿಸಿದಳು.



''ವೆಂಕ್ಟ, ಈಗ ನಿನ್ಮಗ ಸುಧಾರ್‍ಸಿಯಾನೆ ಅಡ್ಡಿಲ್ಲ, ಆದ್ರೂ ನಂಗೇನೋ ಅನ್ಮಾನ. ಎಂಥದಕ್ಕೂ ಒಂದ್ಸಾರಿ, ಮಗನ್ನ ಶಿಮೊಗ್ಗ ಕರ್ಕಂಡ್ಹೋಗಿ ಯಾವ್ದಾದ್ರೂ ದೊಡ್ಡ ಡಾಕ್ಟ್ರಿಗೆ ತೋರ್‍ಸಕೊಂಡ ಬರೋದೊಳ್ಳೇದು.'' ಡಾಕ್ಟರ್ ಪರಮೇಶ್ವರಪ್ಪ ಹೇಳುತ್ತಿದ್ದದ್ದು ಕೇಳುತ್ತಿದ್ದಂತೆ, ವೆಂಕಟೇಶ ನಿಂತಿದ್ದ ನೆಲವನ್ನು ಕಾಲಿನ ಬೆರಳುಗಳಲ್ಲೇ ಗಟ್ಟಿಯಾಗಿ ಹಿಡಿದುಕೊಳ್ಳಲು ಪ್ರಯತ್ನಿಸಿ ಸೋತ. ಮಳೆಗಾಲ ಬೇರೆ; ಕೈಯಲ್ಲಿ ದುಡ್ಡಿಲ್ಲ, ಕೆಲಸವೂ ಸರಿಯಿಲ್ಲ, ಏನು ಮಾಡೋದು? ತಿಮ್ಮ ಆಸ್ಪತ್ರೆಯೊಳಗಿನಿಂದ ಸುಸ್ತಾದವನಂತೆ ನಡೆದುಕೊಂಡು ಬಂದು ಅಮ್ಮನಿಗೆ ಅಂಟಿಕೊಂಡು ಕುಳಿತ. ಸಾವಿತ್ರಿ ಮಗನನ್ನು ಗಟ್ಟಿಯಾಗಿ ತಬ್ಬಿಕೊಂಡು ಗಂಡನ ಮುಖ ನೋಡಿದಳು. ''ಡಾಕ್ಟ್ರೇ... ದುಡ್ಡೆಸ್ ಬೇಕಾಬೋದು?'' ವೆಂಕಟೇಶ, ಮಗನಿಗಿಂತ ಹೆಚ್ಚು ಸುಸ್ತಾದವನಂತೆ ಕೇಳಿದ. ಬೆಳ್ಳೂರಿನ ಸರ್ಕಾರಿ ಆಸ್ಪತ್ರೆಗೆ ಡಾಕ್ಟರಾಗಿ ಬಂದ ಪರಮೇಶ್ವರಪ್ಪನವರಿಗೆ ವೆಂಕಟೇಶ ನಿಧಾನವಾಗಿ ಪರಿಚಯವಾಗಿದ್ದ. ಈ ವೆಂಕಟೇಶನನ್ನು 'ವೆಂಕ್ಟ' ಎಂದು ಕರೆಯಲು ಪರಮೇಶ್ವರಪ್ಪನವರಿಗೆ ಬಹಳ ದಿನ ಬೇಕಾಯಿತು. ಕರೆದಾಗಲೆಲ್ಲ ಮನೆ ಹತ್ತಿರ ಬಂದು ಕಟ್ಟೆಗೆ ಒಡೆದುಕೊಟ್ಟು ಹೋಗುತ್ತಿದ್ದ ವೆಂಕಟೇಶನನ್ನು ಪರಮೇಶ್ವರಪ್ಪ ಎಷ್ಟೇ ಒತ್ತಾಯಿಸಿದರೂ, ಕೊನೆಗೆ ಮೆಲ್ಲಗೆ ಗದರಿದರೂ ಅವನು ದುಡ್ಡು

ತೆಗೆದುಕೊಳ್ಳುತ್ತಲೇ ಇರಲಿಲ್ಲ. ''ಡಾಕ್ಟ್ರೇ ಒಂದ ಲೋಟ ಚಾಯಿದ್ರ ಕೊಡಿ ಸಾಕ್'' ಎಂದು ಕೇಳಿ, ಟೀ ಕುಡಿದು ಎದ್ದು ಹೋಗುತ್ತಿದ್ದ. ಸಾರಾಯಿ ಕುಡಿಯುವುದೊಂದು ಬಿಟ್ಟರೆ ವೆಂಕಟೇಶ ವೆಂಕಟೇಶನೇ! ಗಂಡ - ಹೆಂಡತಿ ಇಬ್ಬರೂ ಕೂಲಿ ಮಾಡುತ್ತಾರೆ. ಆದರೂ ಎಷ್ಟು ಸಿಕ್ಕೀತು? ದುಡಿದದ್ದೆಲ್ಲ ಮನೆ ಖರ್ಚಿಗೆ ಸರಿ ಹೋಗಬಹುದು. ಈಗ ಇಷ್ಟು ದುಡ್ಡೆಂದರೆ...? ವೆಂಕಟೇಶ, ಸಾವಿತ್ರಿ ಇಬ್ಬರೂ ಎದುರಿಗೆ ಕುಳಿತಿದ್ದ ಡಾಕ್ಟರ ಮುಖವನ್ನೇ ನೋಡುತ್ತಿದ್ದರು. ಪರಮೇಶ್ವರಪ್ಪ ಹೇಳಲಾಗದೆ ಸಣ್ಣದನಿಯಲ್ಲಿ, ''ವೆಂಕ್ಯ, ಶಿಮೊಗ್ಗದಲ್ಲಿ ನಂಗೆ ಪರ್ಚ್ಯದ ಡಾಕ್ಟ್ರೊಬ್ರಿದಾರೆ. ಅವ್ರಿಗೊಂದು ಚೀಟಿ ಕೊಡ್ತೀನಿ. ಸ್ವಲ್ಪ ಕಡಿಮೆ ಖರ್ಚಾಗಬೋದು. ಆದ್ರೂ ಬಸ್‌ಛಾರ್ಜು, ಮೆಡಿಸಿನ್ನು ಅದೂ-ಇದೂ ಅಂತ ಒಂದ್ಯೆನೂರಾರು ಖರ್ಚಾಗುತ್ತೆ. ಇಲ್ಲಿ, ಇದ್ನ ಇಟ್ಕ. ಯಾವ್ದಾರೂ ಒಂದ್ಮೂಲಿಗಾಗುತ್ತೆ'' ಎಂದು ಹೇಳಿ ಜೇಬಿನಿಂದ ಐವತ್ತು ರೂಪಾಯಿ ನೋಟೊಂದನ್ನು ಹೊರ ತೆಗೆದರು. ದುಡ್ಡು ತೆಗೆದುಕೊಳ್ಳಲು ಚಾಚಿದ ವೆಂಕಟೇಶನ ಕೈಗಳು ನಡುಗುತ್ತಿದ್ದವು. ಪರಮೇಶ್ವರಪ್ಪನವರೇ ವೆಂಕಟೇಶನ ಕೈ ಹಿಡಿದು, ಅದರೊಳಗೆ ದುಡ್ಡಿಟ್ಟು, ಅಮ್ಮನನ್ನು ತಬ್ಬಿಕೊಂಡು ಕುಳಿತಿದ್ದ ತಿಮ್ಮನ ತಲೆ ಸವರಿ ಒಳಹೋದರು. ಸಾವಿತ್ರಿಯ ಕಣ್ಣಿನಿಂದಿಳಿದ ನೀರು, ಮಗನ ತಲೆಕೂದಲ ಮೇಲೆ ಬಿದ್ದು, ಅಲ್ಲಿಂದ ಇಳಿದು ಹಣೆಯಲ್ಲಿ ಹಚ್ಚಿದ್ದ ಕುಂಕುಮವನ್ನು ಕೂಡಿಕೊಂಡು, ಕೆಂಪು ನೀರಾಗಿ ತಿಮ್ಮನ ಅಂಗಿಯೊಳಗೆ ತಣ್ಣಗೆ ಇಳಿಯುತ್ತಿತ್ತು.

ಊಟಕ್ಕೆ ಕರೆದರೂ ಗಂಡ ಬಾರದಿದ್ದಾಗ, ಸಾವಿತ್ರಿ ಎದ್ದುಬಂದು ಗುಡಿಸಿಲಿನ ಬಾಗಿಲಲ್ಲಿ ನಿಂತು ಹೊರಗಿಣುಕಿದಳು. ಹೊರಗೆ ಮಣ್ಣಿನ ಕಟ್ಟೆಯ ಮೇಲೆ ಲಾಟೀನಿರಿಸಿಕೊಂಡು, ಅದರ ಪಕ್ಕದಲ್ಲಿ ಕುಕ್ಕರಗಾಲಲ್ಲಿ ಕುಳಿತ ವೆಂಕಟೇಶ ಪುಸ್ಸು... ಪುಸ್ಸು.. ಎಂದು ಬೀಡಿ ಸೇದಿ ಸೇದಿ, ಎದುರಿದ್ದ ಕತ್ತಲೆಯೊಳಗೆ ಹೊಗೆಯನ್ನು ತೂರಿಬಿಡುತ್ತಿದ್ದ. ಸೇದುತ್ತಿದ್ದ ಬೀಡಿ, ತುದಿ ಮುಟ್ಟಿ ಕೈ ಸುಟ್ಟಾಗಲೇ ವೆಂಕಟೇಶನಿಗೆ ಎಚ್ಚರವಾದದ್ದು. ಎದುರಿಗೆ ನೋಡಿದ. ಹೆಂಡತಿ ನಿಂತಿದ್ದಳು. ಬೀಡಿ ಸುಟ್ಟ ಕೈಯನ್ನು ತಿಕ್ಕಿಕೊಳ್ಳುತ್ತ ವೆಂಕಟೇಶ ಹೆಂಡತಿಯನ್ನೇ ನೋಡಿದ. ಎದುರಿಗೆ ನಿಂತಿದ್ದ ಸಾವಿತ್ರಿಯ ಮೂಗಿನವರೆಗಷ್ಟೇ ಲಾಟೀನಿನ ಬೆಳಕು ಚೆಲ್ಲಿತ್ತು; ಕಣ್ಣುಗಳಲ್ಲಿ ಕತ್ತಲು. ವೆಂಕಟೇಶ ಮತ್ತೆ ನೋಡಲು ಹವಣಿಸಿದ, ಸಾಧ್ಯವಾಗಲಿಲ್ಲ. ಲಾಟೀನಿನ ಮಂದ ಬೆಳಕಿನ ಪಕ್ಕ ಕುಳಿತ ತನ್ನ ಗಂಡನ ಮುಖದಲ್ಲಿ ಮೀಸೆಯೊಂದಿಲ್ಲದಿದ್ದರೆ, ಪುಟ್ಟ ಮಗುವಿನಂತೆ ಎಂದುಕೊಂಡಳು ಸಾವಿತ್ರಿ. ಅವಳು ಕಟ್ಟೆಯ ಮೇಲೆ ಕುಳಿತಳು. ಇಬ್ಬರ ನಡುವೆ ಮಂದ ಬೆಳಕು ಬೀರುವ ಲಾಟೀನು. ಒಬ್ಬರ ಮುಖವನ್ನು ಮತ್ತೊಬ್ಬರಿಗೆ ನೋಡಲು ಧೈರ್ಯವಾಗಲಿಲ್ಲ. ಲಾಟೀನಿನ ಮಸಿ ಹಿಡಿದ ಕಪ್ಪು ಗಾಜಿಗೆ ಒಂದು ಕುಟ್ಟೆ ಹೊಡೆದು ಸದ್ದು ಮಾಡಿ ಕೆಳಗೆ ಬಿದ್ದು, ಗುಂಯ್ ಎನ್ನುತ್ತ ಲಾಟೀನಿನ ಸುತ್ತ ತಿರುಗಲಾರಂಭಿಸಿತು. ಮತ್ತೊಂದು ಬೀಡಿ ಹಚ್ಚಲು ವೆಂಕಟೇಶ ಜೇಬಿಗೆ ಕೈ ಹಾಕಿದರೆ, ಜೇಬಿನಲ್ಲಿ ಬೀಡಿ ಖಾಲಿಯಾಗಿತ್ತು. ಯಾವತ್ತೂ ಆಗದ್ದು, ಇವತ್ತೇಕೆ ಹೀಗೆ? ಎಂದುಕೊಂಡು ಲಾಟೀನಿನ ಬೆಳಕಿನಲ್ಲಿ ಎದುರು ನೋಡಿದರೆ, ನೆಲದ ಮೇಲೆ ಸೇದಿ ಎಸೆದ ಹದಿನೈದಿಪ್ಪತ್ತು ಬೀಡಿ ಮುಂಡುಗಳಿದ್ದವು. ಹೆಂಡತಿಯತ್ತ ನೋಡಿದ. ಅವಳೂ ಅವನಂತೆ ಬೀಡಿ ಮುಂಡುಗಳನ್ನೇ ದಿಟ್ಟಿಸುತ್ತಿದ್ದಳು. ''ಸಾವಿತ್ರಿ, ದುಡ್ಡಿಗೆಂತ ಮಾಡಾದೇ?'' ಈ ಮೌನವನ್ನು, ಲಾಟೀನೊಂದಿಲ್ಲದಿದ್ದರೆ ತನ್ನೊಳಗೆ ಕರಗಿಸಿಕೊಂಡುಬಿಡುತ್ತಿದ್ದ ಕತ್ತಲನ್ನು ಸಹಿಸಲಾರೆನೆಂಬಂತೆ ವೆಂಕಟೇಶ ಮಾತನಾಡಿದ.

ಸಾವಿತ್ರಿ ಗಂಡನ ಕಡೆ ತಿರುಗಿದಳು. ಮೀಸೆಯೊಂದಿಲ್ಲದಿದ್ದರೆ... ತಿಮ್ಮನಿಗೆ ಏನಾದರೂ ಹೆಚ್ಚು ಕಡಿಮೆಯಾದರೆ?! ಮೊದಲ ಮಗು ಹೆಣ್ಣು; ಹುಟ್ಟುವಾಗಲೇ ಸತ್ತಿತ್ತು. ಆಸೆಯಿಂದ ಹೊತ್ತ ಬಸಿರು. ಹೆರುವ ಮೊದಲೇ ಹೆಣವಾದರೆ ತಾಯಿಯಾದವಳು ಹೇಗೆ ತಡೆದುಕೊಂಡಾಳು... ಸಾವಿತ್ರಿ ಕರುಳು ಕಿತ್ತು ಬರುವಂತೆ ಅಳುತ್ತಲೇ ಇದ್ದಳು. ಹಸಿಬಾಣಂತಿ ಉಪವಾಸವಿದ್ದು ಹೀಗೆ ಅಳುತ್ತ ಕುಳಿತರೆ?! ''ಸಾವಿತ್ರಿ, ನಿಂಗೇನಾರೂ ಆದ್ರ...'' ಗಂಡನ ಮಾತು ಪೂರ್ತಿಯಾಗುವ ಮೊದಲು ಅವನ ಬಾಯಿ ಮುಚ್ಚಿದ್ದಳು. ಸಾವಿತ್ರಿ ಎರಡನೇ ಬಾರಿ ಗರ್ಭಿಣಿಯಾದಾಗ, ವೆಂಕಟೇಶನೇ ಮನೆಯಲ್ಲಿ ಹೆಂಗಸು. ಹೆಣ್ಣು ಹುಟ್ಟಿದರೆ ತಿಮ್ಮಿ, ಗಂಡು ಹುಟ್ಟಿದರೆ ತಿಮ್ಮ. ವೆಂಕಟೇಶ ಒಂದು ಕೂಸಿಗೆ ಎರಡು ಕುಲಾವಿ ಹೊಲಿಸಿಟ್ಟಿದ್ದ. ಸಾವಿತ್ರಿಯ ಹೆರಿಗೆ ಕಷ್ಟವಾಗಿ, ಆಸ್ಪತ್ರೆಗೊಯ್ದು ಹೊಟ್ಟೆ ಕೊಯ್ದು ಮಗು ತೆಗೆದ ಪರಮೇಶ್ವರಪ್ಪ, ವೆಂಕಟೇಶನನ್ನು ಒಂದು ಮೂಲೆಗೆ ಕರೆದು ಹೇಳಿದ್ದರು. ''ವೆಂಕ್ಯ, ಈ ಸಾರಿ ನಿನ್ನ ಹೆಂಡ್ತಿ - ಮಗು ಉಳ್ದಿರೋದೇ ಹೆಚ್ಚು. ಮುಂದೆ ಅವ್ಳು ಗರ್ಭಿಣಿಯಾದ್ರೆ ಅವ್ಳ ಜೀವಕ್ಕೇ ಅಪಾಯ. ಇನ್ನು ಹಾಗಾಗ್ದಿರೋ ಹಂಗೆ ನೋಡ್ಕಳ್ಳಿ ಅಷ್ಟೇ.'' ''ಸಾವಿತ್ರಿ, ತಿಮ್ಮ ಏನಿದ್ರೂ ಸಪ್ಪ ಕಣೇ... ಬರೀ ಸಪ್ಪ...'' ವೆಂಕಟೇಶ ಮಗುವಿನೊಂದಿಗೆ ಹೆಂಡತಿಯನ್ನು ತಬ್ಬಿಕೊಂಡು ಅತ್ತಿದ್ದ. ತಿಮ್ಮ ಒಬ್ಬನೇ ಎರಡು ಕುಲಾವಿಗಳ ಒಡೆಯ. ಈಗ ಅವನಿಗೂ ಏನಾದರೂ ಆದರೆ... ಯಾರಿಗೆ ಯಾರು ಮಗುವಾಗಬೇಕು? ಯಾರನ್ನು ಯಾರು ಸಮಾಧಾನಿಸಬೇಕು? ಸಾವಿತ್ರಿಗೆ ಕೇಳಿಸಲಿಲ್ಲವೇನೋ ಎಂದು ವೆಂಕಟೇಶ ಮತ್ತದನ್ನೇ ಕೇಳಿದ. ಆ ಹಳ್ಳಿಯ ಕತ್ತಲಲ್ಲಿ ಅವಳಿಗೆ ಕಾಣಿಸಿದ್ದೊಂದೇ ದಾರಿ. ''ಗೋಡ್ರ ಹೊತ್ರ ಕೇಳ್ಬೇಕಷ್ಟೇಯ. ಅವ್ರಲ್ಲದೆ ಇಲ್ಲಿ ಇನ್ನಾರು ಕೊಟ್ಟಾರು?'' ವೆಂಕಟೇಶನಿಗೂ ಹೆಂಡತಿ ಹೇಳಿದ್ದು ಸರಿಯೆನ್ನಿಸಿತು. ಸಾವಿತ್ರಿ ಲಾಟೀನು ಎತ್ತಿಕೊಂಡಳು.

ಶುಂಠಿ ನೆಟ್ಟು ಬಂದ ನಂತರ ವೆಂಕಟೇಶ, ಮಲ್ಲಪ್ಪಗೌಡರ ಮನೆಯತ್ತ ಹೋಗಿರಲಿಲ್ಲ. ಶುಂಠಿ ಕೆಲಸವೆಲ್ಲ ಮುಗಿದು, ಒಂದು ವಾರದ ಕೂಲಿಯನ್ನು ಒಟ್ಟಿಗೆ ಕೊಡುವಾಗ ಗೌಡರು, ''ವೆಂಕ್ಟ, ಎಂತಾದ್ರೂ ಕೆಲ್ಸಿದ್ರೆ ನಾನೇ ಹೇಳ್ಕಳ್ತೀನಿ. ಇಲ್ಲಂದ್ರೆ ಹೊತ್ತಿದ್ದಾಗ ನೀನೇ ಈ ಕಡೆ ಬಂದು ಕೇಳ್ಕಂಡ ಹೋದ್ರೂ ಆತೇತೆ'' ಎಂದಿದ್ದರು. ಮಲ್ಲಪ್ಪಗೌಡರ ಮನೆಯಲ್ಲಿ ಕೆಲಸವಿಲ್ಲದೇ ಇದ್ದಾಗ ಅಥವಾ ಗೌಡರ ಮನೆ ಕೆಲಸ ಎಲ್ಲಾದರೂ ಬೇಗ ಮುಗಿದರೆ ಮಾತ್ರ ವೆಂಕಟೇಶ ಬೇರೆಯವರ ಕೆಲಸ ಮಾಡಿಕೊಡುತ್ತಿದ್ದದ್ದು. ಗಂಡನೊಂದಿಗೆ ಗೌಡರ ಗದ್ದೆ-ತೋಟದ ಕೆಲಸಕ್ಕೆ ಬರುತ್ತಿದ್ದ ಸಾವಿತ್ರಿ, ಗೌಡಿತಿ ಹೇಳಿದರೆ ಮನೆಯಲ್ಲಿ ಬೀಸೋದು-ಕೇರೋದು-ಕುಟ್ಟೋದು ಅಂತೇನಾದರೂ ಸಣ್ಣ-ಪುಟ್ಟ ಕೆಲಸವನ್ನು ಮಾಡಿಕೊಡುತ್ತಿದ್ದಳು.

ಗೌಡರ ಮನೆಯಾಳಿನಂತೆ ಆಗಿಹೋಗಿದ್ದ ವೆಂಕಟೇಶನನ್ನು ನೋಡಿ ಗೌಡರ ಆಲ್ಸೇಶಿಯನ್ ನಾಯಿ ಬೊಗಳದೆ ಪ್ರೀತಿಯಿಂದ ಬಾಲ ಅಲ್ಲಾಡಿಸಿತು. ನಾಯಿಯನ್ನು ಪ್ರೀತಿಯಿಂದ ಮಾತನಾಡಿಸಿ, ಗೌಡರು ಪೂಜೆಗೆ ಕುಳಿತಿದ್ದರೆ ಇನ್ನು ಎಷ್ಟು ಹೊತ್ತು ಕಾಯಬೇಕಾಗುತ್ತದೋ ಎಂದುಕೊಳ್ಳುತ್ತ ಮನೆ ಹತ್ತಿರ ಬಂದ ವೆಂಕಟೇಶನಿಗೆ ಚಾವಡಿಯಲ್ಲೇ ಗೌಡರು ಕಾಣಿಸಿದರು. ಪತ್ರಿಕೆಯನ್ನೋದಲು ಬರದಿದ್ದರೂ, ಬೆಳಗ್ಗೆ ಮನೆಗೆ ಬರುತ್ತಿದ್ದ ಪತ್ರಿಕೆಯನ್ನು ಮುಖಕ್ಕೆ ಅಡ್ಡವಾಗಿ ಹಿಡಿದುಕೊಂಡು, ಆರಾಮ ಖುರ್ಚಿಯಲ್ಲಿ ತಮ್ಮ ದೊಡ್ಡ ದೇಹವನ್ನು ಹುದುಗಿಸಿ, ಕಾಲಿನ ಮೇಲೆ ಕಾಲು ಹಾಕಿಕೊಂಡು ಕುಳಿತು ಬೆಳಗ್ಗೆ – ಬೆಳಗ್ಗೆ ಮನೆಗೆ ಬರುವವರನ್ನು ಎದುರುಗೊಳ್ಳುವುದು ಮಲ್ಲಪ್ಪಗೌಡರ ರೂಢಿ. ಅಂಗಳದಲ್ಲೇ ಕೈಕಟ್ಟಿಕೊಂಡು ನಿಂತ ವೆಂಕಟೇಶ, ''ಗೋಡ್ರೇ'' ಎಂದು ಕರೆದ. ವೆಂಕಟೇಶ ಕರೆದದ್ದು ಕೇಳಿಸಿದರೂ, ಪತ್ರಿಕೆಯನ್ನೋದುವುದರಲ್ಲಿ ಮಗ್ನರಾಗಿರುವುದರಿಂದ ಕೇಳಿಸದವರಂತೆ, ಪತ್ರಿಕೆಯ ಹಿಂದುಗಡೆಯೇ ಮುಖವಿರಿಸಿಕೊಂಡು, ಇನ್ನೊಮ್ಮೆ ಕರೆಯುತ್ತಾನೋ ನೋಡೋಣ ಎಂದು ಸುಮ್ಮನಿದ್ದರು. ವೆಂಕಟೇಶ ಮತ್ತೊಮ್ಮೆ ''ಗೋಡ್ರೇ'' ಎಂದು ಕರೆದು, ಈ ಬಾರಿಯಾದರೂ ಗೌಡರ ಮುಖ ಪತ್ರಿಕೆಯ ಪರದೆಯಿಂದ ಈಚೆ ಬರಬಹುದಾ ಎಂದು ನಿಂತಲ್ಲಿಯೇ ನಿಂತು ಕುತ್ತಿಗೆ ಉದ್ದ ಮಾಡಿದ. ಕರೆಯುತ್ತಿರುವುದು ತಮ್ಮ ಕೆಲಸದಾಳು ವೆಂಕ್ಟ ಎಂದು ಗೊತ್ತಾಗಿದ್ದರೂ, ಪತ್ರಿಕೆಯ ಹಿಂದೆಯೇ ಸಿಡುಬಿನ ಕಲೆಯ ತಮ್ಮ ಮೊರದಗಲ ಮುಖವನ್ನಿರಿಸಿಕೊಂಡ ಗೌಡರು, ''ಯಾರೋ ಅದು?'' ಎಂದರು. ಗೌಡರ ಇಷ್ಟು ಮಾತಿಗೇ ಕಾಯುತ್ತಿದ್ದವನಂತೆ, ''ನಾ ಗೋಡ್ರೇ... ವೆಂಕ್ಟ'' ಎಂದ ವೆಂಕಟೇಶ, ಒಂದು ಕೈಯನ್ನು ಕಟ್ಟಿದಂತೆಯೇ ಇರಿಸಿಕೊಂಡು, ತುರಿಸದಿದ್ದರೂ ಎಡಗೈಯಲ್ಲಿ ತನ್ನ ತಲೆ ತುರಿಸಿಕೊಂಡ. ''ಎಂತ ಕೆಲ್ಸಿಲ್ಲಲೋ ವೆಂಕ್ಟ...'' ಗೌಡರಿಗೆ ಓದಲು ಬಾರದಿದ್ದರೂ, ಓದುವಂತೆ ನಟಿಸುತ್ತಿದ್ದ ಪತ್ರಿಕೆಯನ್ನು ಮಡಚಿಡುತ್ತ, ಒರಗಿಸಿದ್ದ ತಮ್ಮ ದೇಹವನ್ನು ಸ್ವಲ್ಪ ಸ್ವಲ್ಪವೇ ಕುರ್ಚಿಯಿಂದ ಎಬ್ಬಿಸುತ್ತ ಹೇಳಿದರು. ''ಗೋಡ್ರೆSS, ಅದಲ್ಲ.. ನಿನ್ನೆ ನಮ್ಮ ತಿಮ್ಮಂಗೆ ಗ್ಯಾನ ತಪ್ಪಿ, ಆಸ್ಪತ್ರೆಗೆ ಕರ್ಕಂಡ್ಹೋಗಿ....'' ವೆಂಕಟೇಶನ ಮಾತನ್ನು ಅರ್ಧದಲ್ಲೇ ತಡೆದ ಗೌಡರು, ''ಅದೆಲ್ಲ ತಿಳೀತು. ಮುಂದೆಂತೀಗ ಹೇಳು'' ಎಂದರು. ಹಾಗಾದರೆ ಗೌಡರಿಗೆ ವಿಷಯವೆಲ್ಲ ಗೊತ್ತಿದೆ; ಹೆಚ್ಚು ಸತಾಯಿಸದೇ ಹಣ ಕೊಡುತ್ತಾರೆಂದುಕೊಂಡ ವೆಂಕಟೇಶ, ''ತಿಮ್ಮನ್ನ ತಕ್ಷಣವೇ ಸಿಮೊಗ್ಗ ಕರ್ಕಂಡ್ಹೋಗಿ ದೊಡ್ಡಾಸ್ಪತ್ರೆ ಡಾಕ್ಟ್ರಿಗೆ ತೋರ್ಸಬೇಕಂತ ಪರಮೇಶ್ವರಪ್ಪ ಹೇಳ್ಯಾರೆ. ಅದ್ಕೆ ಒಂದ್ಯೆನೂರಾರು ಖರ್ಚಾಯ್ತದಂತೆ. ಗೋಡ್ರೆ ನೀವ್ ಕಣ್ಬಿಟ್ಟರೆ... ವರ್ಷ ಪೂರ್ತಿ ನಾನು, ನನ್ನ ಹೆಂಡ್ತಿ ನಿಮ್ಮ ಮನೆಯಾಗೆ ದುಡ್ದು ತೀರುಸ್ತೀವಿ ಗೋಡ್ರೆ...'' ಕಟ್ಟಿಕೊಂಡಿದ್ದ ಕೈಗಳೆರಡು ಎದೆಗೂಡೊಳಗೆ ಹುಗಿದು

ಹೋಗುವಂತೆ ಬೆನ್ನ ಬಗ್ಗಿಸಿ ಸಣ್ಣ ಧ್ವನಿಯಲ್ಲಿ ಹೇಳಿದ. ''ವೆಂಕ್ಟ, ಮೊನ್ನೆಷ್ಟೇ ಇಪ್ಪತ್ತೈದು ಕಿಂಟಲ್ ಬೀಜದ ಶುಂಠಿ ಅಂತ ಹಣ... ಈಗ ಶುಂಠಿಗೆ ಹೊಡ್ಯಾಕೆ ಔಷ್ಧಿ ತರ್ಬ್ಬೇಕು, ಬೀಜದ ಭತ್ತ ಕೊಂಡ್ಕಂಡಿಲ್ಲಿನ್ನೂ... ಅಂತದ್ರಾಗೇ ನೀ ದಿಢೀರನೇ ಐನೂರೂಪ್ಯಾ ಕೇಳ್ದ್ರೆ ಎಲ್ಲಿಂದನೋ ತರೋದು?'' ಗೌಡರ ಮಾತು, ತೆರೆದುಕೊಂಡಿದ್ದ ಕೊನೆಯ ಬಾಗಿಲಿನಂತೆ ರಪ್ಪೆಂದು ಮುಚ್ಚಿ, ವೆಂಕಟೇಶನ ಕಣ್ಣುಗಳಲ್ಲಿ ನೀರಾಡಲಾರಂಭಿಸಿತು.

ವೆಂಕಟೇಶನ ಕಣ್ಣುಗಳಿಂದ ಇಳಿದ ನೀರು, ನೆಲ ಸ್ಪರ್ಶಿಸುವ ಮೊದಲು, ವಾಸ್ತು ಬಾಗಿಲ ಮರೆಯಲ್ಲಿ ನಿಂತ ಗೌಡಿತಿ, ಹೇಳಿದ್ದು ಕೇಳಿಸಿತು. ''ಪಾಪ, ವೆಂಕ್ಟ ಅಷ್ಟು ಕೇಳ್ಕಂತಿದ್ದಾನೆ ಕೊಡ್ಬಾರ್ದ. ಸಣ್ಣ ಕೂಸಿಗೆ ತಾನೇ ಕೇಳ್ತಿರಾದು... ಕೇಳ್ದಷ್ಟು ಕೊಟ್ಬು ಪುಣ್ಯ ಕಟ್ಗಳಿ. ವೆಂಕ್ಟಂಗೆ ಕೊಟ್ರಾರೂ ಎಲ್ಲಿಗೋಗುತ್ತೆ ಹೇಳಿ?'' ಗೌಡರು ನಿಧಾನವಾಗಿ ವಾಸ್ತು ಬಾಗಿಲು ದಾಟಿ ಒಳ ಹೋದರು.



''ತಗಾ ವೆಂಕ್ಟ, ಶುಂಠಿಗೌಷ್ಧಿ ತರಾಕಂತ ಇಟ್ಕಂಡಿದ್ದೆ. ಇಲ್ಲಿ ಏನೋ ಕಷ್ಟದಗಿದೀಯಾ...'' ಗೌಡರು ಒಂದು ದೊಡ್ಡ ನೋಟನ್ನು ವೆಂಕಟೇಶನತ್ತ ಹಿಡಿದರು. ಎರಡು ಮೆಟ್ಟಲು ಹತ್ತಿ ಗೌಡರ ಕೈಯಿಂದ ತನ್ನ ಬೊಗಸೆಗೆ ನೋಟನ್ನು ಬೀಳಿಸಿಕೊಂಡ ವೆಂಕಟೇಶ, ''ಗೋಡ್ರೇSS ಈ ನೂರ್ರುಪ್ಪಾ ಸಾಲ ದಿಲ್ಲ. ಪರಮೇಶ್ವರಪ್ಪ ಹೇಳಿದ್ದು ಐನೂರಾರು ಇಟ್ಗ ಅಂತ...!?'' ''ಲೇಯ್ ಸರ್ರ್ಯಾಗಿ ಕಣ್ಬಟ್ಟು ನೋಡ್ಲೇ.. ನೂರೋ ಐನೂರೋ ಅಂತ.'' ಗೌಡರು ದನಿಯೇರಿಸಿಕೊಂಡು ಹೇಳಿದಾಗ ವೆಂಕಟೇಶ ತನ್ನ ಬೊಗಸೆಯೊಳಗೆ ಹರಡಿಕೊಂಡಿದ್ದ ನೋಟನ್ನು ನೋಡಿದ. ಐನೂರು!! ಇಸ್ಕೂಲು-ಕಾಲೇಜಿನ ಮೆಟ್ಟಲು ಹತ್ತಿದ್ದ ನಾಗರಾಜ, ಕೃಷ್ಣಮೂರ್ತಿ, ಸತೀಶ ಜೊತೆಗೆ ಇನ್ನೊಂದಿಬ್ಬರು ಶೀನಣ್ಣನ ಅಂಗಡಿ ಕಟ್ಟೆ ಮೇಲೆ ಕುಳಿತು ಪತ್ರಿಕೆಯನ್ನೋದುತ್ತಿದ್ದಾಗ, ಅವರು ಈ ಐನೂರು ರೂಪಾಯಿ ನೋಟಿನ ಬಗ್ಗೆ ಮಾತನಾಡುತ್ತಿದ್ದದ್ದು ಅಲ್ಲೇ ಅಂಗಡಿ ಮೂಲೆಯಲ್ಲಿ ಕುಳಿತು ಬೀಡಿ ಸೇದುತ್ತಿದ್ದ ವೆಂಕಟೇಶನ ಕಿವಿಗೆ ಬಿದ್ದಿತ್ತು. 'ಕಾರ್ಗಿಲ್ ಯುದ್ಧದಾಗೆ ನಮ್ಮ ದೇಶನ್ನ ಸೋಲಸ್ಕಾಗ್ದ ಪಾಕಿಸ್ತಾನದೋರು, ಈಗ ಐನೂರೂಪಾಯಿ ಖೋಟಾ ನೋಟೆಲ್ಲ ಪ್ರಿಂಟ್ ಮಾಡಿ ನಮ್ಮ ದೇಶದೊಳಗೆ ಬಿಡ್ತಿದಾರಂತೆ. ಆ ನೋಟಲ್ಲಿ ಅಸಲಿ ಯಾವುದು, ನಕ್ಲಿ ಯಾವುದು ಎಂದು ಕಂಡ ಹಿಡ್ಯಾಕಾಗದ್ದಷ್ಟು ಚೆಂದಾಗಿ ಪ್ರಿಂಟ್ ಮಾಡ್ಯಾರಂತೆ. ಅದ್ಕೆ ಸರ್ಕಾರದೋರು ಜನ ಮೋಸ ಹೋಗ್ದೆ ಇರ್ಲೆಂತ ಅಸ್ಲಿ-ನಕ್ಲಿ ಅಂತ ಹೆಂಗೆ ತಿಳಿಯಾದು ಅನ್ನೋದಕ್ಕೆ ಪತ್ರಿಕೆಯಲ್ಲಿ ಟಿ.ವಿ.ನಲ್ಲಿ ಅಡ್ವಟೈಜ್ ಮೆಂಟ್ ಎಲ್ಲಾ ಕೊಡ್ತಿದಾರೆ.... ಇಲ್ನೋಡ್ರೋ ಈ ಪತ್ರಿಕೆನಾಗೇ ಎಷ್ಟ ದೊಡ್ಡ ಅಡ್ವಟೈಜ್‌ಮೆಂಟ್ ಕೊಟ್ಯಾರೆ!' ಮೂಲೆಯಲ್ಲಿ ಕುಳಿತ ವೆಂಕಟೇಶನಿಗೆ ಆಶ್ಚರ್ಯವಾಗಿತ್ತು.

ವೆಂಕಟೇಶ ಕೈಯಲ್ಲಿದ್ದ ನೋಟನ್ನೊಮ್ಮೆ, ನೋಟು ಕೊಟ್ಟ ಗೌಡರ ಮುಖವನ್ನೊಮ್ಮೆ ನೋಡಿದ. ''ಗೋಡ್ರೆ, ಅದೂ.. ಐನೂರೂಪ್ಪಾ..'' ವೆಂಕಟೇಶ ಹೇಳಲು ತಡವರಿಸಿದ. ''ಏನೋ ಅದು? ಐನೂರು ಕೊಟ್ಟಿದ್ದು ಸಾಲ್ಲಿಲ್ವಾ?'' ಗೌಡರು ಏರು ದನಿಯಲ್ಲಿ ಕೇಳಿದರು. ಮತ್ತಷ್ಟು ಬಗ್ಗಿದ ವೆಂಕಟೇಶ, ''ಅಲ್ಲ ಗೋಡ್ರೆ ಐನೂರೂಪ್ಯಾದೇನೋ ನಕ್ಲಿ ನೋಟು ಇರ್ತೈತಂತಲ್ಲ.. ಇದು ಹಂಗೇನಾರೂ ಆಗಿದ್ರೆ?'' ಎಂದು ಗೌಡರ ಮುಖ ನೋಡುವ ಧೈರ್ಯ ಸಾಲದೆ ಬೊಗಸೆಯಲ್ಲಿದ್ದ ನೋಟನ್ನೇ ದಿಟ್ಟಿಸಿದ. ಗೌಡರ ಮುಖದ ಸಿಡುಬಿನ ಕಲೆಗಳು ಮತ್ತಷ್ಟು ಕಪ್ಪಾಗಿ, ''ಕತ್ತೆ ನನ್ ಮಗನೇ, ನನ್ನ ಹತ್ರಾನೇ ಐನುರೂಪ್ಯಾ ಬೇಡಿದ್ದಲ್ಲದೇ ನನ್ನೇ ಅಡ್ಕಂತೀಯಾ? ಎಷ್ಟೋ ಕೊಬ್ಬು ನಿಂಗೆ?!'' ಎಂದು ಇಡೀ ಮನೆ ನಡುಗುವಂತೆ ಕೂಗಿ, ಸಿಟ್ಟಿನಿಂದ ಕುಣಿಯುತ್ತಲೇ ಕೈಗೆ ಏನು ಸಿಕ್ಕೀತು ಎಂದು ಆಚೀಚೆ ಹುಡುಕಾಡಿದರು. ಗಂಡನ ರೌದ್ರಾವತಾರ ನೋಡಿ ತಕ್ಷಣವೇ ವಾಸ್ತು ಬಾಗಿಲು ದಾಟಿ ಬಂದ ಗೌಡಿತಿ, ''ವೆಂಕ್ಟ, ನೀ ಕೇಳ್ದ ತಕ್ಷಣ ದುಡ್ಡು ಕೊಟ್ಯ್ವಾರಲ್ಲ ತಗಂಡ ನಡೀ... ಅಧಿಕ ಪ್ರಸಂಗ ಮಾಡ್ಬೇಡ...'' ವೆಂಕಟೇಶ ಹೌದೆನ್ನುವಂತೆ ತಲೆಯಾಡಿಸಿ ಅವಸರದಿಂದ ಮೆಟ್ಟಿಲಿಳಿದ.

ಮಗನೊಂದಿಗೆ ಮಾರನೆಯ ಬೆಳಿಗ್ಗೆ ಶಿವಮೊಗ್ಗ ಬಸ್‌ಸ್ಟ್ಯಾಂಡಿನಲ್ಲಿಳಿದ ವೆಂಕಟೇಶ, ತಿಮ್ಮನಿಗೊಂದು ಬ್ರೆಡ್ ತಿನ್ನಿಸಿ, ತಾನೊಂದು ಲೋಟ ಟೀ ಕುಡಿದ. ಪರಮೇಶ್ವರಪ್ಪ ಹೇಳಿದ್ದು ಆಸ್ಪತ್ರೆಯೋ? ಅರಮನೆಯೋ?! ನರ್ಸಿಂಗ್ ಹೋಮನ್ನು ನೋಡಿದ ವೆಂಕಟೇಶನಿಗೆ ಸ್ವಲ್ಪ ಅನುಮಾನವಾಯಿತು. ಪರಮೇಶ್ವರಪ್ಪ ಕೊಟ್ಟ ಚೀಟಿಯನ್ನು ತೋರಿಸಿದ ತಕ್ಷಣ, ತಿಮ್ಮನೊಬ್ಬನನ್ನೇ ಕರೆದುಕೊಂಡು ಒಂದು ಕೋಣೆಯ ಒಳಹೋದರು. ಆಸ್ಪತ್ರೆಯ ವಾಸನೆಯನ್ನು ಹೀರುತ್ತ, ವೆಂಕಟೇಶ ಆತಂಕದಿಂದ ಬಿಳಿ ಬೆಂಚಿನ ತುದಿಗೆ ಕುಳಿತ. ಅರ್ಧಗಂಟೆಯಲ್ಲಿ ತಿಮ್ಮನನ್ನು ಕರೆದುಕೊಂಡು ಹೋದ ಕೋಣೆಯ ಬಾಗಿಲು ತೆರೆಯಿತು. ಆ ಕೋಣೆಯಿಂದ ಹೊರಬಂದ ಡಾಕ್ಟರು ಮತ್ತೊಂದು ಕೋಣೆಯನ್ನು ಹೊಕ್ಕರು. ವೆಂಕಟೇಶ ಕುಳಿತೇ ಇದ್ದ. ಡಾಕ್ಟರ್ ಹೋದ ಕೋಣೆಯಿಂದ ಹೊರ ಬಂದ ನರ್ಸ್ ಒಬ್ಬಳು, ವೆಂಕಟೇಶನನ್ನು ಡಾಕ್ಟರಿದ್ದ ಕೋಣೆಯೊಳಗೆ ಕರೆದೊಯ್ದಳು. ಡಾಕ್ಟರು ವೆಂಕಟೇಶನನ್ನೇ ಕಾಯುತ್ತ ಕುಳಿತಿದ್ದರು. ''ತಿಮ್ಮನ್ನ ಟೆಸ್ಟ್ ಮಾಡಿ ಮಲಗ್ಸಿದ್ದೀವಿ. ಗಾಬ್ರಿ ಬೇಡ. ನೀವು ಕೂತ್ಕೊಳ್ಳಿ.'' ಡಾಕ್ಟರು ಹೇಳಿದ ನಂತರ ವೆಂಕಟೇಶ ಸ್ವಲ್ಪವೂ ಸದ್ದಾಗದಂತೆ ಕುರ್ಚಿಯ ಮೇಲೆ ಕುಳಿತುಕೊಂಡ. ''ನಿಮ್ಮ ಮಗನಿಗೆ ಎಲ್ಲಾ ರೀತಿಯ ಟೆಸ್ಟ್‌ಗಳನ್ನು ಮಾಡಿದ್ದೇನೆ. ಈಗ ನೀವು ಸ್ವಲ್ಪ ಧೈರ್ಯ ತಂದ್ಕೋಬೇಕು. ನಿಮ್ಮ ಮಗಂದು ಹಾರ್ಟ್ ಪ್ರಾಬ್ಲಂ, ಅಂದ್ರೆ ನಿಮ್ಮ ಮಗನ ಹೃದಯದಲ್ಲಿ ದೊಡ್ಡದೊಂದು ತೂತು ಬಿದ್ದಿದೆ. ಆಗ್ಲೇ ಮಿತಿ ಮೀರಿರೋದ್ರಿಂದ ತಕ್ಷಣ ಆಪರೇಷನ್ ಮಾಡೋ ಹಾಗೂ ಇಲ್ಲ. ಸದ್ಯಕ್ಕೆ ಈ ಚೀಟೀಲಿ ಬರೆದಿರೋ ಮಾತ್ರೆ-ಔಷಧಿ-ಇಂಜೆಕ್ಷನ್ನೆಲ್ಲ ಕೊಡಿಸಿ... ನಂತರ ಮುಂದಿನ ಪ್ರಯತ್ನ ಮಾಡೋಣ.'' ಡಾಕ್ಟರು ಅಷ್ಟೇ ಹೇಳಲು ಮಾತ್ರ, ಕುಳಿತವರಂತೆ, ಹೇಳುತ್ತಿದ್ದದ್ದು ಮುಗಿದ ತಕ್ಷಣ ಎದ್ದುಹೋಗಿದ್ದರು. ವೆಂಕಟೇಶ, ಮಗ ಬಂದು ಕೈ ಹಿಡಿದೆಳೆಯುವವರೆಗೂ ಕುರ್ಚಿಯಲ್ಲಿ ಕುಳಿತೇ ಇದ್ದ.

ಗಂಡ ಮತ್ತು ಮಗನನ್ನು ಬೆಳಗಿನ ಬಸ್ಸಿಗೆ ಹತ್ತಿಸಿ ಬಂದು ಮನೆಯ ಮೂಲೆಯಲ್ಲಿ ಮುರುಟಿ ಕುಳಿತ ಸಾವಿತ್ರಿಗೆ ಯಾರೋ ಕರೆಯುತ್ತಿರುವುದು ಕೇಳಿಸಿ ಹೊರಬಂದಳು. ಬಾಗಿಲಿನ ಹತ್ತಿರವೇ ಮಲ್ಲಪ್ಪಗೌಡರು

ಹಲ್ಲು ಕಿಸಿಯುತ್ತ ನಿಂತಿದ್ದರು. ಮನೆ ಬಾಗಿಲಿಗೆ ಬಂದ ಗೌಡರನ್ನು ಹೇಗೆ ಮಾತನಾಡಿಸಬೇಕು? ಏನು ಕೇಳಬೇಕು? ಎಂದು ತಿಳಿಯದೆ ಸಾವಿತ್ರಿ ಸುಮ್ಮನೆ ನಿಂತೇ ಇದ್ದಳು. ''ಸಾವಿತ್ರಿ, ಶುಂಠಿ ಕಳೆ ತೆಗೆಯೋದಿದೆ, ತಕ್ಷಣ ತೋಟದ ತಾವ ಬಾ.. ಆಳಿರುಲ್ಲ, ಅದ್ಕೆ ನಾನೇ ಹೇಳ್ಹೋಗೋಣ ಅಂತ್ಬಂದೆ. ವೆಂಕ್ಟನತ್ರ ನೆನ್ನೆ ಹೇಳಿದ್ದೆ. ಅವ ಮರ್ತಿರ್‍ಬುಕು. ತಕ್ಷಣ ತೋಟಕ್ಕ ಬಾ, ಆಗ್ಲೇ ಹೊತ್ತಾತು'' ಎಂದ ಗೌಡರು, ಬಾಗಿಲಿನಲ್ಲಿ ಗಲಿಬಿಲಿಗೊಂಡು ನಿಂತಿದ್ದ ಸಾವಿತ್ರಿಯನ್ನು ಕಣ್ತುಂಬಿ ಕೊಂಡು, ಮೀಸೆಯ ಮರೆಯಲ್ಲೇ ನಗುತ್ತ ತೋಟದ ಕಡೆ ಹೆಜ್ಜೆ ಹಾಕಿದರು. ಉಟ್ಟಿದ್ದ ಸೀರೆಯನ್ನೇ ಸರಿಮಾಡಿಕೊಂಡು, ಗಂಡ ಪಕ್ಕದೂರಿನಿಂದ ತಂದು ಪ್ರೀತಿಯಿಂದ ಬೆಳೆಸಿದ ಗುಲಾಬಿ ಗಿಡದ ಹೂವೊಂದನ್ನು ಜಡೆಗೆ ಸಿಕ್ಕಿಸಿಕೊಂಡು ಅವಸರ ಅವಸರವಾಗಿ ಗೌಡರ ತೋಟದ ಕಡೆ ಹೊರಟ ಸಾವಿತ್ರಿ, ಮನೆಯ ಉಣಗೋಲು ಹಾಕುವುದನ್ನು ಮರೆತಳು.

* * *

''ಇಲ್ಲ, ನನ್ನತ್ರ ಇರಾದೇ ಇದೊಂದು ನೋಟು. ಇದ ಬಿಟ್ರ ಬೇರೆ ಇಲ್ಲ.'' ವೆಂಕಟೇಶ ಮತ್ತೆ ಹೇಳಿದ. ''ತೆಗೆದುಕೊಳ್ಳಲಿಕ್ಕೆ ಅಡ್ಡಿಲ್ಲ. ಆದ್ರೆ ಈಚೀಚೆಗೆ ಐನೂರು ರೂಪಾಯಿ ಖೋಟಾನೋಟುಗಳು ಬಹಳ ಹೆಚ್ಚಿರೋದ್ರಿಂದ, ಐನೂರು ರೂಪಾಯಿ ನೋಟುಗಳನ್ನು ನಾವು ಯಾರೂ ತೆಗೆದುಕೊಳ್ಳೋದಿಲ್ಲ. ತೆಗೆದುಕೊಂಡ್ರು, ಅದರ ನಂಬರ್ ಬರೆದುಕೊಳ್ತೀವಿ. ಮುಂದೆ ನೀವೊಂದು ಸೈನ್ ಮಾಡ್ಬೇಕು.'' ಕೌಂಟರ್‌ನಲ್ಲಿ ಕುಳಿತವಳು ಹೇಳಿದ್ದಕ್ಕೆಲ್ಲ ವೆಂಕಟೇಶ ತಲೆಯಾಡಿಸಿದ. ಅವಳು ನಂಬರ್ ಬರೆದುಕೊಂಡು, ''ಇಲ್ಲಿ ಸೈನ್ ಮಾಡಿ'' ಎಂದು ವೆಂಕಟೇಶನೆದುರು ಪುಸ್ತಕ-ಪೆನ್ನು ಹಿಡಿದಳು. ಅಕ್ಷರ ತುಂಗಾದಲ್ಲಿ ಕಲಿತಿದ್ದನ್ನೆಲ್ಲ ಪ್ರಯೋಗಿಸಿ, ವೆಂಕಟೇಶ ಎಂದು ತನ್ನ ಹೆಸರು ಬರೆದು, ತಾನು ಕೊಟ್ಟ ನೋಟಿನ ನಂಬರನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತ ತಿಮ್ಮನ ಕೈ ಹಿಡಿದುಕೊಂಡು ರಸ್ತೆಗಿಳಿದ.

* * *

''ಬ್ಯಾಡ ಗೋಡ್ರೆ... ನಾ ನಿಮ್ಮ ಮಗಳಿದ್ದಂಗೆ ಬಿಟ್ಬಿಡಿ...'' ಸಾವಿತ್ರಿ ಕಣ್ಣಲ್ಲಿ ನೀರು ಸುರಿಸುತ್ತ, ಕೈ ಮುಗಿದು ಬೇಡಿದರೆ ಮಲ್ಲಪ್ಪಗೌಡರು ಗಹಗಹಿಸಿ ನಕ್ಕುಬಿಟ್ಟರು. ''ವೆಂಕ್ಟನ ಹೆಂಡ್ತಿ... ನೀ ನಂಗೆ ಅದೆಂತದೇ ಮಗಳು?'' ಎಂದ ಗೌಡರು, ನುಗ್ಗಿ ಸಾವಿತ್ರಿಯನ್ನು ಗಟ್ಟಿಯಾಗಿ ತಬ್ಬಿಕೊಂಡರು. ಸಾವಿತ್ರಿ ಬಿಡಿಸಿಕೊಳ್ಳಲು ಪ್ರಯತ್ನಿಸಿದಂತೆ, ಸಿಡುಬಿನ ಕಲೆಯ ಕಪ್ಪು ನಿಧಾನವಾಗಿ ಸಾವಿತ್ರಿಯನ್ನು ಆವರಿಸಿಕೊಂಡಿತು. ಗುಲಾಬಿ ಹೂವು ಆ ಕಪ್ಪಿನ ಸುಳಿಯಲ್ಲಿ ಸಿಲುಕಿ, ಸುತ್ತಿ ನಿಧಾನವಾಗಿ ಕಣ್ಮರೆಯಾಯಿತು.

* * *

ಗಂಡನೊಂದಿಗೆ ಮಗ ಒಳಬರುತ್ತಿದ್ದಂತೆ, ಮಗನನ್ನು ತಬ್ಬಿಕೊಂಡ ಸಾವಿತ್ರಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ವೆಂಕಟೇಶ ಮೌನವಾಗಿ ಚಾಪೆಯ ಮೇಲೆ ಹೋಗಿ ಕುಳಿತುಕೊಂಡ. ಪ್ರತಿದಿನ ಒರೆಸುವ ಲಾಟೀನಿನ




ಗಾಜಿನಲ್ಲಿ ಇವತ್ತು, ಬೆಳಕು ಹೊರಬರಲಾರದಷ್ಟು ಮಸಿ ತುಂಬಿಕೊಂಡಿತ್ತು. ಸಾವಿತ್ರಿ ತನ್ನ ಮಗನನ್ನು ಒಳಕರೆದುಕೊಂಡು ಹೋಗಿ ಅಳುವಿನಲ್ಲೇ ತುತ್ತು ತಿನ್ನಿಸಿ, ಕಣ್ಣೀರಿನಲ್ಲೇ ಜೋಗುಳ ಹಾಡುತ್ತ ಮಲಗಿಸಿದಳು. ಊಟಕ್ಕೆ ಕುಳಿತ ವೆಂಕಟೇಶನಿಗೆ ಒಂದು ತುತ್ತನ್ನೂ ಬಾಯಿಗಿಡಲಾಗಲಿಲ್ಲ. ''ಸಾವಿತ್ರಿ, ನಮ್ಮ ತಿಮ್ಮನ ಆಸೆ ಬಿಟ್ಟು ಬಿಡೋದೊಳ್ಳೇದು. ಹಾರ್ಟ್ ಪ್ರಾಬ್ಲಂ ಅಂತೆ ಕಣೆ; ಹೃದಯದಾಗೆ ತೂತು ಬಿದ್ದೈತಂತೆ. ಆಪರೇಷನ್ ಮಾಡಿರೂ...'' ವೆಂಕಟೇಶನ ಬಾಯಿಯಿಂದ ಮಾತು ಹೊರಡಲೇ ಇಲ್ಲ. ಅವನ ಕಣ್ಣಿನಿಂದುದುರಿದ ಪುಟ್ಟ ಕಣ್ಣೀರ ಹನಿ ಕಲೆಸುತ್ತಿದ್ದ ಅನ್ನದಲ್ಲಿ ಕರಗಿಹೋಯಿತು. ''ತಿಮ್ಮಾಽಽ'' ಎಂದು ಜೋರಾಗಿ ಕೂಗಿದ ಸಾವಿತ್ರಿ, ಎದ್ದು ತಿಮ್ಮ ಮಲಗಿದ್ದಲ್ಲಿಗೆ ಓಡಿದಳು.

ಪಕ್ಕದಲ್ಲಿ ಮಲಗಿದ ಸಾವಿತ್ರಿ ಬಿಕ್ಕುವುದು ವೆಂಕಟೇಶನಿಗೆ ಕೇಳಿಸುತ್ತಲೇ ಇತ್ತು. ''ಅಳ್ಬೇಡ ಸಾವಿತ್ರಿ... ನಮ್ಮಂತ ಬಡೋರಿಗೆ ತಾನೇ ಹೃದ್ಯ ಇರಾದು. ನಮಗೆ ಹೃದ್ಯದ ಕಾಯ್ಲೆ ಬರ್‍ದೇ, ಇನ್ನು ಹೃದ್ಯ ಇಲ್ದೋರಿಗೆ ಬರುತ್ತಾ...?!'' ಸಾವಿತ್ರಿ ಬಿಕ್ಕುತ್ತಲೇ ಇದ್ದಳು. ವೆಂಕಟೇಶ ಸಾವಿತ್ರಿಯನ್ನು ಸಮಾಧಾನಿಸುವಂತೆ ಏನೇನೋ ಹೇಳುತ್ತಲೇ ಇದ್ದ. ಸಾವಿತ್ರಿ ತಡೆಯಲಾರದೆ, ''ರೀ... ನಿವ್ ಸಿಮೊಗ್ಗ ಹೋದ ತಕ್ಷಣ ಗೋ... ಗೋಡ್ರು ಮನೆ ಹೊತ್ರ ಬಂದಿದ್ರು...'' ''ಅದ್ರಲ್ಲೇನೈತೆ ಈಗ?'' ಮಗನ ಚಿಂತೆಯೇ ದೊಡ್ಡದಾಗಿರುವಾಗ, ಈ ಗೌಡರದ್ದೇನು ಕಥೆ?! ವೆಂಕಟೇಶನಿಗೆ ಸಿಟ್ಟು ಬಂತು. ''ತೋಟದ ತಾವ ಬರಕ್ಕೇಳಿ ನನ್ನ....'' ಸಾವಿತ್ರಿ ಹೇಳುತ್ತಿದ್ದನ್ನು ಕೇಳುತ್ತಿದ್ದಂತೆ ವೆಂಕಟೇಶ ನೆಲಕ್ಕೆ ಹಿಡಿದುಹೋದ. ಕತ್ತಲು! ಏನೂ ಕಾಣಿಸದ ಕಪ್ಪು ಕತ್ತಲು!! ವೆಂಕಟೇಶ ಸದ್ದಿಲ್ಲದೇ ಯಾವುದೋ ಅವ್ಯಕ್ತ ಸುಳಿಯಲ್ಲಿ ಸಿಲುಕಿ, ಹೊರಬರಲಾರದವನಂತೆ ಒದ್ದಾಡುತ್ತ... . ಯಾರದ್ದೋ ಬೆವರಿನಲ್ಲಿ.. ಬೆವರಿನ ವಾಸನೆಯಲ್ಲಿ... ವೇಗವಾಗಿ ಕೈ-ಕಾಲು ಬಡಿಯಲಾರಂಭಿಸಿದ. ಸಾವಿತ್ರಿ ಬಿಕ್ಕುವುದು ನಿಲ್ಲಲೇ ಇಲ್ಲ. ಮಲಗಿದ್ದ ತಿಮ್ಮ ಒಂದೆರಡು ಸಾರಿ ''ಅಮ್ಮ... ಅಪ್ಪಯ್ಯ'' ಎಂದು ಕೂಗಿಕೊಂಡ. ''ಅಮ್ಮಾ... ನೀ... ನೀರು... ಅಪ್ಪಯ್ಯ... ನೀ...'' ತಿಮ್ಮನ ಧ್ವನಿ ಕತ್ತಲನ್ನು ಸೀಳಿಕೊಂಡು ಬಂದು ಸ್ಪಷ್ಟವಾಗಿ ಕೇಳಿಸಿತು. ಸಾವಿತ್ರಿ, ಗಂಡ ಎದ್ದು ನೋಡಬಹುದೆಂದು ನಿದ್ದೆ ಬಾರದಿದ್ದರೂ, ಬಿಕ್ಕುವುದನ್ನು ತಡೆದುಕೊಂಡು ಕಣ್ಮುಚ್ಚಿಕೊಂಡಳು. ವೆಂಕಟೇಶ, ಹೆಂಡತಿ ಎದ್ದು ಹೋಗಲಿ ಎಂದು ಕೇಳಿಸದವನಂತೆ... ಗೊರಕೆಯನ್ನು ನಟಿಸಲೂ ಭಯವಾಗಿ... ಕಂಬಳಿಯನ್ನು ಮುಖದ ಮೇಲೆಳೆದುಕೊಂಡ.

ಬೇಲಿ ಬದಿಯಲ್ಲಿ ನಿಂತು ಇದ್ದಿಲಿನಿಂದ ಹಲ್ಲುಜ್ಜುತ್ತಿದ್ದ ವೆಂಕಟೇಶನಿಗೆ ದೂರದಲ್ಲಿ ಜೀಪೊಂದು ಬರುತ್ತಿರುವುದು ಕಾಣಿಸಿತು. ಹತ್ತಿರ ಹತ್ತಿರ ಬಂದು... ತನ್ನ ಮನೆಯೆದುರು ನಿಂತಾಗಲೇ ವೆಂಕಟೇಶನಿಗೆ ಅದು ಪೊಲೀಸ್ ಜೀಪೆಂದು ತಿಳಿದದ್ದು. ಜೀಪು ನಿಂತಿದ್ದು ನೋಡಿ, ಬಾಯಿಯಲ್ಲಿದ್ದ ಕಪ್ಪು ಎಂಜಲನ್ನು ಉಗಿದು ಹೆದರಿಕೊಂಡು ಈಚೆಗೆ ಬರುವಾಗ, ಪೊಲೀಸರು ಉಣುಗೋಲಿಲ್ಲದ ಬೇಲಿಯನ್ನು ದಾಟಿ ಒಳಬಂದಾಗಿತ್ತು. ''ವೆಂಕಟೇಶ ಅಂದ್ರೆ ನೀನೇನಾ?'' ಬಂದಿದ್ದ ಪೊಲೀಸರಲ್ಲಿ ಒಬ್ಬ ಕೇಳಿದ. ''ಹೌದು ಸಾಮಿ, ನಾನೇಯ.'' ವೆಂಕಟೇಶ ಹೆದರಿಕೆಯಿಂದ ಕೈಕಟ್ಟಿಕೊಂಡು ನಿಂತ. ಜೇಬಿನಿಂದ ನೋಟೊಂದನ್ನು ಹೊರ ತೆಗೆದ ಪೊಲೀಸು, ನಂಬರ್ ಓದಿ, ''ಇದ್ನ ನೀನೇ ಅಲ್ವಾ ನಿನ್ನೆ ನರ್ಸಿಂಗ್ ಹೋಂನಲ್ಲಿ ಕೊಟ್ಟಿದ್ದು?'' ಕೇಳಿದ. ವೆಂಕಟೇಶ ನೋಡಿದ. ಹೌದು, ಗೌಡರು ಕೊಟ್ಟ ನೋಟೇ!? ವೆಂಕಟೇಶ ಹೌದೆಂದು ತಲೆಯಾಡಿಸಿದ. ''ಇದು ಖೋಟಾನೋಟು ಅಂತ ಸಾಬೀತಾಗಿದೆ. ನಿನ್ನ...'' ಪೊಲೀಸರು ಹೇಳುತ್ತಲೇ ವೆಂಕಟೇಶನ ಕೈ ಹಿಡಿದು ಎಳೆಯಲಾರಂಭಿಸಿದರು. ''ನಾ... ನಾನಲ್ಲಸಾಮಿ ...ಅ...ಅದು ಗೋಡ್ರು ಕೊಟ್ಟಿದ್ದು... ನಾ ಹೇಳುದ್ರೂ, ಕೆ... ಕೇಳ್ರಿಲ್ಲ...'' ವೆಂಕಟೇಶ ಬಡಬಡಿಸುತ್ತ ಪೊಲೀಸರ ಕಡೆ, ಹೆಂಡತಿಯ ಕಡೆ, ಅಕ್ಕ-ಪಕ್ಕ ನಿಂತಿದ್ದವರೆಲ್ಲರ ಕಡೆ ನೋಡಿ ಬೇಡಿಕೊಂಡ. ಸಾವಿತ್ರಿ ಮೌನವಾಗಿದ್ದಳು. ವೆಂಕಟೇಶನನ್ನು ತುಂಬಿಕೊಂಡ ಪೊಲೀಸ್ ಜೀಪು ಬೆನ್ನು ಹಾಕಿ ಭುರ್ರೆಂದು ಹೊರಟುಹೋಯಿತು.

ಬಾಗಿಲು ಮುಚ್ಚಿ ಒಳಬಂದ ಸಾವಿತ್ರಿ, ಚಾಪೆಯ ಮೇಲೆ ಮಲಗಿದ್ದ ಮಗನೆಡೆಗೆ ಬಂದಳು. ಎರಡೆರಡು ಕಂಬಳಿ ಹೊದ್ದು ಮಲಗಿದ್ದರೂ, ಮಲಗಿದ್ದಲ್ಲೇ ತಿಮ್ಮನ ದೇಹ ತಣ್ಣಗಾಗಿತ್ತು. ಸಾವಿತ್ರಿ ಮಗನನ್ನು ಅಲುಗಾಡಿಸಿ ಕರೆದಳು, ಕರೆಯುತ್ತಲೇ ಇದ್ದಳು, ''ತಿಮ್ಮಾ.. ಏಳೋ, ರಾತ್ರಿ ನೀರು ಕೇಳ್ದಿದ್ಯಲ್ಲೋ ಕುಡೀ ತಗಾ... ಏಳೋ ತಿಮ್ಮಾ... ಏಳೋ...''

ಕೆ. ಗಣೇಶ ಕೋಡೂರು
ಶ್ರೀದುರ್ಗಾ ಕ್ಲಿನಿಕ್, ಕೋಡೂರು-೫೭೭೪೧೮
ಹೊಸನಗರ - ತಾ. ಶಿವಮೊಗ್ಗ-ಜಿ.

ಇತ್ತೀಚಿನ ನಾಲ್ಕು ವರ್ಷಗಳಿಂದ ವರ್ಷಕ್ಕೆ ಎರಡೋ, ಮೂರೋ ಸಲ ಶಿವಮೊಗ್ಗದಿಂದ ಬೆಂಗಳೂರಿಗೆ ಹೋಗಬೇಕಾದ ಅನಿವಾರ್ಯ ಸಂದರ್ಭಗಳು ಒದಗಿ ಬರತೊಡಗಿ ಬಸ್‌ನಲ್ಲಿ ಓಡಾಡುವುದೇ ಅನುಕೂಲವೆಂಬ ರಾಯರ ಮರ್ಜಿಗೆ ತಕ್ಕಂತೆ ನಮ್ಮ ಪ್ರಯಾಣ ಬಸ್ಸಿನಲ್ಲೇ ನಡೆಯುತ್ತಿತ್ತು. ಅಂತಾ ಚೆನ್ನಾಗಿ ಮೂರು ಮೂರು ಟ್ರೈನ್‌ಗಳು ಓಡಾಡುವಾಗ ಬಸ್ಸಿನಲ್ಲಿ ಮೈಕೈ ಕುಕ್ಕಿಸಿಕೊಂಡು ಪ್ರಯಾಣಿಸುವ ನಮ್ಮ ದಡ್ಡತನಕ್ಕೆ ಪರಿಚಿತರು ಹಲವರು ಮರುಕ ತೋರಿಸಿ ಲೊಚಗುಟ್ಟುತ್ತಿದ್ದರು. ಅಂತವರ ಪ್ರಕಾರ ರಾತ್ರಿ ಟ್ರೈನಿಗೆ ಹೋಗುವುದು ಬಹಳ ಬುದ್ಧಿವಂತಿಕೆ. ಒಂದು ನಿದ್ದೆ ಹತ್ತಿ ಕಣ್ಣು ಮುಚ್ಚಿ ತೆಗೆಯುವುದರಲ್ಲಿ ಬೆಂಗಳೂರು ಬಂದುಬಿಟ್ಟಿರುತ್ತದೆ. ಅದಕ್ಕೂ ಮಿಗಿಲಾಗಿ ಕುಡಿದ ನೀರು ಅಲ್ಲಾಡದ ಸುಖ ಪ್ರಯಾಣ. ರಾಯರಿಗೆ ತಾಸುಗಟ್ಟಲೆ ಕ್ಯೂನಲ್ಲಿ ನಿಂತು ರಿಸರ್ವೇಶನ್ ಮಾಡಿಸುವುದು ಅಂದರೆ ಅಲರ್ಜಿ. ಅಲ್ಲದೆ ರೈಲಿಗಾದರೆ ಸಮಯಕ್ಕೆ ಸರಿಯಾಗಿ ಮನೆಯಿಂದ ಹೊರಟು ಬಿಡಬೇಕು. ಬಸ್ಸಾದರೆ ಈ ಯಾವುದೇ ತಾಪತ್ರಯವಿಲ್ಲ. ಎಷ್ಟು ಹೊತ್ತಿಗೆ ಶಿವಮೊಗ್ಗದ ಬಸ್‌ಸ್ಟ್ಯಾಂಡಿಗೆ ಹೋದರೂ ಬೆಂಗಳೂರಿಗೆ ಹೋಗುವ ಒಂದಲ್ಲಾ ಒಂದು ಬಸ್ಸು ಸಿಕ್ಕೇ ಸಿಗುತ್ತದೆ. ಅವರ ವಾದವನ್ನು ನಾನೂ ಒಪ್ಪಿಕೊಂಡು ವಿಧೇಯ ಪತ್ನಿಯಂತೆ ಹೂಂಗುಟ್ಟಿ ಬಸ್ ಪ್ರಯಾಣದ ಸುಖದುಃಖಗಳಿಗೆ ಒಗ್ಗಿಕೊಂಡಿದ್ದೆ. ಹೀಗೇ ಇರುವಾಗ ನೆಂಟರೊಬ್ಬರ ಜೊತೆ ನಾವು ದಂಪತಿಗಳು ಬೆಂಗಳೂರಿಗೆ ಹೊರಡಬೇಕಾಯ್ತು. 'ಬಸ್ಸು' ಎಂದೊಡನೆ ಆ ನೆಂಟರು ಬೆಂಕಿ ತುಳಿದವರಂತೆ ಬೆಚ್ಚಿಬಿದ್ದು 'ಟ್ರೈನೇ ಸರಿ' ಎಂದು ಪಟ್ಟು ಹಿಡಿದರು. ಆಯ್ತು. ಬೆಳಗಿನ ಹಾಗೂ ಮಧ್ಯಾಹ್ನದ



# ತಿನ್ನು ತಿನ್ನು ನಾರಿ...

ವಸುಮತಿ ಉಡುಪ

ಟ್ರೈನಿಗೆ ರಿಸರ್ವೇಶನ್‌ನ ರಗಳೆ ಇಲ್ಲ. ಬೆಳಿಗ್ಗೆ ಎಂಟೂ ಇಪ್ಪತ್ತಕ್ಕೆ ಹೊರಡುವ ರೈಲಿಗೆ ನಮ್ಮ ಪ್ರಯಾಣ ನಿಶ್ಚಿತವಾಯ್ತು. ಅದು ಬೆಂಗಳೂರಿಗೆ ನನ್ನ ಮೊಟ್ಟ ಮೊದಲ ರೈಲು ಪ್ರಯಾಣ. 'ಹಲ್ಲಿಗೆ ಹತ್ತು' ಎನ್ನುವ ಒಂದು ಪದ ಪ್ರಯೋಗ ತಾವೆಲ್ಲಾ ಕೇಳಿರಬಹುದೆಂದು ಕೊಳ್ಳುತ್ತೇನೆ. ನನ್ನ ಈ ಮೊದಲ ಪ್ರಯಾಣ ನನಗೆ ಬಹಳ ರುಚಿಸಿಬಿಟ್ಟಿತು. 'ರುಚಿ' ಎಂಬುದನ್ನು ಉದ್ದೇಶಪೂರ್ವಕವಾಗಿ ಬಳಸಿಕೊಂಡಿದ್ದೇನೆ. ಕೂತಲ್ಲೇ ಥರಾಂತರದ ತಿಂಡಿತಿನಿಸು, ಪಾನೀಯ, ಹಣ್ಣುಹಂಪಲು, ಮಂಡಕ್ಕಿ, ಸೇಂಗಾ, ಚಕ್ಕುಲಿ, ವಡೆ... ಬೇಕೆಂಬುದನ್ನು ಸಾಕೆಂಬುವಷ್ಟು ತಿಂದು ಜಿಹ್ವಾ ಚಾಪಲ್ಯವನ್ನು ತಣಿಸಿಕೊಳ್ಳಬಹುದಾದ ಅಪೂರ್ವ ಅವಕಾಶ. ನಿಮಗೆ ಈಗಾಗಲೇ ಅರ್ಥವಾಗಿರಬಹುದು. ಹೌದು, ತಿಂಡಿಪೋತರ ಗುಂಪಿಗೆ ನಾನು ಸೇರಿದವಳೆಂಬುದನ್ನು ನಿಸ್ಸಂಕೋಚವಾಗಿ ಒಪ್ಪಿಕೊಂಡುಬಿಡುತ್ತೇನೆ. ನನ್ನ ಮೊದಲ ಪ್ರಯಾಣದಲ್ಲಿ ನಾನು ಮಾರಾಟಕ್ಕೆ ಬಂದ ಎಲ್ಲವನ್ನೂ ಕೊಂಡು ತಿಂದು ಹೊಟ್ಟೆ ಕೆಡಿಸಿಕೊಂಡೆ ಎಂದು ನೀವು ಭಾವಿಸಿದ್ದರೆ ಅದು ತಪ್ಪು. ಒಂದು ಗುಟ್ಟು ಹೇಳುತ್ತೇನೆ, ಕೇಳಿ. ನಮ್ಮ ರಾಯರು ನನಗೆ ತದ್ವಿರುದ್ಧದ ಜನ. ಎರಡು ಹೊತ್ತು ಹೊಟ್ಟೆ ತುಂಬಾ ಉಂಡುಬಿಟ್ಟರೆ ಮಧ್ಯೆ ಮೆಲುಕಾಡಿಸಬೇಕೆಂಬ ಚಪಲ ಇಲ್ಲವೇ ಇಲ್ಲ. ನನಗೆ ಊಟ ಇಲ್ಲದಿದ್ದರೂ ನಡೆಯುತ್ತದೆ, ಕುರುಕಲು ತಿಂಡಿ ಇರಲೇಬೇಕು. ಈ ವಿಷಯವಾಗಿ ನಮ್ಮಲ್ಲಿ ಸಾಕಷ್ಟು ಸಲ ಜಗಳ ನಡೆದಿದೆ. ಬಸ್ಸಿನಲ್ಲಿ ಬೆಂಗಳೂರಿಗೆ ಹೋಗುವಾಗಿನ ಆರೇಳು ಘಂಟೆಗಳ ಪ್ರಯಾಣದಲ್ಲಿ ಮಧ್ಯೆ ಎಲ್ಲೋ ಒಂದು ಕಡೆ ತನ್ನ ಆಯ್ಕೆಯ ಜಾಗದಲ್ಲಿ ಹದಿನೈದಿಪ್ಪತ್ತು ನಿಮಿಷ ಡ್ರೈವರ್ ಬಸ್ ನಿಲ್ಲಿಸುವ ಪದ್ಧತಿ ಉಂಟಲ್ಲ, ರಾಯರು ಕೂತಲ್ಲಿಂದಲೇ ಕಣ್ಣೆದುರಿನ ಹೋಟೆಲ್‌ನ ಅಂದಾಜು ಹಾಕಿಬಿಡುತ್ತಾರೆ. 'ತಿಂಡಿ ತಿಂತೀಯಾ?' ಎಂದು ಅರೆಮನಸ್ಸಿನಿಂದ ಕೇಳುತ್ತಾರೆ. ನಾನು ಮಾತಾಡುವುದಿಲ್ಲ. ಸಿಟ್ಟು ಒಳಗಿಂದೊಳಗೇ ಇಂಚಿಂಚಾಗಿ ಏರತೊಡಗಿರುತ್ತದೆ. ಸರಿ, ರಾಯರು ಇಳಿದು ಅರ್ಧ ಡಜನ್ ಬಾಳೆಹಣ್ಣು, ಒಂದು ಬಿಸ್ಕತ್ತು ಪ್ಯಾಕೆಟ್ಟು ಕೊಂಡುಕೊಂಡು ಬರುತ್ತಾರೆ. ದೇವರಾಣೆ ನಾನು ಅದನ್ನು ತುದಿ ಬೆರಳಿನಿಂದಲೂ ಮುಟ್ಟುವುದಿಲ್ಲ. ನನಗೆ ತಿಂಡಿ ಬೇಕು, ಕಾಫಿ ಬೇಕು, ಬಾಯಿಬಿಟ್ಟು ಅದನ್ನು ನಾನು ಹೇಳುವುದಿಲ್ಲ, ರಾಯರು ಅರ್ಥಮಾಡಿಕೊಳ್ಳಬೇಕು ಎಂದು ಬಿಗುಮಾನ. 'ಹೋಗಿ ಹೋಗಿ ಇಂತಾ ಕಡೆ ಬಸ್ಸು ನಿಲ್ಲೋದಾ? ಥೆ, ಇಲ್ಲಿ ತಿಂಡಿ ತಿಂದ್ರೆ ಯಾವ ಖಾಯಿಲೆ ಬೇಕಾದ್ರೂ ಬರುತ್ತೆ' ಎಂದು ಪರಿಸರದ ಬಗ್ಗೆ ತಲೆ ಕೆಡಿಸಿಕೊಳ್ಳುವ ರಾಯರು ನನ್ನ ಮುನಿಸನ್ನು ಕಂಡೂ ಕಾಣದಂತೆ ಜಾಣರ ಹಾಗೆ ಇದ್ದುಬಿಡುತ್ತಾರೆ. ಸಾರ್ವಜನಿಕ ಸ್ಥಳದಲ್ಲಿ ಜಗಳ ಆಡುವ ಸಂಸ್ಕೃತಿ ನನ್ನದಲ್ಲವಾದ್ದರಿಂದ ಬಾಯಿ ಬಿಗಿಹಿಡಿಯುತ್ತೇನೆ. ನಮ್ಮ ಗಮ್ಯ ತಲುಪಿದ ಮೇಲೆ ಹಳೆಯ ಬಾಕಿ ತೀರಿಸಿಕೊಳ್ಳುತ್ತೇನೆ. 'ಡ್ರೈವರು, ಬಸ್ಸು ನಿಲ್ಲಿಸಿದಲ್ಲಿ ನಾವು ಹೊಟ್ಟೆ ತುಂಬಿಸಿಕೊಳ್ಳಬೇಕೇ ಹೊರತು ನಮಗೆ ಬೇಕಾದಲ್ಲಿ ಅವನು ಬಸ್ಸು ನಿಲ್ಲಿಸುವುದಿಲ್ಲ' ಎನ್ನುವ ವಿಷಯ ರಾಯರಿಗೆ ಗೊತ್ತಿಲ್ಲದ್ದೇನಲ್ಲ. 'ಎಳನೀರು ಕುಡೀತೀಯಾ?' ಎಂದು ಕೆಲವು ಸಲ ಕೇಳಿ ನಾನು ಮೈಪರಚಿಕೊಳ್ಳುವಷ್ಟು ಸಿಟ್ಟೇಳುವಂತೆ ಮಾಡಿದ್ದೂ ಉಂಟು. ಇದರ ಕಾರಣವನ್ನು ಹೆಮ್ಮಕ್ಕಳು ಸಲೀಸಾಗಿ ಊಹಿಸಬಲ್ಲರು. ಗಂಡಸರಿಗೇನಂತೆ ಬಿಡಿ, ಮುಚ್ಚುಮರೆಯ ಅವಶ್ಯಕತೆಯೇ ಇಲ್ಲ.

''ಇನ್ನು ಮೇಲೆ ತಿಂಡಿ ತಿಂತೀಯಾ? ಅಂತ ನೀವು ಕೇಳ್ಬಾರ್ದು. 'ತಿಂಡಿ ತಿನ್ನೋಣ' ಅನ್ಬೇಕು. ಇಲ್ಲದಿದ್ರೆ ನನಗೆ ಸಿಟ್ಟು ಬರುತ್ತೆ...'' ಎಂದು ಖಡಾಖಂಡಿತವಾಗಿ ತಾಕೀತು ಮಾಡಿದ ಮೇಲೆ ರಾಯರು ಹಾದಿಗೆ ಬಂದರು. ನನಗಷ್ಟೇ ತಿಂಡಿ ಕೊಡಿಸಿ ತಾವು ಜೊತೆಗೆ ಕೂತು ನಾನು ತಿಂಡಿ ತಿಂದು ಮುಗಿಸುವುದನ್ನು ಕಾಯುವ ಅಭ್ಯಾಸ ಬೆಳೆಸಿಕೊಂಡರು. ಇದೆಲ್ಲಾ ಬಸ್ ಪ್ರಯಾಣದ ಸಂದರ್ಭದಲ್ಲಿ ನಡೆಯುತ್ತಿದ್ದ ನಾಟಕ. ಕಣ್ಣೆದುರೇ ಥರಥರದ ತಿನಿಸುಗಳು

ಸಾಗಿಹೋಗುತ್ತಿದ್ದರೂ ನನ್ನ ಮೊದಲ ರೈಲು ಪ್ರಯಾಣದ ಕತೆಯೂ ಇದೇ ಥರ ಆಯ್ತು. ತಿಂಡಿಯೋ, ಕಾಫಿಯೋ, ಮಾರಲು ಬರುವವರ ಇರಸರಿಕೆಯನ್ನು ರಾಯರು ನೋಡುತ್ತಾರೆ. ನಾನು ಯಾವ ತಿಂಡಿ ಎಂದು ಗಮನಿಸುತ್ತೇನೆ. ಮೇಲಾಗಿ ಜೊತೆಯಲ್ಲಿ ನೆಂಟ ಮಹಾಶಯರೂ ಇದ್ದರಲ್ಲ, ಅವರಿಗೆ ಇಪ್ಪತ್ತೆಂಟು ಖಾಯಿಲೆ. ಕಾಫಿ ಬಿಲ್‌ಕುಲ್ ಕುಡಿಯಲೊಲ್ಲರು. ಖಾರ ತಿನ್ನಲೊಲ್ಲರು, ಕರಿದದ್ದು ವರ್ಜ್ಯ. ಅವರೆದುರು ನಾನು ತಿಂಡಿಬಾಕತನ ತೋರಿಸುವುದು ಸೌಜನ್ಯವಲ್ಲವೆಂದು ಬಾಯಿ ಬಿಗಿಹಿಡಿದರೂ ಇನ್ನೊಮ್ಮೆ ಈ ಅವಕಾಶವನ್ನು ಬಳಸಿಕೊಳ್ಳದೆ ಬಿಡಬಾರದೆಂದು ಅವತ್ತೇ ಮಂಡಿಗೆ ಮೆದ್ದೆ. ಮೂರು ತಿಂಗಳ ನಂತರ ಆ ಅವಕಾಶವೂ ಬಂತು ಅನ್ನಿ. 'ರೈಲಿಗೇ ಹೋಗೋಣ' ಎಂದು ಹಟ ಹಿಡಿದು ಒಪ್ಪಿಸಿದೆ. ಯಥಾಪ್ರಕಾರ ಬೆಳಿಗ್ಗೆ ಹೊರಡುವ ರೈಲು. ತಿಂಡಿಯೋ, ಊಟವೋ, ಏನೇ ಇರಲಿ, ಎಡಗೈಲೊಂದು ಪುಸ್ತಕ ಇಲ್ಲದಿದ್ದರೆ ನನಗೆ ತಿಂದಿದ್ದು ತಿಂದ ಹಾಗಾಗುವುದಿಲ್ಲ. ಮೂರ್‍ನಾಲ್ಕು ವಾರ ಹಾಗೂ ಮಾಸಪತ್ರಿಕೆಗಳನ್ನು ಜೋಡಿಸಿ ಬ್ಯಾಗಿನಲ್ಲಿಟ್ಟುಕೊಂಡೆ. ನನಗೆ ಇಷ್ಟವಾದ್ದನ್ನು ಕೊಳ್ಳುವ ಹಕ್ಕು, ತಿನ್ನುವ ಹಕ್ಕು, ನನಗೆ ಉಂಟೆಂದು ರಾಯರಿಗೆ ಮುನ್ಸೂಚನೆ ನೀಡಿದೆ. 'ಚಿಲ್ಲರೆ ಇಲ್ಲ' ಎಂದು ಅವರು ಸಬೂಬು ಹೇಳಬಹುದಾದ ಸಂದರ್ಭ ಊಹಿಸಿಕೊಂಡು ತಕ್ಕಷ್ಟು ಚಿಲ್ಲರೆ ನೋಟುಗಳನ್ನು ವ್ಯಾನಿಟಿ ಬ್ಯಾಗಿನಲ್ಲಿ ಕಾದಿರಿಸಿದೆ. ತಿಂಡಿ ತಿನ್ನುತ್ತಾ, ಪುಸ್ತಕ ಓದುತ್ತಾ, ಹೆಚ್ಚು ಕಮ್ಮಿ ಆರು ಘಂಟೆಗಳ ಪ್ರಯಾಣದ ಸುಖವನ್ನು ಸಖತ್ತಾಗಿ ಅನುಭವಿಸಬೇಕೆಂಬ ಕಲ್ಪನೆಯಿಂದ ಖುಷಿಪಟ್ಟೆ. ಮೊದಲ ಕಂತಾಗಿ ರೈಲ್ವೇಸ್ಟೇಷನ್ನಿನ ಕ್ಯಾಂಟೀನಿನಲ್ಲಿ ಎರಡೆರಡು ಇಡ್ಲಿ, ಸಾಂಬಾರ್ ತಿಂದು ಕಾಫಿ ಕುಡಿದದ್ದಾಯ್ತು. ಅನುಕೂಲವಾದ ಜಾಗ ಹುಡುಕಿಕೊಂಡು ಆರಾಮವಾಗಿ ಕೂರುವುದರೊಳಗೆ, 'ಹೋ, ಬೆಂಗ್ಳೂರಿಗಾ?' ಎನ್ನುವ ದನಿ ಕಿವಿಗೆ ಬಿತ್ತು. 'ಬನ್ನಿ, ಬನ್ನಿ ಇಲ್ಲೇ ಬನ್ನಿ...' ಎಂದು ರಾಯರು ಕರೆದಿದ್ದೂ ಆಯ್ತು. ಅವರಿಗೆ ಪರಿಚಿತರೊಬ್ಬರು ಮಾತಿಗೆ ಸಿಕ್ಕಿದ ಖುಷಿ. ನನಗೆ ನನ್ನ ಆಸೆಯನ್ನು ಈ ಬಾರಿಯೂ ನೆರವೇರಿಸಿಕೊಳ್ಳಲಾಗುತ್ತದೆಯೋ, ಇಲ್ಲವೋ, ಎನ್ನುವ ಕಸಿವಿಸಿ. ಅದು ಆದದ್ದೂ ಹಾಗೇ. ಆರು ಘಂಟೆಗಳ ಪ್ರಯಾಣದಲ್ಲಿ ಪೇಪರ್ ಲೋಟದಲ್ಲಿ ಒಂದು ಲೋಟ ಕಾಫಿ ಕುಡಿದದ್ದು ಬಿಟ್ಟರೆ ಮತ್ತೆ ಯಾವುದನ್ನೂ ಕೊಳ್ಳಲಾಗಲಿಲ್ಲ, ತಿನ್ನಲಾಗಲಿಲ್ಲ. ಬೆಳ್ಳುಳ್ಳಿ, ಖಾರ ಸೇರಿಸಿದ ಘಮಘಮ ಮಸಾಲೆ ಮಂಡಕ್ಕಿಯ ವಾಸನೆಗೆ ನನ್ನ ಬಾಯಲ್ಲಿ ನೀರೂಡೆದರೆ, 'ಥುತ್ ಬೆಳ್ಳುಳ್ಳಿ ವಾಸನೆ..' ಎಂದು ಮೂಗು ಸಿಂಡರಿಸಿಕೊಂಡ ರಾಯರ ಸನ್ಮಿತ್ರರು ನನ್ನ ಕೈ ಕೊಳ್ಳಲು ಹಿಂದೇಟು ಹೊಡೆಯುವಂತೆ ಮಾಡಿಬಿಟ್ಟರು. ಹೆಚ್ಚಿದ ಸೌತೆಕಾಯಿ ಹೋಳು, ಬೇಯಿಸಿದ ಸೇಂಗಾ, ಆರೋಗ್ಯನಿಯಮದ ಪ್ರಕಾರ ವರ್ಜ್ಯ. ಕರಿದಿದ್ದರ ಬಗ್ಗೆ ಮತ್ತೊಂದು ವ್ಯಾಖ್ಯಾನ. ರಸ್ತೆ ಬದಿಯಲ್ಲಿ ತಿಂಡಿ ಮಾಡುವವನೊಬ್ಬ ಎಣ್ಣೆ ಬಾಂಡಲಿ ಕೆಳಗಿಟ್ಟು ಸ್ಟೌವ್ ಹಚ್ಚುವಾಗ ನಾಯಿಯೊಂದು ಆ ಎಣ್ಣೆ ನೆಕ್ಕಿದ್ದನ್ನು ಈತ ಕಣ್ಣಾರೆ ಕಂಡ ಸಾಕ್ಷಿ, ಬೇಯಿಸಿದ ಕಡಲೆಕಾಳಿನ ಉಸುಳಿ ಬಂದಾಗ ಕಿಟಕಿಯ ಕಡೆ ಕಣ್ಣು ಹೊರಳಿಸಿ ಬಹಳ ನಾಜೂಕಿನವಳಂತೆ ತೋರ್ಪಡಿಸಿಕೊಳ್ಳಬೇಕಾದ ಕರ್ಮ. ಆರೋಗ್ಯದ ಬಗ್ಗೆ ಬಹಳ ಕಾಳಜಿ ವಹಿಸುವ ಮಂದಿ ಖಾಯಿಲೆ ಬೀಳುವುದೂ ಬಲು ಬೇಗ ಎಂದು ನನ್ನ ನಂಬಿಕೆ. ಆಕ್ವಾಗಾರ್ಡ್‌ನ ಶುದ್ಧ ನೀರು ಕುಡಿಯುವ ಜನ ಫಿಲ್ಟರ್ ನೀರು ಕುಡಿದರೆ ಕೆಮ್ಮು ಹತ್ತಿಸಿಕೊಳ್ಳುತ್ತಾರೆ. ಫಿಲ್ಟರ್ ನೀರಿನವರು ನಲ್ಲಿ ನೀರನ್ನು ಕುಡಿದರೆ ತಬೀಯತ್ ಏರುಪೇರಾಗುವುದು ಖಂಡಿತ. ಹಾಗಿರುವಾಗ ನಲ್ಲಿ ನೀರಿಗೇ ಹೊಂದಿಕೊಂಡವರು ಖಾಯಿಲೆ ಬೀಳುವ ಸಂಭವ ಕಮ್ಮಿ. ಕೂಲಿ ಕೆಲಸ ಮಾಡುವ ಜನ ಎಲ್ಲೆಂದರಲ್ಲಿ, ಯಾವುದೆಂದರೆ ಆ ನೀರು ಕುಡಿದು ಗಟ್ಟಿಗಡತವಾಗಿಲ್ಲವೇ? ಅದೇ ನಾಜೂಕಾಗಿ ಬೆಳೆಸುವ ನಮ್ಮ ಮಕ್ಕಳಿಗೆ, 'ಆಕ್ಷೀ...' ತಪ್ಪಿದ್ದಲ್ಲ. ಯಾರನ್ನ ಕೇಳಿ, ಯಾವುದೋ ಒಂದು ಅಲರ್ಜಿ. ಇದು ಅಲರ್ಜಿ ಯುಗವೇನೋ ಅನಿಸುವಷ್ಟರ ಮಟ್ಟಿಗೆ ಎಲ್ಲೆಂದರಲ್ಲಿ ಈ ಪದದ ಉಚ್ಚಾರಣೆ ಕಿವಿಯ ಮೇಲೆ ಬೀಳುತ್ತಲೇ ಇರುತ್ತದೆ. ನನ್ನ ಪಾಯಿಂಟ್ ಈಗ ಅರ್ಥವಾಗಿರಬೇಕು ಅಲ್ಲವಾ? ರೋಗನಿರೋಧಕ ಶಕ್ತಿ ಬೆಳೆಸಿಕೊಳ್ಳಬೇಕಾದರೆ ಸಿಕ್ಕಸಿಕ್ಕಲ್ಲಿ ಸಿಕ್ಕಿಸಿಕ್ಕಿದ್ದನ್ನು ತಿಂದು ಜೀರ್ಣಿಸಿಕೊಳ್ಳುವ ತಾಖತ್ತು ಬೆಳೆಸಿಕೊಳ್ಳಬೇಕು. ಇದು ಕುತರ್ಕ ಎಂದು ರಾಯರ ತೀರ್ಪು. ಸಿಕ್ಕಸಿಕ್ಕಲ್ಲಿ ತಿನ್ನುವಾಗ ಆ ತಿನಿಸು ಯಾವ ರೀತಿಯಲ್ಲಿ ತಯಾರಾಗಿದೆ ಮತ್ತು ಯಾವ ರೀತಿಯಲ್ಲಿ ಸಂರಕ್ಷಿಸಲ್ಪಟ್ಟಿದೆ ಎನ್ನುವುದರ ಬಗ್ಗೆ ಪರಿಜ್ಞಾನ ಇರಬೇಕು ಎಂದು ಅವರ ವಾದ. ನಾನು ಒಪ್ಪುವವಳು ಅಲ್ಲವೇ ಅಲ್ಲ, ಬಿಡಿ. ದುಬಾರಿಯ ಹೋಟೆಲ್‌ಗೋ, ದೊಡ್ಡ ದೊಡ್ಡ ಸಮಾರಂಭಗಳಿಗೋ ಸ್ಟೈಲಾಗಿ ಹೋಗಿ ಚಪ್ಪರಿಸುತ್ತಾ ತಿಂದು ಬರುವಾಗ ಇವೆಲ್ಲಾ ನಿಯಮಗಳು ಯಾರ ತಲೆಯಲ್ಲಾದರೂ ಹೊಕ್ಕುವುದುಂಟೇ? 'ನೊಣಗಳಿಗೆ ಪ್ರವೇಶವಿಲ್ಲ' ಎಂದು ಅಲ್ಲೆಲ್ಲಾ ಯಾರಾದರೂ ಬೋರ್ಡ್ ಹಾಕಿ ನೊಣಗಳು ಈ ಅಪ್ಪಣೆಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತವೆಯಂತಾ? ಅಲ್ಲಿ ಅಡುಗೆ ಮಾಡುವವರಿಗೆ ಮೈ ಬೆವರುವುದಿಲ್ಲವಾ? ನೆಗಡಿ ಬರುವುದೇ ಇಲ್ಲವಾ? ಸಮಾರಂಭದ ಊಟವೊಂದರಲ್ಲಿ, 'ಸಾರಿಗೆ ಉಪ್ಪು ಜಾಸ್ತಿ...' ಎಂದು ಯಾರೋ ಉಣ್ಣುವವರು ಹೇಳಿದರಂತೆ. ಪಕ್ಕದಲ್ಲಿದ್ದವರು, 'ಬೇಸಿಗೆ ಕಾಲ ನೋಡಿ, ಅಡುಗೆ ಭಟ್ಟರು ಬೆವರುವುದು ಜಾಸ್ತಿ...' ಎಂದು ಸಮಜಾಯಿಷಿ ಕೊಟ್ಟರಂತೆ. ಇದು ಎಲ್ಲೋ ಕೇಳಿದ ಜೋಕು. ಕಡಿಮೆ ದರ್ಜೆಯದು ಅನಿಸಿದರೆ ಕ್ಷಮಿಸಿ. ನನ್ನ ವಾದಕ್ಕೆ ಪುಷ್ಟಿ ಕೊಟ್ಟುಕೊಳ್ಳಬೇಕೆಂಬ ಭರದಲ್ಲಿ ಕೈತಪ್ಪಿ ಏನೇನೋ ಬರೆದುಬಿಟ್ಟೆ. ತಾವು ಇದನ್ನೆಲ್ಲಾ ಒಪ್ಪಬಹುದು ಅಥವಾ ನಮ್ಮ ರಾಯರಂತೆ ಕಟು ವಿರೋಧ ಸೂಚಿಸಲೂಬಹುದು. ವಾಗ್ವಾದಕ್ಕೆ ನಾನು ಸಿದ್ಧಳಿಲ್ಲ. ನನ್ನ ಪ್ರಕಾರ 'ಶುದ್ಧವಾದ್ದು' ಎನ್ನುವುದು ಎಲ್ಲೂ ದೊರಕುವುದಿಲ್ಲ.

ದವಸಧಾನ್ಯಗಳಿಂದ ಹಿಡಿದು ಎಣ್ಣೆ ಬೆಣ್ಣೆಯವರೆಗೆ ಪ್ರತಿಯೊಂದೂ ಕಲಬೆರಕೆ. ಈಗ ಹಿಂದಿರುಗಿ ಹಳೆಯ ವಿಷಯಕ್ಕೆ ಬರೋಣ. ಬಯಸಿ ಬಯಸಿ ಕೈಗೊಂಡ ರೈಲು ಪ್ರಯಾಣದಲ್ಲಿ ಕಣ್ಣಿಗೆ ಕಂಡ ಯಾವುದನ್ನೂ ಕೊಳ್ಳಲಾಗದೆ ಒಳಗೊಳಗೇ ಕುದಿಯುತ್ತಿದ್ದ ನನ್ನ ಪರಿ ಕಂಡು ರಾಯರಿಗೆ ನಗೆ. ಬೇಕಾದಷ್ಟು ಮಂದಿ ತಿಂದು, ತೇಗಿ ಎಂಜಾಯ್ ಮಾಡುವಾಗ ಇದ್ಯಾವ ಪ್ರಾಣಿ ನಮಗೆ ಗಂಟು ಬಿದ್ದಿತಪ್ಪಾ ಎಂದು ನನಗೆ ಕೆಟ್ಟ ಕೋಪ. ನೀವು ಏನೆನ್ನುತ್ತೀರಿ ಗೊತ್ತು, 'ಯಾರೋ ಏನೋ ಅನ್ನುತ್ತಾರೆಂದು ನಮ್ಮ ಆಸೆಗಳನ್ನು ಯಾಕೆ ಮುಚ್ಚಿಟ್ಟುಕೊಳ್ಳಬೇಕು? ನಮ್ಮ ದುಡ್ಡು ನಮ್ಮ ಹೊಟ್ಟೆ, ಇದೊಳ್ಳೇ ಅತಿರೇಕದ ಮುಜುಗರ' ಎಂದು ತೀರ್ಮಾನಿಸಿಬಿಟ್ಟಿರುತ್ತೀರಿ. ನಮಗೆ ನಾವೇ ಒಂದು ಸಭ್ಯತೆಯ ಮುಖವಾಡ ಹಾಕಿಕೊಂಡು ಬದುಕಲು ಅಭ್ಯಾಸವಾಗಿರುವವರಿಗೆ ಗುರುತಿನವರೊಬ್ಬರ ಎದುರು ನಿಸ್ಸಂಕೋಚವಾಗಿ ನಮಗೆ ಬೇಕಾದಂತಿರಲು ಏನೋ ಒಂದು ಅಳುಕು ಅಡ್ಡ ಬಂದುಬಿಡುತ್ತದೆ. ಈ ಅಳುಕಿನ ಹಿಂದೆ ನಮ್ಮ ಸ್ಟೇಟಸ್ ಅಥವಾ ಸಾಮಾಜಿಕ ಪ್ರತಿಷ್ಠೆ ಎಂಬುದು ಪ್ರಜ್ಞಾಪೂರ್ವಕವಾಗಿ ಕೆಲಸ ಮಾಡುತ್ತಿರುತ್ತದೆ. ಡೆಪ್ಯುಟಿ ಕಮಿಷನರ್ ಒಬ್ಬರು ಮುಸ್ಸಂಜೆಯ ತಂಗಾಳಿಯಲ್ಲಿ ಸಾರ್ವಜನಿಕ ಪಾರ್ಕಿನ ಹುಲ್ಲು ಹಾಸಿನ ಮೇಲೆ ಕೂತು ಹುರಿದ ಕಡಲೇಕಾಯಿ ಬಿಡಿಸಿ ತಿನ್ನುವ ದೃಶ್ಯವನ್ನು ಕಲ್ಪಿಸಿಕೊಳ್ಳಬಲ್ಲಿರಾ? ಅವರಿಗೆ ಎಷ್ಟೇ ಆಸೆ ಇದ್ದರೂ ಅವರಿಂದ ಹಾಗಿರಲು ಬಿಲ್‌ಕುಲ್ ಸಾಧ್ಯವಿಲ್ಲ. ಮನುಷ್ಯ ಸಮಾಜದ ಕಣ್ಣಲ್ಲಿ ಎತ್ತರದ ಸ್ಥಾನಕ್ಕೆ ಏರಿದಂತೆಲ್ಲಾ ಜೀವನದ ಸಣ್ಣ ಸಣ್ಣ ಸುಖಗಳಿಗೆ ತಿಲಾಂಜಲಿ ಕೊಡಬೇಕಾದ್ದು ಬಹುಶಃ ಅನಿವಾರ್ಯ. ಎಸ್. ವಿ. ಪರಮೇಶ್ವರಭಟ್ಟರು ಒಂದು ಕತೆ ಹೇಳುತ್ತಿದ್ದರಂತೆ. ನಮ್ಮ ರಾಯರು ಹೇಳಿದ್ದು. ಒಬ್ಬಾನೊಬ್ಬ ರಾಜ. ಆ ರಾಜ ಭೋಜನಕ್ಕೆ ಕೂತಾಗ ಊಳಿಗದವನೊಬ್ಬ ಸಮೀಪದಲ್ಲಿ ನಿಂತು,

'ಮಹಾಸ್ವಾಮಿಗಳು ಪರಮಾನ್ನ ಸ್ವೀಕರಿಸಬೇಕು..........'

'ಮಹಾಸ್ವಾಮಿಗಳು ತೊವ್ವೆ ಸ್ವೀಕರಿಸಬೇಕು' ಎಂದು ರಾಜ ಸ್ವೀಕರಿಸಬೇಕಾದ್ದನ್ನು ಸೂಚಿಸುವ ಕೆಲಸ ಮಾಡುತ್ತಿದ್ದನಂತೆ. ಅವನು ಹೇಳಿದ್ದನ್ನು ರಾಜ ರುಚಿ ನೋಡುತ್ತಿದ್ದನಂತೆ. ಒಂದು ಸಲ ರಾಜನಿಗೆ ಹರಿವಾಣದಲ್ಲಿ ಬಡಿಸಿದ ನೀರುಳ್ಳಿ ಚಟ್ನಿಯನ್ನು ತಿನ್ನಬೇಕೆಂದು ಬಲವತ್ತರವಾದ ಆಸೆ. ಪಾಪದ ಊಳಿಗದವನಿಗೆ ಅಂತಹ ಕನಿಷ್ಠ ಮಟ್ಟದ ವಸ್ತುವನ್ನು ಮಹಾರಾಜರ ಅವಗಾಹನೆಗೆ ತರಲು ಸಂಕೋಚವೋ, ಉಪೇಕ್ಷೆಯೋ, ಏನೋ ಒಂದು. ತಾಳ್ಮೆ ತಪ್ಪಿದ ರಾಜ, 'ನೀರುಳ್ಳಿ ಚಟ್ನಿ ಸ್ವೀಕರಿಸಬೇಕು ಅಂತ ಬೊಗಳೋ...' ಎಂದು ಆಜ್ಞೆ ಮಾಡಿ ಅವನಿಂದ ಹಾಗೆ ಹೇಳಿಸಿಕೊಂಡು ಚಟ್ನಿ ತಿಂದನಂತೆ. ತನ್ನ ಅಂತಸ್ತಿನ ಪ್ರತಿಷ್ಠೆಗೆ ಕುಂದು ಬರದಂತೆ ಆಸೆಯನ್ನು ಅದುಮಿಟ್ಟುಕೊಳ್ಳುವುದು ಮಹಾರಾಜನಿಗೂ ಸಾಧ್ಯವಾಗಲಿಲ್ಲ. ನಮಗಿದೆಯೆಂದು ನಾವೇ ನಂಬಿಕೊಂಡಿರುವ ಈ ಪ್ರತಿಷ್ಠೆ ಕೆಲವೊಮ್ಮೆ ಪೊಳ್ಳು ಪ್ರತಿಷ್ಠೆಯಾಗಿರಲೂಬಹುದು. ಏನೇ ಇರಲಿ, ಇದರ ದೆಸೆಯಿಂದ ಪರಿಚಿತವೆನಿಸಿದ ವಲಯದಲ್ಲಿ ಮುಖವಾಡ ಹಾಕಿಕೊಂಡು ಬದುಕುವುದನ್ನು ಅಭ್ಯಾಸ ಮಾಡಿಕೊಂಡುಬಿಟ್ಟಿರುತ್ತೇವೆ. ನಾವು ಮೈ ಛಳಿ ಬಿಟ್ಟು ಖುಷಿ ಬಂದಂತಿರಬೇಕಾದರೆ ನಮ್ಮನ್ನು ಗುರ್ತಿಸುವವರ್‍ಯಾರೂ ಅಲ್ಲಿರಬಾರದು ಎನ್ನುವುದೊಂದು ಸತ್ಯ. ಶಿವಮೊಗ್ಗದಲ್ಲಿ ಯಾವ ಕಾಲದಿಂದಲೋ ಪಾನೀಪೂರಿ ಗಾಡಿಗಳು ರಸ್ತೆ ಬದಿಯಲ್ಲಿ ಮಾರಾಟ ನಡೆಸುತ್ತಿದ್ದರೂ ಅದು ಹೇಗಿರಬಹುದು ಎಂದು ಕಲ್ಪಿಸಿಕೊಂಡಿದ್ದೇ ಹೊರತು ಕೊಂಡು ತಿನ್ನುವ ಧೈರ್ಯ ಬರಬೇಕಾದರೆ ಹಲವು ವರ್ಷಗಳು ಬೇಕಾಯ್ತು. ರಸ್ತೆ ಬದಿಯಲ್ಲಿ ಕೊಂಡು ತಿನ್ನುವುದು ಮಹಾಪರಾಧವಲ್ಲ ಮತ್ತು ಯಾರಾದರೂ ನೋಡಿದಲ್ಲಿ ಮರ್ಯಾದೆ ಮೂರುಕಾಸಿಗೆ ಹರಾಜಾಗುವುದೂ ಇಲ್ಲ; ನಾಲಿಗೆ ಚಪಲ ಎಲ್ಲರಿಗೂ ಇದ್ದದ್ದೇ. ಆದರೂ ಏನೋ ಹಿಂಜರಿಕೆ. ದೊಡ್ಡದೊಡ್ಡ ಪಟ್ಟಣಗಳಲ್ಲಾದರೆ ಯಾರನ್ನೂ ಯಾರೂ ಗಮನಿಸುವುದಿಲ್ಲ ಮತ್ತು ಯಾರೂ ಯಾರಿಗೂ ಕೇರ್ ಮಾಡುವುದಿಲ್ಲ ಎಂದು ನನ್ನ ತಿಳುವಳಿಕೆ. ಶಿವಮೊಗ್ಗ ದೊಡ್ಡ ಪಟ್ಟಣವೇನಲ್ಲ. ಯಾವ ಬೀದಿಯಲ್ಲಿ ಹೋದರೂ ಪರಿಚಯದವರೊಬ್ಬರು ಕಣ್ಣಿಗೆ ಬಿದ್ದೇ ಬೀಳುತ್ತಾರೆ. ರಾಯರಂತಾ ಉದ್ಯೋಗದವರಿಗೆ ಮಾರಿಗೊಬ್ಬರು ಭೆಟ್ಟಿಯಾಗಿ ನಮಸ್ಕಾರ ಹೇಳುತ್ತಾರೆ. ಆ ವಿಷಯ ಇರಲಿ, ಆ ದಿನದ ಪ್ರಯಾಣದಲ್ಲಿ ನನಗಾದ ನಿರಾಶೆಯನ್ನು ಇನ್ನೊಂದು ದಿನ ತುಂಬಿಕೊಳ್ಳಲೇಬೇಕೆಂದು ಪಟ್ಟು ಹಿಡಿದು ರೈಲು

ಪ್ರಯಾಣಕ್ಕೇ ಅಂಟಿಕೊಂಡದ್ದಾಯ್ತು. ನೀವು ನಂಬಿದರೆ ನಂಬಿ, ಬಿಟ್ಟರೆ ಬಿಡಿ, ನಾವು ಹೊರಟಾಗಲೆಲ್ಲಾ ಒಬ್ಬರಲ್ಲಾ ಒಬ್ಬರು ಪರಿಚಯದವರು ನಮ್ಮ ಸಹಪ್ರಯಾಣಿಕರಾಗಿ ಗಂಟು ಬೀಳುತ್ತಾರೆ ಮತ್ತು ನನ್ನ ಸಣ್ಣದೊಂದು ಆಸೆಯನ್ನು ಈಡೇರಿಸಿಕೊಳ್ಳುವುದರಲ್ಲಿ ವಿಘ್ನಕಾರಕರಾಗುತ್ತಾರೆ. ಒಬ್ಬರಲ್ಲಾ ಒಬ್ಬರು ಎಂದು ಬರೀದೇ ಮಾತಿಗೆ ಹೇಳಿದ್ದಷ್ಟೇ. ರಾಯರ ಗುರ್ತಿನವರು ನಾಲ್ಕಾರು ಜನರಾದರೂ ನಮ್ಮ ಪ್ರಯಾಣದ ವೇಳೆಯಲ್ಲಿ ಕಣ್ಣಿಗೆ ಬೀಳುವುದು ಯಾವತ್ತೂ ತಪ್ಪಿಲ್ಲ. ಇದಕ್ಕೆಲ್ಲಾ ಕಾರಣ ರಾಯರ ಉದ್ಯೋಗ. ಒಂದೇ ಕಾಲೇಜಿನಲ್ಲಿ ಹಲವಾರು ವರ್ಷ ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಇದ್ದವರಿಗೆ ಎಷ್ಟು ಸಾವಿರ ಜನ ಶಿಷ್ಯರಾಗಿರಬಹುದು? ರಾಯರಿಗೆ ಮರೆತಿದ್ದರೂ ಅವರಾಗಿ ಬಂದು ನಮಸ್ಕಾರ ಹೇಳಿ ಮಾತಾಡಿಸುವುದು ನಡೆದೇ ನಡೆಯುತ್ತದೆ. ಈಗ ಹೇಳಿ, 'ಮೇಷ್ಟ್ರ ಹೆಂಡ್ತಿ ಬಂದದ್ದೆಲ್ಲಾ ಕೊಂಡು ತಿಂತಿದ್ರಪ್ಪಾ...' ಎನ್ನುವ ಅಪಹಾಸ್ಯದ್ದೋ, ನಗೆಚಾಟಿಕೆಯದೋ ಮಾತು ಬಂದೀತೆಂದು, ಆ ಅಂಜಿಕೆ ಕಾಲ್ಪನಿಕವಾಗಿದ್ದೇ ಆಗಿರಲಿ, ನಾನು ಅಂಜಬೇಕೋ, ಬೇಡವೋ? ಕಾಲೇಜು ಹುಡುಗರಾಗಿದ್ದರಂತೂ ಬಿಡಿ, ಅಡ್ಡ ಹೆಸರು ಇಡುವುದರಲ್ಲಿ ನಿಸ್ಸೀಮರು.

'ತುಟಿಗೂ ತುತ್ತಿಗೂ ನಡುವೆ ಎನಿತು ಅಂತರ..' ಎನ್ನುವ ಸಾಲಿನ ನೆನಪಾಗಿ ನನ್ನ ನಿಟ್ಟುಸಿರ ಬಿಸಿಗೆ ನಾನೇ ಕರಗುತ್ತೇನೆ. ಬಯಸಿದ್ದೆಲ್ಲಾ ಕೈಗೆ, ಕಣ್ಣಿಗೆ ಎಟುಕುವಂತಿದ್ದರೂ ಅದನ್ನು ಅನುಭವಿಸುವುದಕ್ಕೆ ಪಡೆದು ಬಂದಿರಬೇಕು. ಈ 'ಪಡೆದು ಬಂದದ್ದು' ಎನ್ನುವುದು ಹಣೆಬರಹದಲ್ಲಿ ಇಲ್ಲದಿದ್ದರೆ ಯಾವುದನ್ನು, ಯಾರಿಂದಲೂ ಅನುಭವಿಸಲು ಸಾಧ್ಯವಿಲ್ಲ ಎನ್ನುವ ಅಧ್ಯಾತ್ಮಕ್ಕೆ ಸೇರಿರಬಹುದಾದ ದೊಡ್ಡ ದೊಡ್ಡ ಮಾತುಗಳ ಮರೆಯಲ್ಲಿ ನಾನೀಗ ಸಮಾಧಾನ ಕಂಡುಕೊಂಡಿದ್ದೇನೆ.

**ವಸುಮತಿ ಉಡುಪ**
'ಗೌರಿ', ೪ನೇ ಕ್ರಾಸ್, ಗಾಂಧೀನಗರ ಎಕ್ಸ್‌ಟೆನ್ಷನ್, 'ಎ' ಬ್ಲಾಕ್, ಶಿವಮೊಗ್ಗ-೫೭೭ ೨೦೧

# ಗುಬ್ಬಿ, ಮಗು, ಬಸಳೆಬಳ್ಳಿ-ನಾನು



ಹರಗು ನೀ ಒಳಗು ಹೊರಗು! ಗುಬ್ಬಿ ಗೂಡು
ಕಟ್ಟುತ್ತಿಲ್ಲ, ಕೊರಳ ಚಿಲಿಪಿಲಿಯ ನಿನದ ಆರಿಹೋಯಿತು
ಎಲ್ಲಿ? ಬರುಡ ಬರವೂ ಇಣುಕಿ ಹೋಯಿತಲ್ಲ?
ಸಾವು ತಂದಂತೆ ಮೌನ; ಮನದ ಮೊನೆಯೇ
ನೀ ಕೇಳು? ಕಾಳಗದ ಹುಲಿರಾಯ, ಚಿರತೆಯ ಓಟ
ನೆನಪು ಸುಮ್ಮನೆ: ಕಣ್ಮನಗಳ ತುಂಬ ನನಗೆ ನನ್ನದೇ
ಹೊಸಮನೆಯ 'ಸೃಷ್ಟಿ' ಸೆಲೆಯ ಸೊಬಗು! ಚಿಗುರು ಬಳ್ಳಿಯ
ಮರೆಯಲ್ಲಿ ಸೋಜಿಗದ ಪರಿ, ಏನಿದರ ಸೂಕ್ಷ್ಮ ಗರಿ;
ಯಾವುದಿದರ ನಿಜದ ಗುರಿ? ಹೌಹಾರಿದ್ದು ಸರಿಯೇ ಸರಿ.

೨

ಕಂಡದ್ದು, ಕಾಣಿಸಿಕೊಂಡದ್ದು ನಿಜವಾಗಿಸುತ್ತ
ಸುತ್ತ ಕಣ್ಣಾಡಿಸಿ, ಉಸಿರಾಡಿಸಿ, ನೀರಡಿಸಿದೆದೆಗೆ
ಹನಿಸಿದಂತೆ ತಂಪು. ನನ್ನ ಕಂದ ಕಾಣಿಸಿದ್ದು
ಅನುಭವಿಸಿ ಹೇಳಿದ್ದು ಎಲ್ಲ ವಿಸ್ಮಯ ! ಮೌನ,
ಮಗು ಕಾಣಿಸಿದ ಕ್ಷಣ; ಕ್ಷೀಣ ನೋಟ ಇನ್ನೂ
ನೋಡುತ್ತ...

ಗುಬ್ಬೆ - ಕಂದಗಳ ಮುಖದ ಪರಿಮಳ ಎಷ್ಟು
ಸರಳ ಸಂಬಂಧ? ಕರುಳ ಬಳ್ಳಿ, ಬಣ್ಣ ಬಳಿದ
ಸಿಂಗಾರ ಕಿಟಕಿಯ ಸುತ್ತ, ಅಣಕಿಸುತ್ತ ಬಯಲಾಗಿ
ಹಬ್ಬಿ, ತನ್ನೊಳಗೆ ತಾನು ಉಬ್ಬಿ, ಪ್ರೀತಿಸಿದವರ
ತಬ್ಬಿ, ಗಗನ ಮಲ್ಲಿಗೆಯಂತೆ ನಸುನಕ್ಕು
ಸೃಷ್ಟಿ - ಲಯಗಳ ಬಂಧವಾಗಿ ಬೆಳೆದ ಬಸಳೆಬಳ್ಳಿ – ನಾನು
ಬದುಕಿದ್ದು ಹಳ್ಳಿ. ಗುಬ್ಬಿ ಗೂಡು ಕಟ್ಟಲು ಇರಬೇಕು
ಆಯಕಟ್ಟಿನ ಸ್ಥಳ. ಯಾವ ಸ್ಥಳವೂ ನಮ್ಮದಲ್ಲ!
ಸೂತ್ರಬಿಟ್ಟೆ, ಜಾರಿ ಹೋಗಿರಬೇಕು ಭಾವನೆಗಳು
ಕಂದ ಮಾತನಾಡಿದ ಈಗ:

'ಅಪ್ಪಾಜಿ ಗುಬ್ಬಿಯ ಗೂಡು ನೋಡು, ಅದರ ಒಳಗಡೆ
ಇಳಿದು ನೋಡು, ನಾಲ್ಕು ಮಕ್ಕಳ ನೋಡು - ಸ್ವಲ್ಪ ತಡೆ:'
ನನಗೂ ನಿಲುಗಡೆ ಉಸಿರ ಮಧ್ಯೆ ಗರಬಡಿದಂತೆ
ಗೊಮ್ಮಟ! 'ಗುಬ್ಬಿ ಗುಟಕಿಟ್ಟು ಹಾರಿ ಹೋಗುವುದ ತೋರಿಸಿದ,
ತಾಯಿ ಬರುವುದ ಕಂಡು, ಜಾರಿ ಅಗಲುವುದ ಕೇಳಿ –
ಎಷ್ಟು ಸೂಕ್ಷ್ಮತೆಯ ಸ್ಪಂದನ ಎಂದ ಕಂದ.'

'ಏನೆಂದೆ ಮಗು' ಎಂದೆ ಇನ್ನೊಮ್ಮೆ.
'ಇಷ್ಟೂ ತಿಳಿಯುವುದಿಲ್ಲವೆ ನಿನಗೆ ಎಂದ.'
ಕಂದನ ಈ ಗದರಿಕೆ ಜೀವದ ಬೆದರಿಕೆಯೂ
ಆಯಿತು ನನಗೆ. ಹೇಗೆ? ಜಗದ ಒಡಲೊಳಗೆ
ಸೋರಿ ಹೋದ ಈ ಸೂಕ್ಷ್ಮತೆಯ ಅರಿವು-ಮರೆವಿನ
ಗಳಿಗೆ ನನ್ನ ನೆರವಿಗೆ ಬಂದದ್ದು ಕಂಡು –
ಗಂಧವಾಯಿತು ಗಾಳಿ ಎಂದೆ !
ಇಷ್ಟಕ್ಕೆ ಕಂದ ತನ್ನಾಟದಲ್ಲಿ ಮಗ್ನ, ನನಗದೇ ಧ್ಯಾನ...

೩

ಬಳ್ಳಿ, ಗೂಡು, ಗುಬ್ಬಿಯ ಸಾಮೀಪ್ಯ –
ಏನಂತ ಹೇಳಲಿ ಕವಿ ಹೃದಯ ತಳಮಳ?
ಕರಗಿಬಿಡುವ ಎದೆಭಾರ ಬಗೆಯ?
ಕಾಲ ಕರಗಿತ್ತು, ಬಳ್ಳಿ ಮತ್ತೆ ಬೆಳೆದಿತ್ತು
ಹುಲುಸಾಗಿ, ಮಳೆ ಬಂದು ಭೂಮಿ ಋತುಮತಿಯಾಗಿ
ಹಿತವ ನೀಡಿ 'ಕತೆಯಾದ ಬಡವನಿಗೆ ಕದ್ದು
ಬೆಲ್ಲವ ನೀಡಿದಂತೆ' ಬದುಕು ಜಟಕಾಬಂಡಿ
ಕಾಣುವ ಕಂಗಳಿಗೆ ಚಂದ ಗಣಪನ ಸೊಂಡಿ !
ಕುಡಿಯಲಿಕ್ಕೆ ನೀರಾದರೂ ಇರಲಿ – ಕೊನೆಗೆ,
ಹಸಿದ ಹೊಟ್ಟೆಗೆ ಬಿದ್ದ ಬೆಂಕಿ ಆರಿಸಲಕ್ಕಾದ–
ರೂ ಬೇಕಲ್ಲ – ಎಂದದ್ದು ಸತ್ಯ.

೪

ಮೂರು ದಿನವ ಕಳೆದು ಮರುದಿನವ ಮುಗಿದು
ಮತ್ತೆ ಒಂದು ವಾರದ ಸಂಬಂಧ : ಗುಬ್ಬಿ - ಗೂಡು
ನನ್ನ ನಡುವೆ. ಮರೆತೆನಲ್ಲ ಮರಿಗುಬ್ಬಿಗಳ ಸಹವಾಸ?
ಅದರ ವಿಷಯ ಇನ್ನೂ ಆಳ ಹೇಳುವೆ
ತೊಳೆದು ಇಟ್ಟಂತೆ ಹವಳ – ಅನುಭಾವಿಸುವುದೇ ಕಳವಳ.

೫

ಏನು ಬಂತು ಬಿರುಗಾಳಿ ಎದೆಗೆ ಒತ್ತಿಕೊಂಡ 'ಸೃಷ್ಟಿ'ಗೆ?
ಪ್ರಾಣವಾಗಿ ಬಂದು ಗಾಣ ಹೂಡಿ ಹೋದ ಸಂಗತಿ.
ಸಣ್ಣ ಜೀವತಂತು, ತಂತಿ ಮೇಲಿನ ನಡುಗೆ, ಆಯತಪ್ಪಿದ
ಸೂಚನೆ : ಕನವರಿಕೆ ಕನಸು ಎಂದೆ. ಗುಬ್ಬಿ, ಗೂಡು,
ಅದರ ಜೀವ ಸಂಕುಲ – ಅಪ್ಪಳಿಸಿದ ಹಡಗು ದಡಕ್ಕೆ.
ಮೇಲಕ್ಕೆ ಅಳುವ ಎಲೆ-ಬಳ್ಳಿ. ಕೆಳಕ್ಕೆ ಮಣ್ಣ ಹುಡಿ,
ಜೀವಬಿಟ್ಟ ಕುಡಿ. ಹಡೆದ ತಾಯ ಗುಬ್ಬಿಯ ಹೆಣ!
ನನ್ನ ಮನ - ಮನೆ ಬಣ ಬಣ. ಕಂದನ ಕಣ್ಣಲ್ಲಿ ನೀರು,
ಹೇಳುತ್ತಿತ್ತು ಅದರ ನಿತ್ಯ ಕತೆಯ. ಬತ್ತದಾ ಗಂಗೆ
ಒಂದು ಸಾರಿ ಹೀಗೆ : ಒತ್ತಿದಳು ಮನದ ಮೂಲೆ
ಬತ್ತಿದಳು ಬಲಿಯಾಗಿ – ಹರಿವ ಹರೆಯ !

೬

ಎಲ್ಲ ಕೇಳಿಸಿಕೊಂಡ ಕಲ್ಲುವೀಣೆ ನುಡಿಯಿತು
ಮೌನಗಾನ, ಮೇಣ ಬಸದಿ ಮೇಲೆ ಮನಸ್ಸು:
ಹಾರಿ ಹೋದ ಹದ್ದು ನೆನಪು –
ನನ್ನೆದೆಗೂ ಕುಕ್ಕಿ ಬಿಟ್ಟ ಅದೇ ಸದ್ದು !

**ಡಾ. ಗುಂಡಣ್ಣ ಕಲಬುರ್ಗಿ**
ಕನ್ನಡ ವಿಭಾಗ, ಕಲಾ ಮತ್ತು ವಾಣಿಜ್ಯ ಕಾಲೇಜು
ಮೂಡಲಗಿ ಅಂಚೆ, ಬೆಳಗಾಂ ಜಿಲ್ಲೆ - ೫೯೧೩೧೨

# ಸುದಕ್ಕೈಗಾರಿಕೆ

ಎಷ್ಟೋ ವರ್ಷಗಳ ನಂತರ ದಿಢೀರನೆ ಭೂಮಿಯ ಹತ್ತಿರ ಬಂದು ಹಲೋ ಹೇಳಿ ಹೋಗುವ ಧೂಮಕೇತುವಿನ ಹಾಗೇ ಸ್ಕೂಲು ದಿನಗಳ ಗೆಳತಿಯರು ಸಡನ್ನಾಗಿ ಸಿಕ್ಕಿ 'ನೆನಪಿದ್ಯೇನೇ' ಎಂದು ಎದುರು ನಿಲ್ಲುತ್ತಾರೆ. ಹಳೇ ಧೂಮಕೇತುವಿಗೆ ಹೊಸ ಬಾಲ ಬಂದ ಹಾಗೆ ಅವರುಗಳ ಹಿಂದೆಯೂ ಬಾಲಂಗೋಚಿಗಳು, ಧೂಳಿನ ಕಾರ್ಮೋಡಗಳು ಇದ್ದರೂ ಶಿರೋಕೇಂದ್ರವು ಅದೇ ಹಳೆಯದೇ ಆಗಿರುವುದರಿಂದ ಹಿಂದಿನ ಆತ್ಮೀಯತೆಯೇ ಇರುತ್ತದೆ.

ಅವತ್ತು ಹಾಗೆಯೇ ಆಯ್ತು. ಚಿನ್ನ ಬೆಳ್ಳಿ ಅಂಗಡಿಯಲ್ಲಿ ಶಾರಿ ಸಿಕ್ಕಿದಳು. ಸ್ಕೂಲಲ್ಲಿದ್ದಾಗ ಹಂಚಿಕಡ್ಡಿಯ ಹಾಗಿದ್ದವಳು ಈಗ ಒಳ್ಳೇ ಬೀಟೆ ಮರದ ಹಾಗೆ ಸುವಿಶಾಲವಾಗಿ ಕಣ್ಣು ಕೋರೈಸುವಂತಾಗಿದ್ದಳು. ನನ್ನ ಕಣ್ಣು ಕೋರೈಸಿದ್ದು ಅವಳು ಅನ್ನುವುದಕ್ಕಿಂತ ಅವಳ ಕತ್ತು, ಕಿವಿ, ಕೈ-ಕಾಲು, ಸೊಂಟ ಹೀಗೆ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ ತುಂಬಿಕೊಂಡಿದ್ದ ಚಿನ್ನ ಎಂದರೆ ತಪ್ಪಾಗುವುದಿಲ್ಲ.

**ಡಾ|| ಜಾನಕಿ ಸುಂದರೇಶ್**



''ಅಯ್ಯೋ ನೀನೇನೇ ಮಾರಾಯ್ತೀ'' ಎಂದು ಬೆನ್ನಿಗೆ ಎರಡೆರಡು ಗುದ್ದಿಕೊಂಡು ಒಬ್ಬರನ್ನೊಬ್ಬರು ಮಿಕಿಮಿಕಿ ಶಿರಸಾಷ್ಟಾಂಗ ನೋಡಿಕೊಂಡು ಒಂದಿಷ್ಟು ಹರಟಿದ ಮೇಲೆ ಅವಳು ಆರಿಸಿಟ್ಟುಕೊಂಡ ಬೆಳ್ಳಿ ವಸ್ತುಗಳ ಮೇಲೆ ನನ್ನ ಕಣ್ಣು ಬಿತ್ತು. ಒಂದು ರಾಶಿ ಬೆಳ್ಳಿಯ ಸಾಮಾನು. ಬೆಳ್ಳಿಯ ಪ್ರಭಾವಳಿ, ದೀಪ, ಪೀಠ, ತಟ್ಟೆ, ಚೊಂಬು, ಏನೇನೋ ಆರತಿಗಳು, ಇತ್ಯಾದಿ ಲಕ್ಷಗಟ್ಟಲೆ ಲೆಕ್ಕ ಹಾಕುವಂಥವು.

''ಏನೇ, ಇಷ್ಟೊಂದು ಬೆಳ್ಳಿ ಸಾಮಾನು, ಯಾರಿಗೆ?'' ಎಂದೆ.

''ಇನ್ನ್ಯಾರಿಗೆ, ನಮಗೇ'' ಎಂದು ನಕ್ಕಳು.

''ಏನು ಮಗಳಿಗೆ ಮದುವೆ ಫಿಕ್ಸಾಯ್ತಾ? ಇಷ್ಟೊಂದೆಲ್ಲಾ ಬೆಳ್ಳಿ ಸಾಮಾನು ಡಿಮ್ಯಾಂಡ್ ಮಾಡಿದಾರಾ?''

''ಅಯ್ಯೋ, ಅಯ್ಯೋ, ಇಷ್ಟೊಂದು ಕಾಸ್ಟ್ಲೀ ಬೆಳ್ಳಿ ಥಿಂಗ್ಸ್‌ನ ಅವರಿಗೆ ಕೊಟ್ರೆ ಆಯ್ತು ಮತ್ತೆ. ಇಷ್ಟಕ್ಕೂ ಮಗಳ ಮದುವೆ ಆಗಿ ಒಂದು ವರ್ಷಾನೇ ಕಳೀತು. ಇನ್ನೇನು ಕೊಡೋ ಗಿಡೋ ಪಂಚಾಯ್ತಿ ಇಲ್ಲ. ಕೊಡು ಅಂದ್ರೆ ಕೊಡುವುದು ಪೊಲೀಸ್ ಕಂಪ್ಲೆಂಟ್ ಮಾತ್ರ'' ಎಂದಳು.

''ಎಷ್ಟು ಬಿತ್ತು?... ಅಂದ್ರೇ... ಅದೇ ಮಗಳ ಮದುವೆಗೆ ಎಷ್ಟು ಖರ್ಚಾಯ್ತು?'' ಪೇಟೆ ಧಾರಣೆ ತಿಳಿದುಕೊಳ್ಳುವ ಉದ್ದೇಶದಿಂದ ಕೇಳಿದೆ. ಆಗಷ್ಟೆ ಮನೆ ಕಟ್ಟಿದವರನ್ನ, ಮದುವೆ ಮಾಡಿದವರನ್ನ, ಮಕ್ಕಳಿಗೆ ಡೊನೇಷನ್ ಸೀಟು ಕೊಡಿಸಿದವರನ್ನ ಸಾಮಾನ್ಯವಾಗಿ ಕೇಳುವ ಪ್ರಶ್ನೆ ಅದು.

''ಬೀಳಲೂ ಇಲ್ಲ ಏಳಲೂ ಇಲ್ಲ. ಖರ್ಚೇ ಇಲ್ಲದೆ ಮದುವೆ ಆಗೋಯ್ತು. ಕ್ಯಾಂಪಸ್ ರಿಕ್ರೂಟ್‌ಮೆಂಟು. ರಿಜಿಸ್ಟರ್ಡ್ ಮ್ಯಾರೇಜು'', ಎಂದಳು ಮುಗುಮ್ಮಾಗಿ.

ನನಗೆ ಹೊಟ್ಟೆ ಕಿಚ್ಚಿಂದ ಕರುಳೆಲ್ಲಾ ಗಂಟು ಗಂಟಾಯ್ತು. ಕ್ಯಾಂಪಸ್ ರಿಕ್ರೂಟ್‌ಮೆಂಟು ! ಐ.ಐ.ಟಿ.ಗಳಲ್ಲಿ ರೀಜನಲ್ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಲಿಯುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಹುಡುಕಿಕೊಂಡು ಪ್ರತಿಷ್ಠಿತ ಕಂಪೆನಿಗಳು ಕಾಲೇಜು ಕ್ಯಾಂಪಸ್ಸಿಗೆ ಬರುತ್ತವೆ. ಬಂದು ಆ ಹುಡುಗರ ಡಿಗ್ರಿ ಮುಗಿಯುವ ಮೊದಲೇ ಲಕ್ಷಾಂತರ ಸಂಬಳ ಕೊಡುವ ಭರವಸೆ ನೀಡಿ ಅಡ್ವಾನ್ಸ್ ಬುಕಿಂಗ್ ಮಾಡಿಬಿಡುತ್ತಾರೆಂದು ಗೊತ್ತಿತ್ತು. ಹತ್ತನೇ ಕ್ಲಾಸಿನಲ್ಲಿ ಮೂರು ಸಲ ಫೇಲಾದ ಶಾರಿಗೆ ಇಷ್ಟೊಂದು ಬುದ್ಧಿವಂತ ಮಗಳು ಹುಟ್ಟಿದ್ದಾಳಲ್ಲ !

''ನೀನೇ ಪುಣ್ಯವಂತೆ ಬಿಡು, ಯಾವ ಕಾಲೇಜಲ್ಲಿದ್ದಳು? ಯಾವ ಕಂಪೆನಿ ರಿಕ್ರೂಟ್ ಮಾಡ್ಕಂಡಿದ್ದು? ಸಂಬಳ ಎಷ್ಟು? ಮೂವತ್ತು ಸಾವಿರಾನೋ ಐವತ್ತು ಸಾವಿರಾನೋ?'' ಎಂದು ಕೇಳಿದೆ.

''ಕಂಪೆನೀನಾ? ದಂಡಪಿಂಡ ಆ್ಯಂಡ್ ಕೋ. ಫೈನಲ್ ಇಯರ್ ಬಿ. ಎ. ಓದ್ತಾ ಇದ್ದವಳು ದಿಢೀರಂತ ಕ್ಲಾಸ್‌ಮೇಟೊಬ್ಬನ್ನ ರಿಜಿಸ್ಟರ್ ಮ್ಯಾರೇಜಾಗಿಬಿಟ್ಟಳು. ಇಬ್ರೂ ಸ್ಟೈಲಾಗಿ ಸಿನಿಮಾದಲ್ಲಾಗೋ ಹಾಗೆ ಇಷ್ಟಿಷ್ಟು ದಪ್ಪದ ಹಾರ ಹಾಕ್ಕೊಂಡು ಬಂದು ಕಾಲಿಗೆ ಬಿದ್ದು ಆಶೀರ್ವಾದ, ಆಶೀರ್ವಾದ ಅಂತ ಬಡ್ಕೊಂಡ್ರು. ಆ ಹಾರಗಳ ದುಡ್ಡು ಯಾರು ಕೊಟ್ರೋ ದೇವರಿಗೆ ಗೊತ್ತು. ಅದನ್ನೇ ಕ್ಯಾಂಪಸ್ ರಿಕ್ರೂಟ್‌ಮೆಂಟ್ ಅಂದಿದ್ದು ನಾನು.''

''ಅಳಿಯಂದ್ರಿಗೆ ಏನು ಕೆಲಸ'' ಎಂದು ಕೇಳಿದೆ.

''ಅಯ್ಯೋ ಅವನಿಗೆ ಅಷ್ಟೊಂದು ದೊಡ್ಡ ಪದ ಬಳಸಬೇಡ. ಕೆಲಸಾನೂ ಇಲ್ಲ ಬೊಗಸೇನೂ ಇಲ್ಲ. ನಮ್ಮ ಮನೇಗೇ ಬಂದು ಟೆಂಟು ಹಾಕಿದಾನೆ.''

ನನಗೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ವರದಕ್ಷಿಣೆ ಉಳಿದಿದ್ದಕ್ಕೆ ಕಂಗ್ರಾಟ್ಸ್ ಹೇಳುವುದೋ ಅಥವಾ ವರನೇ ದಕ್ಷಿಣೆಯಾಗಿ ದೊರೆತದ್ದಕ್ಕೆ ಅಯ್ಯೋ ಪಾಪ ಎನ್ನುವುದೋ ಎಂದು ಗೊಂದಲವಾಗಿದ್ದರಿಂದ ಅದನ್ನು ಅಲ್ಲಿಗೆ ಕೈಬಿಟ್ಟು ಮೂಲ ವಿಷಯಕ್ಕೆ ಬಂದೆ.

''ಅಲ್ಲಾ ಇಷ್ಟೊಂದು ಬೆಳ್ಳಿ ಸಾಮಾನು ಯಾತಕ್ಕೆ?''

''ಅದೂ... ಬಿಸಿನೆಸ್ ಚೆನ್ನಾಗಿ ನಡೀಬೇಕು ಅಂದ್ರೆ ಇವೆಲ್ಲ ಬೇಕಾಗುತ್ತೆ'' ಎಂದಳು ನಿಗೂಢ ನಗೆ ಬೀರುತ್ತಾ.

''ಎಲಾ ನಿನ್ನ! ಹಾಗಾದ್ರೆ ನೀನು ಬಿಸಿನೆಸ್ ಟೈಕೂನು! ಒಳ್ಳೇ ಮಧುರೆ ಮೀನಾಕ್ಷಿ ಥರ ಥಳಗುಟ್ತಾ ಇದೀಯಲ್ಲ. ಯಾವ ಬಿಸಿನೆಸ್ ಮಾಡ್ತಾ ಇದೀಯಾ?''

''ಅದಾ... ಯಾವ ಬಿಸಿನೆಸ್ಸು ಅಂದ್ರೆ ಅದೊಂಥರಾ... ಗುಡಿ ಕೈಗಾರಿಕೆ ಅನ್ನಬಹುದು'' ಎಂದಳು. ಅಷ್ಟರಲ್ಲಿ ಹೊರಗಿನಿಂದ ಜೋರಾಗಿ ಹಾರ್ನ್ ಮಾಡುವ ಸದ್ದು ಕೇಳಿಬಂತು. ''ಇನ್ನೊಂದ್ಸಲ ಸಿಗ್ತೀನಿ. ಈಗ I don't have much time'' ಎಂದು ಟಾಟಾ ಬಿರ್ಲಾ ಸ್ಟೈಲಲ್ಲಿ ಹೇಳಿ ಮಾಯವಾದಳು. ಇವಳು ಅದ್ಯಾವ ಗುಡಿ ಕೈಗಾರಿಕೆ ನಡೆಸ್ತಿರಬಹುದು? ಹಪ್ಪಳ ಸಂಡಿಗೆ ಉಪ್ಪಿನಕಾಯಿ, ಮಡಕೆ ಕುಡಿಕೆ ಜ್ಯಾಮು ಜೆಲ್ಲಿ... ಜ್ಯಾಮು ಜೆಲ್ಲಿಗೂ ಕೇಜಿಗಟ್ಟಲೆ ಬೆಳ್ಳಿಗೂ ಎಲ್ಲಿಂದೆಲ್ಲಿಗೆ ಸಂಬಂಧ ಎಂದು ಅರ್ಥವಾಗಲಿಲ್ಲ.

ಅವತ್ತು ಹಾಗೆ ಮಾಯವಾದವಳು ಮತ್ತೆ ಪ್ರತ್ಯಕ್ಷವಾಗಿದ್ದು ಮೂರು ವರ್ಷಗಳ ನಂತರ. ಸೈನ್ಸ್‌ಕ್ವಿಜ್ ಪುಸ್ತಕ ತಂದ್ಕೊಡು ಅಂತ ಹದಿನೈದಿಪ್ಪತ್ತು ದಿನದಿಂದ ನನ್ನ ಮಗಳು ತಲೆ ತಿನ್ನುತ್ತಿದ್ದಳು. ಪುಸ್ತಕದ ಅಂಗಡಿ ಹುಡುಕಿಕೊಂಡು ಗಲ್ಲಿಗಲ್ಲಿ ತಿರುಗಿದ ಮೇಲೆ ಕೊನೆಗೂ ಒಂದು ಅಂಗಡಿ ಸಿಕ್ಕಿತು. ಅಂಗಡಿಯ ಒಳಗೆ ಹೆಜ್ಜೆ ಇಡುವಾಗ ಬಾಗಿಲಿಗೆ ಅಡ್ಡವಾಗಿ ಕಟ್ಟಿಕೊಂಡಿದ್ದ ಜೇಡರ ಬಲೆ ಮುಖಕ್ಕೆ ಮೆತ್ತಿಕೊಂಡಿತು. ಮುಖ ಒರೆಸಿಕೊಳ್ಳುತ್ತಾ ಒಳಹೊಕ್ಕು ಕೌಂಟರಿನಲ್ಲಿ ಗಾಢ ನಿದ್ರೆಯಲ್ಲಿದ್ದಾತನನ್ನು ನಿಷ್ಕರುಣೆಯಿಂದ ತಿವಿದೆಬ್ಬಿಸಿ ಪುಸ್ತಕ ಹುಡುಕಿಕೊಡಲು ಕೇಳಿದೆ. ಅವನು ತೂಕಡಿಸಿಕೊಂಡು ಎತ್ತರೆತ್ತರದ ರ್‍ಯಾಕುಗಳ ಮಧ್ಯೆ ಎಲ್ಲೋ ಕಣ್ಮರೆಯಾದ. ಸುತ್ತ ಕಣ್ಣಾಡಿಸಿದೆ. ಎಷ್ಟೊಂದು ನಿರ್ಮಾನುಷ್ಯವಾದ ಜಾಗ ಇದು ಎನಿಸಿತು. ನಗರ ಪ್ರದೇಶದ ಋಷಿಮುನಿಗಳು ಕಾಡು ಹುಡುಕಿಕೊಂಡು ಹೋಗುವ ಬದಲು ಇಲ್ಲಿ ಬಂದು ಕೂತು ತಪಸ್ಸು ಮಾಡಿದರೆ ಯಾವುದೇ ಊರ್ವಶಿ ಮೇನಕೆಯರ ಕಾಟ ಇಲ್ಲದೇ ಸಿದ್ಧಿ ಪಡೆಯಬಹುದು. ವೀರಪ್ಪನ್ನೋ, ಬಿನ್‌ಲ್ಯಾಡನ್ನೋ ಈ ರ್‍ಯಾಕುಗಳ ಮಧ್ಯೆ ಅಡಗಿ ಕೂತು ವರ್ಷಗಟ್ಟಲೆ ನರಜಂತುಗಳ ಕಣ್ಣಿಗೆ ಬೀಳದಂತಿರಬಹುದು. ಅದು ಬಿಟ್ಟು ಬೋಳುಗುಡ್ಡದ ಗುಹೆಗಳಲ್ಲಿ, ಟಿಂಬರ್ ಮಾಫಿಯಾದವರ ಕಾಡುಗಳಲ್ಲಿ ತಲೆಮರೆಸಿಕೊಳ್ಳುವ ಹುಚ್ಚಾಟ ಮಾಡುತ್ತಿದ್ದಾರಲ್ಲ ಎಂದು ಯೋಚಿಸುತ್ತಿದ್ದೆ.

ಅಷ್ಟರಲ್ಲಿ ಅಂಗಡಿ ಬಾಗಿಲಲ್ಲಿ ಅದೇ ಹಳೆ ಗೆಳತಿ ಶಾರಿ ಪ್ರತ್ಯಕ್ಷವಾದಳು. ಬೀಟೆ ಮರ ಇನ್ನೆರಡು ರಿಂಗು ಜಾಸ್ತಿ ಬೆಳೆದಿತ್ತು. ಅವತ್ತಿನಂತೆಯೇ ಚಿನ್ನದಂಗಡಿ ಮೈಮೇಲಿತ್ತು. ಕೆಂಪಂಚಿನ ಬಿಳೀ ರೇಷ್ಮೆ ಸೀರೆ. ಕೆನ್ನೆಗೆ ಅರಿಶಿನ, ಕಾಸಗಲದ ಕುಂಕುಮ, ತಲೆ ತುಂಬಾ ಹೂವು. ನೋಡಿದರೆ ಎರಡೂ ಕೈಯೆತ್ತಿ ಮುಗಿಯಬೇಕು ಎನಿಸುವಂತೆ ದೈವೀಕಳೆ.

''ನಮಸ್ಕಾರ ಅಮ್ಮ'' ಎಂದೆ ನಾಟಕೀಯವಾಗಿ.

''ನಮಸ್ಕಾರ ನಿನ್ನ ತಲೆ'' ಎಂದು ಪುಸ್ತಕಗಳ ಕಪಾಟುಗಳ ಮಧ್ಯೆ ಮರೆಯಾದಳು. ಸ್ವಲ್ಪ ಹೊತ್ತಿಗೆ ಐದಾರು ಪುಸ್ತಕಗಳನ್ನು ಆರಿಸಿಕೊಂಡು ಬಂದಳು. ಸಟೀಕಾ ವ್ರತಮಾಲಾ, ದೇವೀ ಮಹಾತ್ಮೆ, ಪೆಂಡ್ಯುಲಮ್ ಮೂಲಕ ಭವಿಷ್ಯ, ಮಂತ್ರಗಳು ಮತ್ತು ತಂತ್ರಗಳು, ನಿಮ್ಮ ಹಣೆ ಮತ್ತು ಹಣೆಬರಹ, ಇವೆಲ್ಲದರ ಜೊತೆಗೆ ''ನೀವೆ ಮಾಡಿ ನೋಡಿ ಜಾದೂ!''

''ಇದೇನೇ ಏನೇನೋ ಪುಸ್ತಕ ತಗೊಂಡಿದೀಯಲ್ಲ! ಇದನ್ನೆಲ್ಲ ನಂಬ್ತೀಯಾ'' ಎಂದು ಕೇಳಿದೆ.

''ನಂಬ್ತೀನೋ ಇಲ್ವೋ ಅನ್ನೋದು ಬೇರೆ ವಿಷಯ. ಬಿಸಿನೆಸ್ಸಿಗೆ ಬೇಕಾಗುತ್ತೆ ಅಂತ ಇವುಗಳನ್ನೆಲ್ಲ ಕೊಂಡ್ಕೊಂಡೆ'' ಎಂದಳು.

''ಅದೇನು ಅಂತ ಸರಿಯಾಗಿ ಹೇಳು ಮಾರಾಯ್ತಿ. ಅವತ್ತು ಗುಡಿ ಕೈಗಾರಿಕೆ ನಡೆಸ್ತಿದೀನಿ ಅಂತ ಹೇಳಿ ಅರ್ಜೆಂಟಲ್ಲಿ ಓಡಿ ಹೋಗಿ ಬಿಟ್ಟೆ. ನಿನ್ನನ್ನ ನೋಡಿದರೆ ಬಿಸಿನೆಸ್ಸು ಬಹಳ ಜೋರಾಗೇ ನಡೀತಿರೋ ಹಾಗೆ ಕಾಣುತ್ತೆ. ಅದೇನು ಕೈಗಾರಿಕೆ ಮಾಡ್ತಿದೀಯಾ, ಕಳ್ಳ ನೋಟು ಮುದ್ರಣಾನಾ?''

ಅವಳು ಜೋರಾಗಿ ನಕ್ಕಳು. ನಂತರ ಆಚೆ ಈಚೆ ನೋಡಿ ದನಿ ತಗ್ಗಿಸಿ ಹೇಳಿದಳು: ''ಹಳೇ ಫ್ರೆಂಡು ಅಂತ ತಮಾಷೆಗೆ ಗುಡಿ ಕೈಗಾರಿಕೆ ಅಂತ ಹೇಳಿದೆ. ನಾನೊಂದು ದೇವರ ಗುಡಿ ಕಟ್ಟಿಸಿದೀನಿ ಕಣೇ, ಅದಕ್ಕೆ ಅವತ್ತು ಬೆಳ್ಳಿ ಸಾಮಾನು ತಗೋತಾ ಇದ್ದಿದ್ದು. ನಮ್ಮ ತೋಟದ ಮೂಲೆಯಲ್ಲಿ ಒಂದು ಕಡೆ ಸಣ್ಣಗೆ ಕಾಡು ಬೆಳೆದುಕೊಂಡಿತ್ತು. ಅವನ್ನ ಕ್ಲೀನ್ ಮಾಡಿಸ್ತಾ ಇದ್ದಾಗ ಕೆಲಸದವನ ಹಾರೆಗೆ ಖಣ್ ಅಂತ ಏನೋ ತಾಗಿತು. ಏನೂಂತ ನೋಡಿದರೆ ಅದೊಂದು ದೇವರ ವಿಗ್ರಹ. ಅದಕ್ಕೊಂದು ಗುಡಿ ಕಟ್ಟಿಸಿ ಪೂಜೆ ಪುನಸ್ಕಾರ ಮಾಡಿಸಿದೆವು. ನಂತರ ಆ ಕೆಲಸದವನಿಗೆ ಲಾಟರಿಯಲ್ಲಿ ಹತ್ತು ಸಾವಿರ ಬಂತು. ಎಷ್ಟೋ ವರ್ಷದಿಂದ ಫಲವೇ ಇರದಿದ್ದ ನಮ್ಮ ಎರಡು ಮಾವಿನ ಮರಗಳಲ್ಲಿ ರಾಶಿಗಟ್ಟಲೆ ಹಣ್ಣಾಗಿ ಸುರೀತು. ಆಮೇಲಿಂದ ದೇವರ ಮಹಿಮೆ ಎಲ್ಲಾಕಡೆ ಪ್ರಚಾರ ಆಯ್ತು. ಜನ ಸಾಲುಗಟ್ಟಿ ಬರೋಕೆ ಶುರುವಾಯ್ತು. ನಾವು ಆ ಹೋಮ, ಈ ಪೂಜೆ ಅಂತ ಮಾಡಿಸಿ ದೊಡ್ಡ ದೊಡ್ಡವರನ್ನೆಲ್ಲ ಕರೆದ್ವಿ. ಪೇಪರಲ್ಲಿ ಒಳ್ಳೇ ಪ್ರಚಾರ ಆಯ್ತು. ಕ್ಷೇತ್ರ ಮಹಿಮೆ ಕ್ಯಾಸೆಟ್ ಮಾಡಿಸಿ ಬಸ್ಸಿನವರಿಗೆಲ್ಲ ಫ್ರೀಯಾಗಿ ಕೊಟ್ವಿ. ಕ್ಷೇತ್ರಕ್ಕೆ ಬಂದವರಿಗೆಲ್ಲ ತುಂಬಾ ಒಳ್ಳೇದಾಯ್ತು. ಕೆಲವರದು ಕಜ್ಜಿ ಗುಣವಾಯ್ತು. ಕೆಲವರದು ಕಳೆದು ಹೋದ ದನ, ಎಮ್ಮೆ, ಚಿನ್ನ ವಾಪಸು ಸಿಕ್ತು.''

''ಇನ್ಯಾರದೋ ಮಗುವಿನ ಬಿದ್ದು ಹೋದ ಹಲ್ಲು ಮತ್ತೆ ಹುಟ್ತು'' ನಾನು ಮಧ್ಯೆ ಬಾಯಿ ಹಾಕಿ ತಲೆಹರಟೆ ಮಾಡಿದೆ.

''ನಿನ್ನ ಹಳೇ ಚಾಳಿ ಹಾಗೇ ಇದೆ ಅನ್ನು.'' ಅವಳು ನಕ್ಕಳು. ''ಏನಾದರಾಗಲಿ ಐದೇ ವರ್ಷದಲ್ಲಿ ನಾವು ಹಾಕಿದ ಹಣದ ಡಬಲ್ ಹಿಂದೆ ಬಂತು.''

''ಅಂತೂ ಪಾಪ ನಿಮ್ಮ ದೇವರನ್ನ ಎಮ್ಮೆ ಹುಡುಕೋಕೆ, ಕಜ್ಜಿಗೆ ಮದ್ದು ಅರೆಯೋದಿಕ್ಕೆ, ನೇಮಿಸಿದ್ದೀಯಾ ಅನ್ನು. ಸರಿ, ಈ ಪುಸ್ತಕಗಳೆಲ್ಲ ಯಾಕೆ?''

''ನಂಗೇ ಬೇಕಾಗುತ್ತೆ ಕಣೇ, ನಾನೀಗ ಜಸ್ಟ್ ಶಾರಿ ಅಲ್ಲ. ಮಾತಾ ಶಾರದಾನಂದಮಯೀ ದೇವಿ. ನನ್ನ ದಂಡಪಿಂಡ ಅಳಿಯನ್ನ ದೇವಸ್ಥಾನದ ಮ್ಯಾನೇಜರ್ ಮಾಡಿದೀನಿ. ಸುಖವಾಗಿ ನಡೆಸ್ತಿದಾನೆ. ನಿಂಗೆ ಪೇಪರ್ ಓದುವ ಅಭ್ಯಾಸ ಇಲ್ಲ ಅಂತ ಕಾಣುತ್ತೆ. ಇಲ್ಲದಿದ್ರೆ ತಿಂಗಳಲ್ಲಿ ಹತ್ತು ಸಲ ಅಲ್ಲಿ ಪ್ರವಚನ, ಇಲ್ಲಿ ಧಾರ್ಮಿಕ ಸಭೆ, ಅಂತ ನನ್ನ ಫೋಟೋ ನೋಡ್ತಿರ್ತಿದ್ದೀ. ನಮ್ಮ ಜಿಲ್ಲೆಯ ಉಸ್ತುವಾರಿ ಮಂತ್ರಿಗೆ ನಾನೇ ರಿಲಿಜಿಯಸ್ ಅಡ್ವೈಸರು.''

''ಅಲ್ಲಾ, ಈಗಿನ ಕಾಲದಲ್ಲೂ ಜನ ಪವಾಡ, ಮಹಾತ್ಮೆ, ಕಾರ್ಣೀಕ ಅಂತ ನಂಬ್ತಾರಲ್ಲ'' ಎಂದೆ.

''ನೀನು ಯಾವ ಕಾಲದಲ್ಲಿದ್ದೀ ಮಹಾರಾಯ್ತೀ. ಇಂಥದನ್ನೆಲ್ಲ ಈಗಿನ ಕಾಲದಲ್ಲೇ ಜನ ನಂಬೋದು ಜಾಸ್ತಿ. ಥರಥರಾವರಿ ಪಾಪಗಳನ್ನು ಮಾಡಿದ ಮೇಲೆ ಅವುಗಳ ದೋಷ ನಿವಾರಣೆಗೆ ಥರಥರಾವರಿ ದೇವರುಗಳು ಬೇಡವೇ? ಪಾಪ ಜಾಸ್ತಿಯಾದ ಹಾಗೇ ದೈವಭಕ್ತಿ ಕೂಡ. ಭಕ್ತಿ ಅಲ್ಲ, ಭಯ ಅನ್ನು, ಜಾಸ್ತಿಯಾಗೋದು ಸಹಜ.''

ಹೊರಗೆ ಕಾರಿನ ಹಾರ್ನ್ ಜೋರಾಗಿ ಕೇಳಿಸಿತು. ಅವಳ ತೋಳು ಹಿಡಿದು ನಿಲ್ಲಿಸಿ ಕೇಳಿದೆ. ''ನಿಜ ಹೇಳು, ತೋಟದಲ್ಲಿ ವಿಗ್ರಹ ಸಿಕ್ಕಿದ್ದಾ ಅಥವಾ ಕಾವೇರಿ ಎಂಪೋರಿಯಮ್ಮಿಂದ ನೀನೇ ತಗೊಂಡೋಗಿ ಹುಗಿದಿದ್ದಾ?'' ಅವಳು ನನ್ನ ಮುಖ ನಿಟ್ಟಿಸಿ ನೋಡಿ ಅರ್ಧ ನಗು ನಕ್ಕಳು. ನಂತರ ''ಪಾಖಂಡೀ, ಇಂಥ ಪ್ರಶ್ನೆಗಳನ್ನು ಕೇಳೋದು ದೈವದ್ರೋಹ ಅಂತ ಗೊತ್ತಿಲ್ಲವಾ? ಏನೋ ಹಳೇ ಫ್ರೆಂಡು ಅಂತ ಸುಮ್ನಿದೀನಿ. ಬಾಯ್ ಬಾಯ್'' ಎಂದು ಹೇಳಿ ಹೊರಗೆ ನಿಂತಿದ್ದ ಕೇಸರಿ ರಂಗಿನ ಕಾರನ್ನು ಏರಿದಳು.

ನಾನು ಮನೆಗೆ ಹೋದವಳು ಮಗಳ ಕೈಗೆ ಪುಸ್ತಕದ ಪ್ಯಾಕ್ ಕೊಟ್ಟೆ. ಖುಷಿಯಿಂದ ''ಅಂತೂ ತಂದೆಯಲ್ಲಾ. ಕ್ವಿಜ್‌ಗೆ ಇನ್ನು ಒಂದೇ ವಾರ ಇರೋದು'' ಎನ್ನುತ್ತಾ ಕಟ್ಟು ಬಿಡಿಸಿದವಳು ಮುಖ ಸೊಟ್ಟಗೆ ಮಾಡಿ ಸಿಡುಕಿದಳು. ''ಏನಮ್ಮಾ ಇದು. ಸೈನ್ಸ್ ಕ್ವಿಜ್ ಬುಕ್ ತರೋಕೆ ಹೇಳಿದರೆ 'ಸಟೀಕಾ ವ್ರತಮಾಲಾ' ತಂದಿದೀಯಲ್ಲಾ!''

ಶಾರಿಯ ಕಿವಿಯಲ್ಲಿದ್ದ ವಜ್ರದೋಲೆಯ ಹೊಳಪನ್ನು ನೆನೆಸಿಕೊಂಡು ಹೇಳಿದೆ ''ಇರ್ಲಿ, ಇಟ್ಕೋ, ಇದನ್ನ ಕಲಿತಿದ್ರೆ ಯಾವತ್ತಾದ್ರೂ ಉಪಯೋಗಕ್ಕೆ ಬರತ್ತೆ. ನಿಜ ಹೇಳಬೇಕು ಅಂದ್ರೆ ಕ್ವಿಜ್ ಬುಕ್ ಓದೋದಕ್ಕಿಂತ ಇದನ್ನ ಓದಿದ್ರೇ ಪ್ರಾಫಿಟ್ ಜಾಸ್ತಿ.''


ಡಾ|| ಜಾನಕಿ ಸುಂದರೇಶ್
ಸರಕಾರಿ ವಸತಿ ಗೃಹ-೫, ಪೆರ್ಲಿಯ
ಬಿ. ಸಿ. ರೋಡು-೫೭೪೨೧೯, ದ. ಕ. ಜಿಲ್ಲೆ


## ಮೆಚ್ಚುಗೆ

ಕತೆ, ಕವಿತೆ, ಕಾದಂಬರಿ
ಇತ್ಯಾದಿಗಳನ್ನು ಬರೆದು
ಮೆಚ್ಚಿಸಬಹುದು
ಕೆಲಕೆಲವರನ್ನು ಮಾತ್ರ;
ಎಲ್ಲರನ್ನೂ ಮೆಚ್ಚಿಸಬಹುದು
ಏನನ್ನೂ ಬರೆಯದೆ !

ಸಿ. ಪಿ. ಕೆ,
ಮೈಸೂರು-೧೨

# ಮದುವಿ

**ಈ** ಮದುವಿ ಬಗ್ಗೆ ಹೇಳುವುದು ಬಾಳಕಷ್ಟ ಅದ – ಯಾಕಂದರ ಇದರ ಬಗ್ಗೆ ಹೇಳೂದು ಸಾಕಷ್ಟದ. ಮದುವಿ ಅಂದ್ರೇನು ? ಮದುವಿ ಯಾಕ ? ಮದುವಿ ಹ್ಯಾಂಗ ? ಇದರಾಗ ಎಷ್ಟ ನಮೂನಿ ಅದಾವ ? ಮದುವಿ ಮುಂದ, ಮದುವಿ ಹಿಂದ, ಮದುವಿ ಒಳಗ, ಮದುವಿ ಹೊರಗ... ಹಿಂಗಽ ಟಿಸಲ ಒಡಕೊಂತಽ ಹೋಗ್ತದ ಈ ಮದುವಿ ವೃಕ್ಷ. ಅದಕ್ಕ ಬ್ರಹ್ಮಾಂಡನ ಕಂಡ್ಯಾಳದಾಗ ಹಿಡದಿಟ್ಟಂಗ ಈ ಮದುವೀನ ಒಂದು ಸಣ್ಣಚಿಂತನದಾಗ ಕಟ್ಟಿ ಕೊಡೂ ಪ್ರಯತ್ನ ಇದು.

ಹರೇದ ತೊರಿ ಹರಿದು ಸಮುದ್ರ ಕೂಡಿ ತನ್ನ ಕಳಕೊಂಡರೇನ ಬಂತು ! ತೊರಿ ಹಾತೊರೆದು ಇನ್ನೊಂದರಾಗ ಕರಗಿ, ಕೂಡಿ ಹರದು, ನೀರೆರದು ಹೂ ಅರಳಿಸಿದರಽ ಎಲ್ಲಾ ಕಡೆ ಹರಡೀತು ಘಮ...ಘಮಾ.

ಬರೆ ಪೊಜಿಟಿವ್ ಆಗಲಿ, ಬರೆ ನೆಗೆಟಿವ್ ಆಗಲಿ ಬೆಳಕ ಹತ್ತಸೊದಿಲ್ಲ. ಎರಡೂ ಕೂಡಿ ಉರದಾಗನಽ ಬೆಳಕ. ಗಂಡು ಹೆಣ್ಣು ಈ ಪೊಜಿಟಿವ್ - ನೆಗೆಟಿವ್ ಕೂಡಿದಂಗ ಕೂಡೂದಽ ಮದುವಿ. ಎರಡಿದ್ದೂ ಎರಡಲ್ಲದ, ಎಡರಿದ್ದೂ ತೊಡರಿಲ್ಲದಾಂಗ ಬದುಕ ಮಾಡೂದಽ ದಾಂಪತ್ಯ. ಲಗ್ನ ಅಂತನೂ ಕರೀತಾರ ಇದನ್ನ. ಲಗ್ನ ಅಂದರ ಕೂಡೋದು, ಸಲ್ಲಗ್ನ – ಅಂದರ ಚಲೊ ರೀತಿಯಿಂದ ಕೂಡೋದು. ಅದಕ್ಕಽ ಕೂಡೋಕಿಂತ ಮೊದಲ ನೋಡೋದು. ನೋಡಿ ಕೂಡೋದು, ಕೂಡಿ ಕಲಿಯೋದು, ಕಲತು ಮರಿಯೋದು, ಮರತು ಅರಿಯೋದು, ಅರಿತು ತೇಲೋದು, ತೇಲಿ ತೇಲಸೋದು. ಇದಽ ಲಗ್ನ , ಇಲ್ಲದಿದ್ದರ ಎಲ್ಲಾ ಭಗ್ನ.



ಬದುಕು ಬಂಧನ, ಮದುವಿ ಮೋಕ್ಷ ಅಂತಾರ. ಹಾಂಗಾದರ ಕೂಡಿ ಮಾತಾಡಿ, ಮತ್ತ ಮತ್ತ ಆಡಿ ಈ ಬಂಧನದಿಂದ ಮುಕ್ತ ಆಗಾಕ ಇದಽ ಸಾಧನ ಆಗಬೇಕು. ನೋಡಿರಬೇಕು-ನೋಡದಂಗಿರಬೇಕು, ಕೂಡಿರಬೇಕು-ಕೂಡದಂಗಿರಬೇಕು, ಮಾಡಿರಬೇಕು ಓಡೋಡಿ ಬಂದು ನೋಡುವಂಗಿರಬೇಕು, ಇದಽ ಬದುಕು. ಈ ಬದುಕು ಹಿಡದ ದೆವ್ವಾ ಬಿಡಿಸುವಂತಿರಬೇಕು. ಹಾಂಗಾದರ ಬಿಡಸಬಲ್ಲಂಥಾ ಹು(ದ್ವ)ರಿ ಆರಿಸಿ ಕೂಡಬೇಕು. ಆಯ್ಕೆ ಸರಿ ಇದ್ದರ ಕೀರ್ತಿ ಶಿಖರ, ತಪ್ಪಿದರ ಕೆಸರಿನ ಪ್ರಪಾತ. ಹೆಣ್ಣು ಹೂವಿದ್ದಾಂಗ. ಅದು ಪೂರಾ ಅರಳಿ ಘಮ..ಘಮತ್ತಾಕ ಬಿಡಬೇಕು. ಹರದು ಘಾಸಿ ಮಾಡಬಾರದು, ಅದಕ್ಕಽ

*ಓ ಪೂಜಾರಿ, ಬಿಡೊ ಅಲ್ಲಿರಲಿ ಹೂವು*
*ನೀ ಸೃಷ್ಟಿಸಲಾಗದ ಚೆಲುವಿಗೆ ನಿನ್ನಿಂದೇತಕೆ ಸಾವು ?*

ಅಂತ ಕೇಳ್ತಾರ ಕುವೆಂಪು.

ಈ ಪ್ರೀತಿ ದೇವರ ಗುಡ್ಯಾಗ ಪುರುಷ ಪೂಜಾರಿ. ಪ್ರಕೃತಿ (ಸ್ತ್ರೀ) ಹೂವು. ಈ ಪುರುಷ-ಪ್ರಕೃತಿ ಸಹವಾಸನ ಸ್ವರ್ಗ. ಕೂಡಿ ಇದ್ದರ ಸ್ವರ್ಗ, ಕಾಡಿ ಒದ್ದರ ನರಕ. ಅಂದರ ಸ್ವರ್ಗ – ನರಕ ನಮ್ಮ ಕೈಯಾಗಿನ ಚರಕಽ ಅಂದಂಗಾತಲ್ಲ. ಈ ಚರಕದಿಂದ ನಾವು ತಗದ ನೂಲಿನಿಂದ ನಮ್ಮ ಬಟ್ಟಿ ಆಗಬೇಕು. ಚಲೊ ಬಟ್ಟಿ ನಮ್ಮದಾಗಬೇಕಾದರ ಗತಿ ನಿಧಾನ ಆಗಬೇಕು. ''ಅವಸರದಾಗ ಮದುವಿ ಆದರ ನಿಧಾನವಾಗಿ ಪಶ್ಚಾತ್ತಾಪ ಪಡಿತೀವಿ'' ಅನ್ನೂ ಎಚ್ಚರದ ಮಾತು ನಮಗ ಗೊತ್ತಿರಬೇಕು. ವಿರಹ ಕಹಿ – ಮಿಲನ ಸಿಹಿ ಅಂತಾರ. ಆದರ ಬಾಳ ಸಿಹಿ ಒಮ್ಮೊಮ್ಮೆ ಬದುಕಿಗೆ ಕಹಿ ಆಗ್ತದ. ಅದಕ್ಕ ನಡ ನಡುವೆ ಖಾರನೂ ಬೇಕು. ಈ ಸಿಹಿ ಖಾರ ಇರುವಷ್ಟಽ ಇರಬೇಕು. ಖಾರ ಅತಿ ಆದರ ಉರುಪೇಳ್ತದ. ಅದಕ್ಕ ಗಂಡಾ-ಹೇಂತಿ, ಪ್ರಕೃತಿ-ಪುರುಷರ ನಡುವ ಆಗಾಗ ಜಗಳ ಆಗ್ತಿರ್ತಾವ. ಇದಕ್ಕ ಕಾರಣ ವಿನಾಕಾರಣ ಅನ್ನಾಕಾಗಂಗಿಲ್ಲ.

ಒಳ್ಳೇದಕ್ಕೆಲ್ಲ 'ನಾ', ಕೆಟ್ಟದ್ದಕ್ಕೆಲ್ಲ 'ನೀ' ಅನ್ನೂದು ಪುರುಷನ ಭ್ರಮಾ. ಗಂಡ ಹೇಳಿದಾಂಗ ಹೆಂಡತಿ ಕೇಳಬೇಕು. ಆಕಿ 'ಹೂಂ' ಅಂದರ 'ಸ್ವರ್ಗ' - 'ಉಹೂಂ' ಅಂದರ ನರಕ ಅನ್ನೂದು ಬಾಳ ಹಳೇ ವ್ಯಾಧಿ.

*ಬೆಚ್ಚನ್ನ ಮನೆಯಾಗಿ - ವೆಚ್ಚಕ್ಕೆ ಹೊನ್ನಾಗಿ*
*ಇಚ್ಛೆಯಂತೆ ನಡೆವ ಸತಿಯಿರಲು*
*ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ.*

ಸರ್ವಜ್ಞನ ಈ ವಚನಾ ಹೇಳಕೊಂತಽ ಬೆಚ್ಚನ ಮನಿ, ವೆಚ್ಚಕ್ಕ ಹೊನ್ನ ತರಬೇಕು, ಮ್ಯಾಲ ಹೇಳಿದ್ದಕ್ಕ 'ಹೂಂ' ಅನಬೇಕು ಅನ್ನೂ ವರಾ(ಹ) ಹೆಚ್ಚಾಗ್ಯಾವ ಈಗ. ಆದರ 'ಹೂಂ' ಅನಕೊಂತ ಹೋದಂಗ ಈ ಭ್ರಮಾ ಹೆಚ್ಚಾಗತ ಹೋಗ್ತದ. ಅದಕ್ಕಽ ಈ ಹೆಣ್ಣು ಭ್ರಮಾ ಬಿಡಸಾಕ ಒಮ್ಮೊಮ್ಮೆ 'ನೀ ನೀ ಅಲ್ಲೋ, ನೀ ನಾ'' ಅಂತಾಳ, ಆಗ ತಪ್ಪತದ ತಾಳ; ತೈ ತೈ ಅಂತ ಕುಣತ ಸುರು ಆಗ್ತದ. ಗುಡುಗು, ಸಿಡಿಲು ನೆರಿ-ತೊರಿ ಹಾಹಾಕಾರ ಆಗಬಹುದು, ಬೆಂಕಿ-ಬಿಸಲು ಬರಾ ಆಗಬಹುದು, ಉಪವಾಸ, ವನವಾಸ: ಇದರ ಮುಂದಿನ ಅಂಕನಽ ಸಾವು. ಈ ಸಾವು ನೋವಿಗೆ ಕಾರಣ ಬ್ಯಾರೆ ಏನೂ ಅಲ್ಲ, ಈ 'ನಾ' ಅನ್ನೂ ಒಂದು ಮೃಗ. ಅದಕ್ಕಽ ಒಬ್ಬ ಪಾಶ್ಚಾತ್ತ್ಯ ಚಿಂತಕ ಹೇಳ್ತಾನ:

*ಈ ಜಗದಲ್ಲಿ ಅತಿ ದೊಡ್ಡ ದುರಂತ 'ನಾನು',*
*ಅಂತೆಯೇ ಅತಿ ದೊಡ್ಡ ಪ್ರಹಸನ 'ನೀನು',*
*ಇದಕ್ಕೆಲ್ಲಾ ಒಂದೇ ಮದ್ದು ''ನಾವು''.*

ಈ ಮಾತು ಎಷ್ಟು ಖರೆ ಅದ !

'ನಾ' ಅನಕೊಂತ ಸಾಗಿದರ ದುಃಖಾಂತ, 'ನೀ' ಅನಕೊಂತ ಸಾಗಿದರ ಸುಖಾಂತ, 'ನಾವು' ಅನಕೊಂತ ಸಾಗಿದರಽ ತೇಲು ಅಂತ. ಈ ಗಂಡ-ಹೆಂಡರು ಎರಡು 'ನಾ' ಆಗೋದರ ಬದಲು ಒಂದುಗೂಡಿ 'ನಾವು' ಆದರ ಯಾಕ ತೇಲಂಗಿಲ್ಲ ! ಅದಕ್ಕಽ ಹೇಳೂದು ಗಂಡ ಹೆಂಡರ ಜಗಳ ಗಂಧ ತೀಡಿದಂಗ ಅಂತ.

*ಗಂಡ-ಹೆಂಡಿರು ಚೆಂದ, ಗಂಧ-ಕುಂಕುಮ ಚೆಂದ,*
*ಬಂಗಾರದಾಗ ಬಳಿ ಚೆಂದ । ತಂಗೆವ್ವ*
*ಕಂದನೆತ್ತಿದ ನಡು ಚೆಂದ.*

ಹೀಂಗ ಗಂಡ-ಹೆಂಡತಿ ಗಂಧ-ಕುಂಕುಮದಾಂಗ ಬಾಳಿಬದುಕಿದಾಗ ನಡುವಿಗೆ ಒಂದು ಕಂದ ಬರ್ತದ, ಆನಂದ ಇರ್ತದ. ಈ ಕಂದ ಕೂಡಿ ದುಡದದ್ದರ ಫಲ. ಹೆಣ್ಣು ಮಣ್ಣಾದರ ಗಂಡು ಬೆವರು. ಮಣ್ಣು ಮರತು ಹಣ್ಣಿಗೆ ಹಪಹಪಿಸೂದು ಅಂದರ ನೆಲಾ ಮರತು ಮುಗಲಿಗೆ ಕೈ ಒಡ್ಡಿದಾಂಗ. ಮಣ್ಣು– ಬೆವರು ಕೂಡಿದಾಗಽ ಹೂ-ಹಣ್ಣು ಎಲ್ಲಾ. ಒಂದಿರಬೇಕು, ಹೊಂದಿರಬೇಕು, ಚೆಂದಿರಬೇಕು ಅನ್ನೂದಽ ಜೀವನದ ಗುರಿ – ಇದನ್ನಽ ಜನಪದರು ,

*ಮಂದಿ-ಮಕ್ಕಳೊಳಗ ಚೆಂದಾಗೊಂದಿರಬೇಕು*
*ಗಂಧ ಸವೆದಾಂಗ ಸವಿಬೇಕು ಹೋಗಾಗ*
*ಮಂದಿ ಬಾಯಾಗ ಇರಬೇಕು*

ಅಂದಾರ. ಸಂವದಾಂಗ, ಸಂವದಾಂಗಽ ಸವಿ ಬರ್ತದ. ಇಳಕೋಂತ ಹೋದಂಗ ತಿಳಕೊಂತ ಬರ್ತದ; ಹರೆ ಇಳದಮ್ಯಾಗ, ಖರೇ ಬದುಕು ಸುರು ಆಗ್ತದ. ಮದುವಿ ಬದುಕಿನ ಬಂಧನಕ್ಕೆ ಮೋಕ್ಷ ಆಗ್ತದ; ಇನ್ನ ಸಾಕು ಅನಸ್ತದ. 'ಸಾಕು' ಅಂದರಽ ನಾಕು ಮಂದೀ ಬಾಯಾಗ ಇರಾಕ ಸಾಧ್ಯ ಆಗ್ತದ.

**ಬಿ. ಆರ್. ಪೋಲೀಸ್ ಪಾಟೀಲ**
'ವಾತ್ಸಲ್ಯ', ಬನಹಟ್ಟಿ -೫೮೭ ೩೧೧

# ಮಕ್ಕಳಿರಲಿ ಮನೆ ತುಂಬ

''ಇಲ್ನೋಡು ಪಪ್ಪಾ, ಈ ಹೆಂಗಸಿಗೆ ಏಳು ಜನ ಮಕ್ಕಳಂತೆ '' ಮಗ ಓಡುತ್ತಲೇ ಬಂದ.

''ಅದೇನು ಮಹಾ ಬಿಡೋ, ಅಪ್ಪಯ್ಯನನ್ನು ಸೇರಿಸಿ ತಾತನಿಗೆ ಒಂಭತ್ತು ಜನ ಮಕ್ಕಳು. ಒಬ್ಬರ ಮನೆಯಲ್ಲಿ ಹದಿನೈದು ಜನ ಮಕ್ಕಳಿದ್ದಾರೆ.'' ಷೇವಿಂಗ್ ಸೆಟ್‌ಗೆ ಬ್ಲೇಡ್ ಹಾಕಿಕೊಳ್ಳುತ್ತಾ ನುಡಿದೆ.

''ಇರಬಹುದಪ್ಪ. ಆದರೆ ಈ ಹೆಂಗಸು ಒಂದೇ ಬಾರಿಗೆ ಏಳು ಮಕ್ಕಳನ್ನು ಹೆತ್ತಿದ್ದಾಳೆ,'' ಎಂದು ಮಗ ರಾಮು ಹೇಳಿದಾಗ ಆಶ್ಚರ್ಯಕ್ಕೆ ಹೊಸ ಬ್ಲೇಡಿನಿಂದ ಚರ್ಮ ಕಿತ್ತು ರಕ್ತ ಹರಿಯಲಾರಂಭಿಸಿತು.

''ಏನ್ರೀ ಯಾರದು ಹೆರಿಗೆ?'' ಹೆಂಡತಿ ಪ್ರೇಮಿ ಹೊರಗೆ ಬಂದಳು. ರಕ್ತವನ್ನು ಒರೆಸಿ ಕೊಳ್ಳುತ್ತಲೇ ಮಗನ ಕೈಯಲ್ಲಿದ್ದ ಪೇಪರನ್ನು ಕಸಿದುಕೊಂಡು ಕಣ್ಣಾಡಿಸಿದೆ. ಬಾಕ್ಸ್‌ನಲ್ಲಿ ಒಂದು ಸುದ್ದಿ. ರಾಜಕೋಟ್‌ದ ಸಮೀಪದಲ್ಲಿ ಮಹಿಳೆಯೊಬ್ಬಳು ಏಳು ಶಿಶುಗಳಿಗೆ ಜನ್ಮ ನೀಡಿದ್ದಳು! ಆ ತಾಯಿ ಗರ್ಭಿಣಿಯಾಗಿದ್ದಾಗ ಹೇಗಿದ್ದಿರಬಹುದೆಂದು ಕಲ್ಪಿಸಿಕೊಳ್ಳತೊಡಗಿದೆ.

''ಏನ್ರೀ ಯಾರದು ಹೆರಿಗೆ?'' ಹೆಂಡತಿ ತುಸು ಜೋರಾಗಿಯೇ ಕೇಳಿದಳು

''ಇಲ್ಲಿ ಯಾರದೂ ಅಲ್ವೆ. ರಾಜಕೋಟ್ ಬಳಿ ಒಬ್ಬ ಹೆಂಗಸು ಒಮ್ಮೆಲೆ ಏಳು ಮಕ್ಕಳನ್ನು ಹೆತ್ತಿದ್ದಾಳಂತೆ'' ಎಂದು ಹೇಳುತ್ತಲೇ ಷೇವಿಂಗ್ ಮುಂದುವರೆಸಿದೆ.

''ಇದು ಸಾಧ್ಯ ಅಂತೀರಾ?'' ಪ್ರೇಮಿ ಆಶ್ಚರ್ಯದಿಂದ ಕೇಳಿದಳು.

''ಯಾಕೆ ಸಾಧ್ಯವಿಲ್ಲ? ನಮ್ಮಲ್ಲಿ ಹಿರಿಯರು ಅಷ್ಟ ಪುತ್ರ ಕಲ್ಯಾಣ ಪ್ರಾಪ್ತಿರಸ್ತು ಎಂದು ಆಶೀರ್ವದಿಸುವದಿಲ್ಲವೇ? ಹಾಗಿದ್ದಾಗ ಇಲ್ಲಿ ಒಂದು ಕಡಿಮೆಯಾಗಿದೆ, ಅಷ್ಟೇ!'' ಹೇಳಿದೆ.

''ಹಾಗಿದ್ದರೆ ಇದು ಅಂತಹ ಮಹನೀಯರ ಆಶೀರ್ವಾದದ ಫಲವಿರಬಹುದೇ?'' ಹೆಂಡತಿ ಸಂಶಯದಿಂದ ಏನೋ ಲೆಕ್ಕ ಹಾಕತೊಡಗಿದಳು.

''ಈಗ ಅವರ ಮನೆಯಲ್ಲಿ ಏಳು ಹೆಸರುಗಳನ್ನು ಹುಡುಕುತ್ತಿರಬೇಕು ಅಲ್ವಾ?'' ಮಗನ ಮುಗ್ಧ ಪ್ರಶ್ನೆ. ಹಾಗೊಮ್ಮೆ ಯೋಚಿಸಿ ನೋಡಿದರೆ ಮಗ ಹೇಳುತ್ತಿರುವುದು ಸರಿಯೆಂದೆನಿಸಿತು. ಈ ಕಾಲದಲ್ಲಿ ಮಕ್ಕಳಿಗೆ ಹೆಸರು ಕರೆಯುವುದೊಂದು ಕಷ್ಟದ ಕೆಲಸ. ಒಂದು ಮಗುವಿಗೇ ಸಾಕಷ್ಟು ತಿಣುಕಾಡುವಂತಹ ಸಂದರ್ಭಗಳು ಬರುವಾಗ ಈಗ ಏಳು ಜನ ಮಕ್ಕಳಿಗೆ ಒಮ್ಮೆಲೇ ಹೆಸರು ಹುಡುಕುವುದು ಹೇಗೆ? ಪ್ರಾಸಾಕ್ಷರಗಳಾಗಿರಬೇಕು. ಮೊದಲ ಅಕ್ಷರಗಳು ಒಂದೇ ಆಗಿರಬೇಕು. ಎಲ್ಲರ ಮೊದಲ ಅಕ್ಷರಗಳಿಂದ ಮನೆಯ ಇಲ್ಲವೇ ಮನೆತನದ ಹೆಸರಾಗಿರಬೇಕು. ಹೀಗೆ ಹತ್ತು ಹಲವಾರು ಅನಿಸಿಕೆಗಳು. ನಾಮಕರಣದ ದಿನದಂದು ಒಂದೊಂದು ಮಗುವಿಗೆ ಐದೈದು ಹೆಸರುಗಳನ್ನು ಕರೆಯಬೇಕು. ಅಂದರೆ ಒಟ್ಟು ಮೂವತ್ತೈದು ಹೆಸರುಗಳನ್ನು ಹುಡುಕಬೇಕು. ಅದು ಎಲ್ಲರಿಗೂ ಇಷ್ಟವಾಗಬೇಕು. ಚುನಾವಣೆಯಲ್ಲಿ ಅಭ್ಯರ್ಥಿಗಳ ಯಾದಿಯನ್ನು ತಯಾರಿಸುವಾಗ ಕೊನೆ ಕೊನೆಯಲ್ಲಿ ತಿರಸ್ಕೃತವಾಗುವ ಅಭ್ಯರ್ಥಿಗಳಂತೆ ಬಿದ್ದುಹೋಗುವ ಹೆಸರುಗಳೆಷ್ಟೋ! ಎಲ್ಲವನ್ನೂ ಹೆಂಡತಿಗೆ ವಿವರಿಸಿ ಹೇಳಿದೆ.

ವ್ಯಾಪಾರ ಬುದ್ಧಿಯ ಪ್ರೇಮಿ ಒಮ್ಮೆಲೇ ಅಂದಳು! ''ಹೆಸರನ್ನು ಹುಡುಕುವುದು ಒಂದೆಡೆ ಇರಲಿ. ನಾಮಕರಣದ ದಿನದಂದು ಉಡುಗೊರೆಯನ್ನು ಮಗುವಿಗೊಂದರಂತೆ ಎಂದರೂ ಏಳು ಜತೆ ಬಟ್ಟೆಗಳನ್ನು ಕೊಂಡೊಯ್ಯಬೇಕೇ! ಹುಟ್ಟಿದ ಹಬ್ಬಕ್ಕೆ ಕರೆದರೆ ಏನನ್ನು ನೀಡಿ ಗೌರವಿಸಬೇಕು? ಮಗುವಿಗೆ ಹತ್ತು ರೂಪಾಯಿ ಕೊಟ್ಟರೂ ಎಪ್ಪತ್ತು ರೂಪಾಯಿಗಳನ್ನು ಕೊಡಬೇಕೆ?''

''ಏಳು ಜನ ಮಕ್ಕಳಲ್ಲಿ ಮೊದಲನೆಯವನು ಯಾರು, ಎರಡನೆಯವನು ಯಾರು, ಎಂದು ಗುರುತಿಸುವುದಾದರೂ ಹೇಗೆ? ಮುಖ ಗುರುತಿಸಲು ಸಾಧ್ಯವೇ? ಅವರನ್ನು ಅದೇ ಹೆಸರಿನಿಂದ ಕರೆಯಲು ಆಗುವುದೇ?'' ಮುಗ್ಧ ಮಗ ಗಂಭೀರ ಪ್ರಶ್ನೆಯನ್ನೇ ಕೇಳಿದ. ''ರಿ, ಮಗು ಹೇಳುತ್ತಿರುವ ಮಾತು ಸರಿಯಾಗಿಯೇ ಇದೆ. ಅವರ ಮನೆಯವರಿಗೇ ಅದು ತಲೆ ನೋವಾಗಿರುವಾಗ ಹೊರಗಿನವರಿಗಂತೂ ಗೋವಿಂದನೇ ಗತಿ,'' ಹೆಂಡತಿ ಉದ್ಗಾರವೆತ್ತಿದಳು.

''ಅದೆಲ್ಲಾ ಬಿಡು. ಮಕ್ಕಳು ದೊಡ್ಡವರಾಗಿ ಶಾಲೆಗೆ ಹೋಗುವ ಪರಿಸ್ಥಿತಿ ವಿಚಾರಿಸು ನೀನು.. ಈಗಿನ ದಿನಮಾನಗಳಲ್ಲಿ ಮಗುವಿಗೆ ಒಳ್ಳೆಯ ಶಾಲೆಯ ಒಂದು ಸೀಟು ಗಿಟ್ಟಿಸುವುದು ಕಷ್ಟವಾಗಿರುವಾಗ ಏಳು ಮಕ್ಕಳಿಗೆ ಏಳು ಸೀಟುಗಳು ಬೇಕು. ಅದೂ ಒಂದೇ ಶಾಲೆಯಲ್ಲಿ. ಒಂದು ವೇಳೆ ಒಂದೇ ಶಾಲೆಯಲ್ಲಿ ಸಿಗದಿದ್ದರೆ ಏಳು ಶಾಲೆಗಳಿಗೆ ಅಡ್ಮಿಷನ್ ದೊರಕಿಸಬೇಕು. ಅದಕ್ಕೆ ಶಿಫಾರಸ್ಸು ಮಾಡಿಸಲು ಒಬ್ಬನೇ ವ್ಯಕ್ತಿ ಬೇಕಾಗಬಹುದೇ? ಅಥವಾ ಏಳು ಜನರು ಬೇಕೇ? ಯಾವ ಕೆಲಸ ಇಲ್ಲಿ ಶ್ರಮದಾಯಕ ಎಂಬುದನ್ನು ವಿಚಾರಿಸಬೇಕು. ಒಬ್ಬ ಪ್ರಭಾವಿ ವ್ಯಕ್ತಿಯಿಂದ ಏಳು ಶಾಲೆಗಳಲ್ಲಿ ಸೀಟು ಗಿಟ್ಟಿಸಬೇಕೋ ಅಥವಾ ಏಳು ಪ್ರಭಾವಿ ವ್ಯಕ್ತಿಗಳಿಂದ ತಲಾ ಒಂದೊಂದು ಸೀಟು ಗಿಟ್ಟಿಸಬೇಕೋ? ಹಾಗಿದ್ದರೆ ಏಳು ಪ್ರಭಾವಿ ವ್ಯಕ್ತಿಗಳನ್ನು ಹುಡುಕುವುದು ಕಷ್ಟದ ಕೆಲಸವಾದ್ದರಿಂದ ಒಬ್ಬರಿಂದಲೇ ಕೆಲಸ ಸಾಧಿಸಿಕೊಳ್ಳಬೇಕು. ಒಬ್ಬ ವ್ಯಕ್ತಿ ಏಳು ಕಡೆ ಪ್ರಭಾವ ಬೀರುವಷ್ಟು ಪ್ರಭಾವಿಯಾಗಿರದಿದ್ದರೆ...'' ಅಚ್ಚರಿಯಿಂದ ಅರ್ಥವಾಗದೇ ಹೆಂಡತಿ ಬಾಯಿ ತೆರೆದುಕೊಂಡೇ ನಿಂತಿದ್ದಳು.

''ಹಾಗಿದ್ದರೆ ಪಪ್ಪಾ, ಸ್ಕೂಲಿಗೆ ಏಳು ಊಟಕ್ಕೆ ಡಬ್ಬಿ, ಏಳು ಬಸ್ ಪಾಸ್ ತಯಾರು ಮಾಡಬೇಕು ಅಲ್ವಾ?'' ಮಗರಾಯ ಕೇಳಿದ. ಪ್ರೇಮಿ ಒಮ್ಮೆಲೇ ''ಬರೀ ಊಟದ ಡಬ್ಬಿ ಬಸ್ ಪಾಸ್ ಅಲ್ವೋ ಮಂಕೆ, ಏಳು ಜತೆ ಯುನಿಫಾರಂ ಹೊಲಿಸಿ, ಏಳು ಸ್ಕೂಲ್‌ಬ್ಯಾಗ್ ತಯಾರು ಮಾಡಿ, ಏಳು ಜತೆ ಸಾಕ್ಸ್‌ಗಳನ್ನು ಸಿಕ್ಕಿಸಿ ಶೂಸ್ ಹಾಕಿ, ಏಳು ಟೈಗಳನ್ನು ಕಟ್ಟಿ,ಏಳು ಡಬ್ಬಿ ರೆಡಿ ಮಾಡಿ ಅವರನ್ನು ಮನೆಯಿಂದ ಹೊರದೂಡುವುದು ಸಾಮಾನ್ಯವಾದ ಕೆಲಸಾನಾ?'' ಇರುವ ಒಬ್ಬ ಮಗನನ್ನೇ ತಯಾರು ಮಾಡಲು ಹೆಣಗಾಡುವವಳು ಸಂದೇಹ ವ್ಯಕ್ತಪಡಿಸಿದಳು.

''ಶಾಲೆಯಿಂದ ಬಂದ ಆ ಮಕ್ಕಳನ್ನು ಸಹನೆಯಿಂದ ವಿಚಾರಿಸಿ ಅವರ ಹೋಂ ವರ್ಕ್ ಬಗ್ಗೆ ಕಾಳಜಿ ತೆಗೆದುಕೊಳ್ಳುವುದು ಯಾರು? ಯಾವಾಗ? ಹೇಗೆ?'' ಮಗನ ಹೋಂ ವರ್ಕ್ ಬಗ್ಗೆ ವಿಚಾರಿಸಲು ಸಾಧ್ಯವಾಗದ ನನಗೆ ಒಮ್ಮೆಲೇ ಈ ಪ್ರಶ್ನೆ ಆವರಿಸಿ ಬಂದು ಹೆಂಡತಿಯ ಮುಂದಿಟ್ಟೆ. ''ಹಾಗಿದ್ರೆ ಪಪ್ಪಾ, ಅವರನ್ನು ಕಾಳಜಿ ಮಾಡುವುದು ಒತ್ತೊಟ್ಟಿಗಿರಲಿ ಟ್ಯೂಷನ್‌ಗಾದ್ರೂ ಕಳಿಸ್ತಾರೋ ಇಲ್ವೋ'' ನನ್ನತ್ತ ಅಣಕವಾಡುತ್ತ ನುಡಿದ ಮಗ.

''ರೀ, ಆ ತಾಯಿ ಅಕಸ್ಮಾತ್ ಇನ್ನೊಂದು ಗರ್ಭ ಧರಿಸಿದರೆ? ಆಗಲೂ ಏಳು ಮಕ್ಕಳನ್ನು ಹೆತ್ತರೆ....?'' ಹೆಂಡತಿ. 'ಅಪ್ಪ ಅವರಿಗೆ ಪಾಕೆಟ್ ಮನಿ ಎಂದರೇನು ಅಂತ ಗೊತ್ತಿರೋಲ್ಲ, ಅಲ್ಲಾ' ಮತ್ತೇ ಅಣಕ. ಮಾತು ಮರೆಸುವ ನೆಪದಲ್ಲಿ, ''ರೇಡಿಯೋ ಆನ್ ಮಾಡು ಕಣೇ, ಚಿತ್ರಗೀತೆ ಕೇಳೋಣ'' ಎಂದೆ. ರೇಡಿಯೋ ಆನ್ ಆದಾಗ ಜೇಸುದಾಸ್ ಹಾಡಿದ ಗೀತೆ ಕೇಳುತ್ತಿತ್ತು.



''ಹೆಚ್ಚು ಮಕ್ಳ ಹೆತ್ರೂ, ನೀನು ಸಾಕಿ ಸಲಹೋ ಧೈರ್ಯ ನನ್ನದೇ.'' ಆ ಧೈರ್ಯ ಜೇಸುದಾಸನದೋ, ನಿರ್ಮಾಪಕನದೋ, ಗೀತರಚನೆಕಾರನದೋ, ಹೀರೋನದೋ, ಒಟ್ಟಿನಲ್ಲಿ ಅಂತಹ ಧೈರ್ಯವಂತ ಮಹಾಶಯರಿದ್ದಾರಲ್ಲ ಎಂದು ಸಂತಸಪಟ್ಟುಕೊಂಡೆ.

**ಭೋಜರಾಜ ಸೊಪ್ಪಿಮಠ**
ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು
ತೋಂಟದಾರ್ಯ ಕೈಗಾರಿಕಾ ತರಬೇತಿ ಸಂಸ್ಥೆ
ಮಂಡಲಗಿರಿ, ತಾ: ಯಲಬುರ್ಗಾ
ಜಿ. ಕೊಪ್ಪಳ

# ಸಂಸ್ಕೃತಿಯನ್ನು ಪ್ರತಿನಿಧಿಸುವ ಶಿಕ್ಷಣ

ನಮ್ಮ ಇಂದಿನ ಯುವಜನಾಂಗ ಹಿಂದೆಂದಿಗಿಂತಲೂ ಹೆಚ್ಚು ಸದೃಢವಾದುದು. ಯುವಶಕ್ತಿಯ ದಿಕ್ಕು ದಿಶೆಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಆದರೂ ಯಾವುದೋ ಒಂದು ಮೂಲೆಯಲ್ಲಿ ಹತಾಶೆ, ನಿರುತ್ಸಾಹ, ಜಡತ್ವ ಯುವಜನಾಂಗದಲ್ಲಿ ಕಂಡುಬರುತ್ತಿದೆ. ಯಾವ ಉತ್ತಮ ಕಾರ್ಯಗಳಿಗೂ ಯುವಕರು ಮುಂದಾಗದೆ ಕಪ್ಪೆಚಿಪ್ಪಿನೊಳಗೆ ಮುತ್ತು ಅಡಗಿಕೊಂಡಿರುವಂತೆ ಅಡಗಿಕೊಂಡು ಕುಳಿತುಬಿಟ್ಟಿದ್ದಾರೆ. ಅವರನ್ನ ಎಳೆದು ಹೊರತರುವಲ್ಲಿ ನಾವೆಲ್ಲೋ ಎಡವಿದ್ದೇವೆ. ಅಂದರೆ ಸಮಾಜಪಾಲಕರು, ಶಿಕ್ಷಕರು ಗೊತ್ತಿಲ್ಲದಂತೆ ತಪ್ಪು ಮಾಡುತ್ತಿದ್ದಾರೆ ಎನಿಸುತ್ತದೆ. ಯುವಜನಾಂಗ ಸತ್ವಯುತವಾಗಿ ಹೊರಹೊಮ್ಮಲು ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಗಳಾಗಬೇಕಾಗಿದೆ. ಬದಲಾವಣೆಗಳು, ಪರಿವರ್ತನೆಗಳು ಕಾಲಕಾಲಕ್ಕೆ ಆಗದಿದ್ದರೆ ವ್ಯವಸ್ಥೆ ನಿಂತನೀರಾಗಿಬಿಡುತ್ತದೆ ಅಲ್ಲವೆ?

ಇಂದಿನ ಶಿಕ್ಷಣದಲ್ಲಿ ಯುವಕರನ್ನ ನೈತಿಕತೆಯ ಹಾದಿಯಲ್ಲಿ ಸಾಗಿಸುವುದಕ್ಕೆ ಯಾವುದೇ ಅಸ್ತ್ರಗಳು ಇಲ್ಲ. ಕಾರಣ ಶಿಕ್ಷಣವೇ ವ್ಯಾಪಾರವಾಗಿದೆ. ಹಣ ಕೊಟ್ಟರೆ ಹೆಣ ಕೂಡ ಬಾಯಿ ಬಿಡುವಂತೆ ಡಿಗ್ರಿಗಳು ಸಿಗುತ್ತಿವೆ. ಇದರಿಂದ ಯುವಜನಾಂಗದಲ್ಲಿ ಶಿಕ್ಷಣದ ಬಗ್ಗೆಯೇ ತಾತ್ಸಾರ ಮೂಡುತ್ತಿದೆ. ಹಿಂದೆ ಗುರು-ಶಿಷ್ಯರಲ್ಲಿ ಇದ್ದ ಬಾಂಧವ್ಯ ಇಂದಿನ ಶಿಕ್ಷಕರು ಮತ್ತು ವಿದ್ಯಾರ್ಥಿಗಳಲ್ಲಿ ಇಲ್ಲ. ಇಲ್ಲಿ ಕಂದಕಗಳು ಹೆಚ್ಚಾಗಿವೆ. ಕಲಿಸುವ ಗುರುಗಳಲ್ಲೂ ಉತ್ಸಾಹ, ಶ್ರದ್ಧೆ ಕಡಿಮೆಯಾಗುತ್ತಿದೆ. ಪ್ರತಿಫಲವಾಗಿ, ಕಲಿಯುವ ವಿದ್ಯಾರ್ಥಿಗಳಲ್ಲೂ ಆಸಕ್ತಿ ಅಭಿರುಚಿ ಕಡಿಮೆಯಾಗುತ್ತಿದೆ. ಇದನ್ನೆಲ್ಲ ಹೋಗಲಾಡಿಸಲು ಶಿಕ್ಷಣ ವ್ಯವಸ್ಥೆಯಲ್ಲಿ ಸುಧಾರಣೆಗಳಾಗಬೇಕು. ಮುಖ್ಯವಾಗಿ ಶಿಕ್ಷಣದಲ್ಲಿ ಪಕ್ಷಪಾತಕ್ಕೆ ಆಸ್ಪದ ನೀಡದೆ ನ್ಯಾಯ, ನೀತಿ, ಸತ್ಯ ಇವುಗಳಿಗೆ ಆದ್ಯತೆ ನೀಡಬೇಕು. ಪರಿಶ್ರಮ ಪಟ್ಟ ವಿದ್ಯಾರ್ಥಿಗಳಿಗೆ ಸರಿಯಾದ ಫಲಿತಾಂಶವೇ ದೊರೆಯಬೇಕು. ಶಿಕ್ಷಕರು ಭವಿಷ್ಯದ ವ್ಯಕ್ತಿಗಳನ್ನು ಸೃಷ್ಟಿಸುವ ರೂವಾರಿಗಳು ಎಂಬುದನ್ನು ಮರೆಯಬಾರದು. ಯುವಕರು ತಪ್ಪು ಹಾದಿ ಹಿಡಿದಾಗ ಸಾಮ, ದಾನ, ಭೇದ, ದಂಡ, ಈ ನಾಲ್ಕು ವಿಧಾನಗಳಿಂದ ಶಿಕ್ಷಕರು ತಿದ್ದಬೇಕು. ಮೌಲ್ಯಗಳಿಂದ ತುಂಬಿದ ಶಿಕ್ಷಣದಲ್ಲಿ ಮಾನವೀಯತೆಯುಳ್ಳ ಯುವಕರು ಹೊರಬಂದೇ ಬರುತ್ತಾರೆ. ಇದರಲ್ಲಿ ಸಂದೇಹವಿಲ್ಲ.

ಇಂದಿನ ಶಿಕ್ಷಣದಲ್ಲಿ ದೇಶಪ್ರೇಮ, ರಾಷ್ಟ್ರಭಕ್ತಿಯನ್ನು ಮೂಡಿಸುವ ಯಾವ ಮಾರ್ಗಗಳೂ ಇಲ್ಲ. ದೇಶಕ್ಕಾಗಿ ಸೇವೆ ಸಲ್ಲಿಸುವ ಅವಕಾಶಗಳೇ ಯುವಕರಿಗೆ ದೊರೆಯುತ್ತಿಲ್ಲ! ಕಾರ್ಗಿಲ್‌ನಲ್ಲಿ ಯುದ್ಧ ನಡೆಯುತ್ತಿದ್ದಾಗ ಇಂದಿನ ಯುವಕರು ಮನೆಯಲ್ಲಿ ತಣ್ಣನೆ ಕುಳಿತು, ಟಿ.ವಿ.ಯಲ್ಲಿ ಕ್ರಿಕೆಟ್ ನೋಡುತ್ತಿದ್ದುದು ಖೇದದಾಯಕವಾಗಿದೆ. ಅಲ್ಲಿ ಸಾವಿರಾರು ಸೈನಿಕರು ದೇಶಕ್ಕಾಗಿ ಪ್ರಾಣತೆತ್ತುತ್ತಿರುವಾಗ ಇವರು ಯಾವುದೇ ಪರಿವೆಯೇ ಇಲ್ಲದೆ ಬಾರ್‌ನಲ್ಲಿ ಕುಳಿತು ಸುಖಲೋಲುಪರಾಗುತ್ತಿದ್ದಾರೆ. ಈ ರೀತಿ ಏಕಾಗುತ್ತಿದೆ? ಯುವಕರಲ್ಲಿ ಮಾತೃಭೂಮಿಯ ಬಗ್ಗೆ ಗೌರವವೇ ಇಲ್ಲವೆ? ಇದೆ. ಆದರೆ ಅದು ಸುಪ್ತವಾಗಿದೆ. ಅದನ್ನ ಶಿಕ್ಷಣ ವ್ಯವಸ್ಥೆಯ ಮೂಲಕ ಜಾಗೃತಗೊಳಿಸಬೇಕಾಗಿದೆ. ಅದಕ್ಕಾಗಿ ಪ್ರಾಥಮಿಕ ಹಂತದಲ್ಲೇ ಸೈನಿಕ ತರಬೇತಿಯನ್ನು ಜಾರಿಗೊಳಿಸಬೇಕು. ಒಂದು ನಿರ್ದಿಷ್ಟ ವಯಸ್ಸಿನ ತನಕ ಯುವಕರು ರಾಷ್ಟ್ರಕ್ಕಾಗಿ ಸೇವೆ ಸಲ್ಲಿಸಲೇಬೇಕು, ಎಂಬುದನ್ನು ಕಡ್ಡಾಯಗೊಳಿಸಬೇಕಾಗಿದೆ. ಇಂದಿನ ಎನ್.ಎಸ್.ಎಸ್. ಮತ್ತು ಎನ್.ಸಿ.ಸಿ.ಗಳು ಈ ಕಾರ್ಯವನ್ನು ತಕ್ಕಮಟ್ಟಿಗೆ ಮಾಡುತ್ತಿವೆ. ಆದರೆ ಇದು ಎಲ್ಲಾ ಶಾಲಾ ಕಾಲೇಜುಗಳಲ್ಲಿ ಕಡ್ಡಾಯವಾಗಿಲ್ಲ. ಅಂದರೆ, ವಿದ್ಯಾರ್ಥಿಗಳು ಬೇಕಾದರೆ ಸೇರಿಕೊಳ್ಳಬಹುದು; ಇಲ್ಲದಿದ್ದರೆ ಇಲ್ಲ. ಆದರೆ ಈ ರೀತಿಯ ಕ್ರಮವನ್ನು ಹೋಗಲಾಡಿಸಿ ನಿರ್ದಿಷ್ಟ ನಿಯಮಗಳ ಪ್ರಕಾರ ರಾಷ್ಟ್ರಸೇವೆಯನ್ನ ಮಾಡುವ ಅವಕಾಶವನ್ನ ಇಂದಿನ ಯುವಕರಿಗೆ ಅವಶ್ಯಕವಾಗಿ ಶಿಕ್ಷಣ ವ್ಯವಸ್ಥೆಯಲ್ಲಿ ಕಲ್ಪಿಸಿಕೊಡಬೇಕಾಗಿದೆ.

ಕೇವಲ ಕಾರಕೂನರನ್ನು ಸೃಷ್ಟಿಸಲು ಹೊರಟ ಬ್ರಿಟಿಷರು ಹೇರಿದ ವ್ಯವಸ್ಥೆಯೇ ನಮ್ಮ ಇಂದಿನ ಶಿಕ್ಷಣವಾಗಿದೆ. ಇಂಗ್ಲಿಷ್ ಪದ್ಧತಿಯ ಶಿಕ್ಷಣ ಭಾರತದ ವೈವಿಧ್ಯತೆಗೆ ಹೊಂದಿಕೊಳ್ಳುತ್ತಿಲ್ಲ. ಇದರಿಂದಲೇ ಸಮಸ್ಯೆಗಳು ಪ್ರಾರಂಭವಾಗಿರುವುದು. ನಾಲ್ಕು ಗೋಡೆಗಳ ನಡುವೆ ಕುಳಿತು ಸಿದ್ಧಾಂತಗಳನ್ನಷ್ಟೇ ಯುವಕರಿಗೆ ತಿಳಿಸುತ್ತಿರುವ ಇಂದಿನ ಶಿಕ್ಷಣ ವಾಸ್ತವವನ್ನ ಪರಿಚಯಿಸುತ್ತಿಲ್ಲ. ಪದವಿ ಪಡೆದು ಹೊರಬಂದಾಗ ನೈಜತೆ ಅರಿವಾಗುತ್ತದೆ. ಆಗ ಯುವಕರಲ್ಲಿ ತನ್ನಿಂದ ತಾನೇ, ತಾವು ಪಡೆದ ಪದವಿ ಒಂದು ಹೊತ್ತಿನ ಅನ್ನವನ್ನೂ ಕೊಡುವುದಿಲ್ಲ ಎಂಬುದು ತಿಳಿಯುತ್ತದೆ. ಇದರಿಂದ ಯುವಶಕ್ತಿ ನಿರುದ್ಯೋಗ, ಆಲಸ್ಯದಿಂದ ದಾರಿಕಾಣದೆ ಕುಳಿತುಬಿಡುತ್ತದೆ. ಇಲ್ಲಿ ಗೊತ್ತಿಲ್ಲದಂತೆಯೇ ಯುವಶಕ್ತಿ ಕುಂದಿ ಹೋಗಿರುತ್ತದೆ. ಕ್ಲಾಸಿನಲ್ಲಿ ಬೆಲೆಗಳ ಏರಿಕೆ, ಇಳಿಕೆಗಳ ಬಗ್ಗೆ ಅರ್ಥಶಾಸ್ತ್ರದಲ್ಲಿ ತಿಳಿದುಕೊಂಡಿರುವ ವಿದ್ಯಾರ್ಥಿಗಳಿಗೆ ಸಂತೆಯಲ್ಲಿ ವ್ಯಾಪಾರ ಮಾಡುವ ವ್ಯಕ್ತಿಗಳಿಗಿರುವಷ್ಟು ಜ್ಞಾನ ಇದ್ದಿರುವುದಿಲ್ಲ! ಇದು ಇಂದಿನ ಶಿಕ್ಷಣ ಎತ್ತಿ ತೋರಿಸುತ್ತಿರುವ ನಗ್ನ ಸತ್ಯವಾಗಿದೆ. ಶಿಕ್ಷಣವು ಸ್ವಾವಲಂಬನೆಯನ್ನು ಬೆಳೆಸುವ ಸಾಧನವಾಗಬೇಕಾಗಿದೆ.

ಇಂದಿನ ಕಳವಳಕಾರಿ ಸಂಗತಿಯೆಂದರೆ ಯುವಕರು ಅಪರಾಧಗಳನ್ನು ಮಾಡುತ್ತಿರುವುದು. ರಾಷ್ಟ್ರ ಕಟ್ಟಬೇಕಾದವರು ರಾಷ್ಟ್ರವನ್ನೇ ಚೂರುಚೂರು ಮಾಡುತ್ತಿದ್ದಾರೆ. ಜಾತಿ-ಧರ್ಮಗಳ ಹೆಸರಿನಲ್ಲಿ ಹಿಂಸೆಗಳು ನಡೆಯುತ್ತಿವೆ. ಇದರಲ್ಲಿ ಯುವಶಕ್ತಿ ಭಾಗಿಯಾಗುತ್ತಿರುವುದು ಖೇದಕರ ಸಂಗತಿ. ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರಗಳಲ್ಲಿ ಇಂದಿನ ಯುವಜನಾಂಗ ಪಾಲ್ಗೊಳ್ಳುತ್ತಿದೆ. ಇದು ಅಪಾಯಕಾರಿ ಬೆಳವಣಿಗೆ. ಯುವಕರ ಇಂತಹ ಪ್ರವೃತ್ತಿಗಳನ್ನು ತಡೆಗಟ್ಟಲು ಇಂದು ಸಮಾಜದ ಪ್ರತಿಯೊಬ್ಬ ವ್ಯಕ್ತಿ ಶ್ರಮಿಸಬೇಕಾಗಿದೆ. ಇದಕ್ಕೆ ಶಿಕ್ಷಣ ಪೂರಕ ಸಾಮಗ್ರಿಗಳನ್ನು ಒದಗಿಸಬೇಕು. ಇಂದಿನ ಶಿಕ್ಷಣದಲ್ಲಿ ''ನೀತಿಯ ಪಾಠಗಳು'' ಕಣ್ಮರೆಯಾಗುತ್ತಿವೆ. ಪ್ರೀತಿ, ಪ್ರೇಮ, ವಾತ್ಸಲ್ಯ, ಸಹನೆ, ಶಾಂತಿ ಇವುಗಳನ್ನು ಶಿಕ್ಷಣ ಇಂದು ಕಲಿಸುತ್ತಿಲ್ಲ. ಆದ್ದರಿಂದಲೇ ದ್ವೇಷ, ಕ್ರೌರ್ಯ, ಮತ್ಸರ, ಯುವಕರಲ್ಲಿ ಭುಗಿಲೇಳುತ್ತಿದೆ. ಬುದ್ಧ, ಗಾಂಧಿಯರ ನಾಡಿನಲ್ಲಿ ಬಂದೂಕುಗಳ ಸದ್ದುಗಳು ಕಿವಿಗೆ ಅಪ್ಪಳಿಸುತ್ತಿವೆ. ನಮ್ಮ ರಾಷ್ಟ್ರದಲ್ಲಿ ಮತ್ತೊಮ್ಮೆ ಅಹಿಂಸೆಯ ಭಾವನೆ ಮೈದಳೆಯಲು ಶಿಕ್ಷಣ ವ್ಯವಸ್ಥೆಯೇ ಮೊದಲು ಕಾರಣೀಭೂತವಾಗಬೇಕು. ಉನ್ನತ ಚಾರಿತ್ರ್ಯ ನಿರ್ಮಾಣವೇ ಶಿಕ್ಷಣದ ಗುರಿಯಾಗಬೇಕು.

ಇಪ್ಪತ್ತೊಂದನೇ ಶತಮಾನದಲ್ಲಿ ಆಧುನಿಕತೆಯ ಪರಮೋಚ್ಚ ಗುರಿಯನ್ನಿಟ್ಟುಕೊಂಡಿರುವ ಭಾರತದಲ್ಲಿ ನಮ್ಮದೇ ಆದ ''ಆಧುನಿಕತೆ''ಯ ಶಿಕ್ಷಣ ಬೇಕು ಎಂಬ ವಿಚಾರ ಪ್ರತಿಯೊಬ್ಬ ಭಾರತೀಯನ ಮನದಲ್ಲಿ ಮೂಡಬೇಕು. ಇಷ್ಟೊತ್ತಿಗಾಗಲೆ ಮೂಡಿರಬೇಕಾಗಿತ್ತು ಅಲ್ಲವೇ? ಪಾಶ್ಚಾತ್ಯರ ಎಲ್ಲಾ ಬೇಡದ ಗುಣಗಳನ್ನೇ ಅಳವಡಿಸಿಕೊಳ್ಳುತ್ತಿರುವ ಭಾರತದ ಜನರಲ್ಲಿ ಅಲ್ಲಿಯ ಶಿಕ್ಷಣವೇ ಬೇಕೆನ್ನುವುದು ತಪ್ಪು ಹೇಗಾದಿತು ಅಲ್ಲವೇ? ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆಗೆ ವ್ಯಾಪಕ ಚಿಂತನೆ ನಡೆಯಬೇಕು. ಇದು ಸಾಮಾನ್ಯ ವ್ಯಕ್ತಿಯಿಂದಿಡಿದು ಬುದ್ಧಿವಂತರ, ವಿಚಾರವಾದಿಗಳ, ಚಿಂತಕರ ಮಟ್ಟದವರೆಗೂ ನಡೆಯಬೇಕು. ಇಂದು ನಮಗೇ ನಮ್ಮ ಸಂಸ್ಕೃತಿಯನ್ನು ಪ್ರತಿನಿಧಿಸುವ, ಮಾತೃಭೂಮಿಯ ಬಗ್ಗೆ ಅಭಿಮಾನ ಮೂಡಿಸುವ, ಭವಿಷ್ಯದ ಬಗ್ಗೆ ಆಶಾವಾದ ಹುಟ್ಟಿಸುವ ಶಿಕ್ಷಣ ಬೇಕು. ನಮ್ಮವರಲ್ಲದವರು ಹಾಕಿಕೊಟ್ಟ ತಳಪಾಯದಲ್ಲಿ ಮನೆ ಕಟ್ಟುವುದು ಸಂಶಯ ಮತ್ತು ಅನುಮಾನವನ್ನು ಹೇಗೆ ಹುಟ್ಟುಹಾಕುತ್ತದೆಯೋ ಅದೇ ರೀತಿ ಬೇರೆಯವರ ಯೋಚನೆ, ಮುಂದಾಲೋಚನೆಯಲ್ಲಿ ಬೆಳೆದುಬಂದ ನಮ್ಮ ಇಂದಿನ ಶಿಕ್ಷಣದ ಬುನಾದಿಯಲ್ಲಿ ಯುವಕರು ದೂರದೃಷ್ಟಿಯನ್ನಿಟ್ಟುಕೊಳ್ಳಲಾಗದೆ, ಎಲ್ಲಿ ಕುಸಿದು ಬೀಳುತ್ತವೆಯೋ ಎನ್ನುವ ಹೆದರಿಕೆಯಲ್ಲಿದ್ದಾರೆ. ಎಲ್ಲಿಯವರೆಗೆ ಕೇವಲ ಅನುಕರಣೆ ನಡೆಯುತ್ತದೆಯೋ ಅಲ್ಲಿಯವರೆಗೆ ನಾವು, ನಮ್ಮ ರಾಷ್ಟ್ರ, ಜೊತೆಗೆ ಶಿಕ್ಷಣ ಪದ್ಧತಿ, ಇವೊಂದೂ ಬದಲಾವಣೆ ಆಗುವುದಿಲ್ಲ; ನಮ್ಮದೇ ರೀತಿಯಲ್ಲಿ ರೂಪುಗೊಳ್ಳುವುದೂ ಇಲ್ಲ. ಅನುಕರಣೆಯಿಂದ ಹೊರಬಂದಾಗ 'ನಮ್ಮತನ'ವನ್ನು ತೋರ್ಪಡಿಸಲು ಸಾಧ್ಯ. ಆ ಕಾಲ ಯಾವಾಗ ಭಾರತದಲ್ಲಿ ಬರುತ್ತದೆಯೋ ಕಾದುನೋಡಬೇಕಾಗಿದೆ!

*ತಜ್ಞರು ಶಿಕ್ಷಣದ ಬಗ್ಗೆ ಐದು ದಶಕಗಳಿಂದ ಅನೇಕ ರೀತಿಗಳಲ್ಲಿ ವ್ಯಾಖ್ಯಾನ ಮಾಡುತ್ತಲೇ ಬಂದಿದ್ದಾರೆ; ಆಗಿರುವ ಬದಲಾವಣೆ ಮಾತ್ರ ಅಲ್ಪವೆಂದೇ ಹೇಳಬೇಕು. ಅದಕ್ಕೆ ಪ್ರತಿಕ್ರಿಯಿಸಿ ಯುವಕರ ಸಾಮರ್ಥ್ಯದ ಬಗ್ಗೆ ನಂಬುಗೆಯುಳ್ಳ ಲೇಖಕರು ತಮ್ಮ ಅನಿಸಿಕೆಗಳನ್ನು ಇಲ್ಲಿ ಹೊರಗೆಡಹಿದ್ದಾರೆ.*

ಎನ್. ಆರ್. ರೂಪಶ್ರೀ
'ಶ್ರೀ ಕೃಪಾ', ಯಲ್ಲಾಪುರ ರೋಡ್, 'ಶಾಂತಿನಗರ'
ಶಿರಸಿ-೫೮೧೪೦೨, ಉತ್ತರಕನ್ನಡ.

# ಜಾಗತೀಕರಣದ ವಿರುದ್ಧದ ಕೆಲಸ



ನಟ, ನಾಟಕಕಾರ, ನಿರ್ದೇಶಕ, ಗಾಯಕ, ಸಂಗೀತ ನಿರ್ದೇಶಕ ಹೀಗೆ ರಂಗಭೂಮಿಯ ಎಲ್ಲ ವಿಭಾಗಗಳಲ್ಲೂ ಸಿದ್ಧಹಸ್ತರು ಬಿ. ವಿ. ಕಾರಂತ. ಕನ್ನಡ ನಾಡಿನಲ್ಲಿ ರಂಗಭೂಮಿಯ ಏಳಿಗೆಗಾಗಿ ದಶಕಗಳಿಂದ ಕ್ರಿಯಾಶೀಲವಾಗಿ ಶ್ರಮಿಸುತ್ತಿರುವ ಕಾರಂತರ ಸಾಧನೆ ಅದ್ವಿತೀಯ, ಸಲ್ಲಿಸಿರುವ ಕಾಣಿಕೆ ಅಪಾರ. ನಾಟಕಕ್ಕೆ ಇನ್ನೊಂದು ಹೆಸರು ಬಿ. ವಿ. ಕಾರಂತ ಎಂದರೆ ತಪ್ಪಾಗದು. ಹಲವು ರಾಷ್ಟ್ರ ಹಾಗೂ ರಾಜ್ಯ ಪ್ರಶಸ್ತಿಗಳನ್ನು, ಜನಮನ್ನಣೆಯನ್ನು ಗಳಿಸಿರುವ ಕಾರಂತ ಕರ್ನಾಟಕ ರಾಜ್ಯದಲ್ಲಷ್ಟೆ ಅಲ್ಲದೆ ಇಡೀ ದೇಶದಲ್ಲಿ ಖ್ಯಾತನಾಮರಾಗಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಬಡ ಕುಟುಂಬದಿಂದ ಬಂದ ಬಾಬುಕೋಡಿ ವೆಂಕಟರಮಣ ಕಾರಂತರಿಗೆ ಶಾಲೆಯಲ್ಲಿ ಕಲಿಯುತ್ತಿರುವಾಗಲೇ ಹಾಡುವುದರಲ್ಲಿ, ಅಭಿನಯಿಸುವುದರಲ್ಲಿ ಆಸಕ್ತಿ. ಶಾಲಾ ನಾಟಕಗಳಲ್ಲಿ ಪಾತ್ರವಹಿಸಿದ್ದುದನ್ನು, ಗೀತೆಗಳನ್ನು ಹಾಡುತ್ತಿದ್ದುದನ್ನು ಅವರು ಈಗಲೂ ನೆನಪಿಸಿಕೊಳ್ಳುತ್ತಾರೆ. ಸಂಗೀತ ಕಲಿಯಬೇಕೆಂಬ ಅಪೇಕ್ಷೆಯಿಂದ ಅಂದು ಮೈಸೂರಿನಲ್ಲಿದ್ದ ಪ್ರಖ್ಯಾತ ನಾಟಕ ಕಂಪೆನಿ ಗುಬ್ಬಿ ಕಂಪೆನಿಯಲ್ಲಿ ಆಶ್ರಯ ಪಡೆದ ಕಾರಂತ ಮುಂದೆ ಬಂದದ್ದು ಬಾಲನಟನಾಗಿ 'ಭಕ್ತ ಮಾರ್ಕಂಡೇಯ', 'ಕೃಷ್ಣಲೀಲ' ನಾಟಕದ ಮೂಲಕವಾಗಿ. ಓದಬೇಕೆಂಬ ಹಂಬಲವಿದ್ದ ಕಾರಂತರು ನಾಟಕದ ಕಂಪೆನಿಯಲ್ಲಿದ್ದುಕೊಂಡೇ ಹಿಂದಿ ಕಲಿಯಲು ಪ್ರಾರಂಭಿಸಿ ಮುಂದೆ ಬನಾರಸ್‌ನಲ್ಲಿ ಹಿಂದಿ ಎಂ. ಎ. ಪದವಿ ಪಡೆದುಕೊಂಡು ಶಿಕ್ಷಕವೃತ್ತಿ ಕೈಗೊಂಡರೂ ಅವರ ಒಲವು ಇದ್ದದ್ದು ರಂಗಭೂಮಿಯ ಕಡೆಗೇ. ಅಂದಿನ ಬನಾರಸ್‌ನಲ್ಲಿ ಒಂದು ರೀತಿಯ ಮುಕ್ತ ವಾತಾವರಣವಿತ್ತು, ವೈವಿಧ್ಯತೆ ಇತ್ತು. ಆದರೆ ಈಗ ಬಜರಂಗದಳ, ವಿಶ್ವಹಿಂದೂ ಪರಿಷತ್ತಿನಂಥ ಸಂಸ್ಥೆಗಳ ಚಟುವಟಿಕೆಗಳಿಂದ ಆ ವೈವಿಧ್ಯತೆ ಹೋಗಿದೆ ಎನ್ನುವ ಕಾರಂತರಿಗೆ ಬನಾರಸ್‌ನ ಅನುಭವ ಬಹಳ ಆಪ್ಯಾಯಮಾನ. ಕಲ್ಕತ್ತದಲ್ಲಿ ನಾಟಕಗಳನ್ನು ನೋಡುವ ಅವಕಾಶ ಲಭಿಸಿದ್ದರಿಂದ ರಂಗಭೂಮಿಯಲ್ಲಿ ಅವರ ಆಸಕ್ತಿ ಹೆಚ್ಚಿದ್ದಲ್ಲದೆ ಅದರಲ್ಲಿ ಪರಿಣತಿ ಪಡೆಯಲು ತೀವ್ರ ಅಪೇಕ್ಷೆ ಹುಟ್ಟಿತು. ದೆಹಲಿಯಲ್ಲಿ ಆಗಷ್ಟೇ ಪ್ರಾರಂಭವಾಗಿದ್ದ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದ ಎರಡನೆಯ ತಂಡದಲ್ಲಿ ಭರ್ತಿಯಾಗಲು ಅವರಿಗೆ ಸಾಧ್ಯವಾಯಿತು. ದೆಹಲಿಯಲ್ಲಿದ್ದ ಸರ್ದಾರ್ ಪಟೇಲ್ ಶಾಲೆಯಲ್ಲಿ ಹಿಂದಿ ಶಿಕ್ಷಕನಾಗಿದ್ದುಕೊಂಡು ರಂಗಭೂಮಿಯ ತರಬೇತಿ ಪಡೆದುಕೊಂಡ ಕಾರಂತ ಮುಂದೆ ತಮ್ಮ ಜೀವಿತವನ್ನು ರಂಗಭೂಮಿಯ ಏಳಿಗೆಗಾಗಿಯೇ ಮೀಸಲಾಗಿರಿಸಿದರು. ಸಿನಿಮಾ ಮಾಧ್ಯಮದಲ್ಲಿ ಅವರು ನಟರಾಗಿ, ನಿರ್ದೇಶಕರಾಗಿ, ಸಂಗೀತ ನಿರ್ದೇಶಕರಾಗಿ ತಮ್ಮದೇ ಆದ ಛಾಪು ಮೂಡಿಸಿ ಖ್ಯಾತಿ ಗಳಿಸಿದ್ದರೂ ಅವರಿಗೆ ಪ್ರಿಯವಾದದ್ದು ರಂಗಭೂಮಿಯೇ.

ಕೆಲದಿನಗಳಿಂದ ಸ್ವಲ್ಪ ಅನಾರೋಗ್ಯದಿಂದ ಬಳಲುತ್ತಿದ್ದರೂ ಕಾರಂತರು ತಮ್ಮ ಯಾವತ್ತಿನ ಚಟುವಟಿಕೆಗಳನ್ನು ಲವಲವಿಕೆಯಿಂದಲೇ ಮುಂದುವರಿಸಿದ್ದಾರೆ. ಅವರ ಕ್ರಿಯಾಶೀಲತೆಯೇ ಒಂದು ರೀತಿಯಲ್ಲಿ ಚಿಕಿತ್ಸೆ ಎನಿಸುತ್ತದೆ.

'ಹೊಸತು' ಬಳಗ ಕಾರಂತರನ್ನು ಬೆಂಗಳೂರಿನ ಅವರ ಗಿರಿನಗರದ ಮನೆಯಲ್ಲಿ ಭೇಟಿಯಾದಾಗ ಅವರೊಂದಿಗೆ ಕಳೆದ ಎರಡು ಎರಡೂವರೆ ತಾಸು ಒಂದು ಮರೆಯಲಾಗದ ಅನುಭವ. ರಂಗಭೂಮಿಯ ಬಗ್ಗೆ ಅವರಲ್ಲಿರುವ ಕಾಳಜಿ ಅವರ ಪ್ರತಿ ಮಾತಿನಲ್ಲೂ ಎದ್ದು ಕಾಣುತ್ತಿತ್ತು. ತಮ್ಮ ಅನುಭವಗಳನ್ನು ನಮ್ಮೊಂದಿಗೆ ಹಂಚಿಕೊಂಡ ಕಾರಂತರು ಪ್ರಸ್ತುತ ಪರಿಸ್ಥಿತಿಯನ್ನು ಕುರಿತ ನಮ್ಮ ಪ್ರಶ್ನೆಗಳಿಗೂ ಪ್ರತಿಕ್ರಿಯಿಸಿದರು.

''ನಾಟಕಕ್ಕೆ ಅಪ್ಪಂದಿರಿಲ್ಲ'' ಎಂದು ಮಾತು ಪ್ರಾರಂಭಿಸಿದ ಕಾರಂತರು, ಹಾಗೆಂದರೆ ಒಂದು ವಿಶಿಷ್ಟವಾಗಿ ಅನುಸರಿಸಿಕೊಂಡುಹೋಗಬೇಕಾದ ಕ್ರಮ ಅಥವಾ ಪದ್ಧತಿಯಿಲ್ಲ; ಉದಾಹರಣೆಗೆ ಹಿಂದೂಸ್ತಾನಿ ಸಂಗೀತದಲ್ಲಿರುವ ಘರಾನಾ ಪರಂಪರೆ ಇಲ್ಲ, ಎಂದು ವಿವರಣೆ ನೀಡಿದರು. ''ನಾಟಕದಲ್ಲಿ ಮನುಷ್ಯ ಮುಖ್ಯ. ನೋಡುಗ ಸಮೂಹದೊಂದಿಗೆ ಸಂಪರ್ಕ ಏರ್ಪಡಿಸುವ ವ್ಯಕ್ತಿ. ಅವನ ಹಾವಭಾವ, ಅಭಿನಯ, ಮಾತು ಎಲ್ಲವೂ ವಿಶಿಷ್ಟವಾಗಿ ಅವನಿಗೇ ಸೇರಿದ್ದು. ಅವನು ನಿರ್ವಹಿಸುತ್ತಿರುವ ಪಾತ್ರದಲ್ಲಿ ಎಷ್ಟು ತಲ್ಲೀನನಾಗಿದ್ದಾನೆ ಎಂಬುದೇ ಮುಖ್ಯ. ಹಾಗಾಗಿ ಗುರು-ಶಿಷ್ಯ ಪರಂಪರೆ ಎನ್ನುವುದಿಲ್ಲ. ಪಾತ್ರಧಾರಿ ನಾಟಕದಿಂದ ನಾಟಕಕ್ಕೆ ಬೆಳೆಯುತ್ತ ಹೋಗುತ್ತಾನೆ. ಹಾಗಾಗಿ ನಾಟಕ ಒಂದು ವಿಶೇಷವಾದ ಮಾಧ್ಯಮವಾಗುತ್ತದೆ'' ಎನ್ನುತ್ತಾರೆ ಕಾರಂತರು.

''ನಾಟಕ ರಚನೆಯಲ್ಲಿ ಕನ್ನಡಕ್ಕೆ ಶ್ರೇಷ್ಠ ಸ್ಥಾನವಿದೆ. ಇತರ ಭಾಷೆಗಳಿಗೆ ಹೋಲಿಸಿದಲ್ಲಿ ಸಾಹಿತ್ಯಿಕ ನಾಟಕಗಳು ನಮ್ಮಲ್ಲಿ ಹೆಚ್ಚು. ನಮ್ಮ ನಾಟಕಕಾರರು ನಾಟಕಗಳನ್ನು ಬರೆಯುತ್ತಾ ಹೋದರು. ಸಂಸರ ನಾಟಕಗಳು ಇವತ್ತಿಗೂ ಕನ್ನಡದ ಶ್ರೇಷ್ಠ ನಾಟಕಗಳು. ಸಾಮಾಜಿಕ ಸಮಕಾಲೀನ ಕಳಕಳಿ ಇರುವ ನಾಟಕಗಳಿವೆ, ಆದರೆ ರಾಜಕೀಯ ನಾಟಕಗಳು ಕಡಿಮೆ'' ಎಂದು ಅಭಿಪ್ರಾಯಪಟ್ಟ ಕಾರಂತರು ಗೋರೀಬಿದನೂರು ಸೀತಾರಾಮ್, ಲಂಕೇಶ್, ಎಂ. ವಿ. ನಾರಾಯಣರಾವ್, ಶಾ. ಬಾಲೂರಾವ್ ಮೊದಲಾದವರು ಸಾಮಾಜಿಕ ಕಳಕಳಿಯಿಂದ ನಾಟಕಗಳನ್ನು ಬರೆದಿದ್ದಾರೆ ಎಂದರು. ಈ ಸಂದರ್ಭದಲ್ಲಿ ಜಿಬಿಜಿ ಯವರ 'ಸತ್ತವರ ನೆರಳು' ನಾಟಕದ ಪ್ರಯೋಗವನ್ನು ನೆನಪಿಸಿಕೊಂಡ ಅವರು ''ಈ ನಾಟಕದಲ್ಲಿ ನನಗೆ ಪುರಂದರದಾಸರ ಪದಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲು ಸಾಧ್ಯವಾಯಿತು'' ಎಂದರು. ನಾಟಕದಲ್ಲಿ ಸಂಭಾಷಣೆಯ ಜೊತೆಗೆ ಸಂದರ್ಭೋಚಿತವಾದ ಹಾಡುಗಳ ಬಳಕೆ ಹೆಚ್ಚು ಪರಿಣಾಮ ಉಂಟುಮಾಡುತ್ತದೆ ಎನ್ನುವುದು ಕಾರಂತರ ದೃಢವಾದ ನಂಬಿಕೆ.

ನಾಟಕ ಬದುಕಿಗೆ ಸಮೀಪವಾಗಿರುವಂಥದ್ದು. ಅದು ಜನಸಾಮಾನ್ಯರನ್ನು ನೇರವಾಗಿ ತಟ್ಟುತ್ತದೆ. ಪ್ರತಿಯೊಬ್ಬ ಮನುಷ್ಯನ ನಡೆವಳಿಕೆಯಲ್ಲೂ ಸೂಕ್ಷ್ಮವಾಗಿ ಗಮನಿಸಿದರೆ ನಾಟಕದ ಅಂಶ ಕಾಣಬಹುದು. ಅದರಿಂದಲೇ ನಾಟಕಕ್ಕೆ ಸಾವಿಲ್ಲ ಎಂಬ ದೃಢ ವಿಶ್ವಾಸ ಹೊಂದಿರುವ ಕಾರಂತರು ''ನಾಟಕದಲ್ಲಿ ಪ್ರತಿಭೆಗಳು ವೈಯಕ್ತಿಕ. ಆದರೂ ನಟ ಸಮೂಹದೊಂದಿಗೆ ಬೆರೆಯಲೂ ಬಲ್ಲ'' ಎಂದು ಹೇಳಿ ಬಂಗಾಳದಲ್ಲಿ ನಾಟಕ ಸಾಮೂಹಿಕವಾಗಿ ಬೆಳೆದಿರುವುದನ್ನು ನಾವು ಕಾಣಬಹುದು ಎಂದರು.

ರಂಗಭೂಮಿ ಇಂದಿಗೂ ಕೂಡ ಸೀಮಿತ ವಲಯದ ಜನರಿಗೆ, ಪ್ರಮುಖವಾಗಿ ಮೇಲ್ವರ್ಗದವರಿಗೇ ಎಟುಕುತ್ತದೆ ಎನ್ನುವುದನ್ನು ಸಂಪೂರ್ಣವಾಗಿ ಒಪ್ಪುವ ಕಾರಂತರು ''ಈಗ ಜನ ಹೆಚ್ಚು ಹೆಚ್ಚಾಗಿ ನಾಟಕಗಳನ್ನು ನೋಡಲು ಬರುತ್ತಿದ್ದಾರೆ, ಪ್ರೇಕ್ಷಕ ವೃಂದ ಬೆಳೆಯುತ್ತಿದೆ. ಆದರೂ ಅದು ಸಾಲದು'' ಎನ್ನುತ್ತಾರೆ. ''ನಾಟಕಗಳು ಜನಸಾಮಾನ್ಯರ ಹತ್ತಿರ ಹೋಗಿ ಅವರನ್ನು ಜಾಗೃತಗೊಳಿಸಲು ಸಾಧ್ಯವಾಗಬೇಕಾದರೆ ಬೀದಿನಾಟಕಗಳು ಬೇಕು. ಅದು ಅನಿವಾರ್ಯವೂ ಆಗಿದೆ. ಬೀದಿನಾಟಕಗಳು ವಸ್ತುವಿಗೆ ಪ್ರಾಮುಖ್ಯತೆ ಕೊಟ್ಟಿತೇ ಹೊರತು ಕಲೆಗಲ್ಲ. ಸಮಕಾಲೀನ ಸಮಸ್ಯೆಗಳನ್ನೆತ್ತಿಕೊಂಡು ಅದು ಬೆಳೆಯಿತು. ಆದರೆ ಹೆಚ್ಚು ಕಾಲ ನಿಲ್ಲಲಿಲ್ಲ. ಬೀದಿ ನಾಟಕಗಳು ಬೆಳೆಯುವುದಕ್ಕೆ ಹಣದ ಕೊರತೆಯೇ ಪ್ರಧಾನ ಅಂಶ ಎಂದು ನನ್ನ ಅನಿಸಿಕೆ. ಅದಕ್ಕೆ ಪೋಷಕರೂ ಬೇಕು, ಬೀದಿ ನಾಟಕಗಳ ಪ್ರಯೋಗಕ್ಕೆ ತರಬೇತಿಯೂ ಬೇಕು.''

ಜಾಗತೀಕರಣ, ದೇಶಿ, ವಿದೇಶಿ ಮಾಧ್ಯಮಗಳ ಭರಾಟೆಯ ಈ ದಿನಗಳಲ್ಲಿ ರಂಗಭೂಮಿ ಸವಾಲುಗಳನ್ನು ಹೇಗೆ ಎದುರಿಸಬೇಕು?

ಈ ಪ್ರಶ್ನೆಗೆ ಅವರ ಉತ್ತರ ಖಚಿತವಾದುದೂ, ಸ್ಪಷ್ಟವಾದುದೂ ಆಗಿತ್ತು. ''ಜಾಗತೀಕರಣದ ವಿರುದ್ಧ ಏನಾದರೂ ಕೆಲಸ ಆಗಬೇಕಾದರೆ ಅದು ನಾಟಕದಿಂದ ಮಾತ್ರ ಸಾಧ್ಯ. ಬೇರಾವ ಮಾಧ್ಯಮದಿಂದಲೂ ಸಾಧ್ಯವಿಲ್ಲ. ಅದು ಅವಶ್ಯ ಆಗಬೇಕಾಗಿರುವ ಕೆಲಸ.''

**ಸೀಯಾರ್ಕೆ**

# ನಾಟಕದಿಂದ ಮಾತ್ರ ಸಾಧ್ಯ!

**–ಬಿ. ವಿ. ಕಾರಂತ**

ಮುಂದುವರಿದು ಅವರು ''ಜಾಗತೀಕರಣದ ಹಾವಳಿಯಿಂದ ಭಾಷೆ ಬೆಳೆಯುವುದಕ್ಕೆ ಹಾನಿಯಾಗುತ್ತದೆ. ನಾಟಕದಲ್ಲಿ ಭಾಷೆ ಮನುಷ್ಯನ ಸ್ವಭಾವಕ್ಕೆ ಸಂಬಂಧಪಟ್ಟದ್ದು. ಅದು ಅತ್ಯಂತ ಸಹಜವಾಗಿಯೇ ಬರುತ್ತದೆ, ಸಂವಾದದಿಂದ. ಇನ್ನೊಂದು, ನಾಟಕದ ಭಾಷೆಯಲ್ಲಿ ವೈವಿಧ್ಯತೆ ಇರುತ್ತದೆ. ಮನುಷ್ಯ ಮನುಷ್ಯ ಸಂಬಂಧದಲ್ಲಿ ಹತ್ತಿರವಾಗಿರುತ್ತದೆ. ಆದ್ದರಿಂದ ನಾಟಕ ಭಾಷೆಯನ್ನು ಉಳಿಸುತ್ತದೆ'' ಎಂದು ಹೇಳಿದರು. ನಾಟಕದಲ್ಲಿ ಸಂಸರ ಭಾಷೆ, ಕೈಲಾಸಂರ ಭಾಷೆ ಹೀಗೆ ಒಂದು ಪರಂಪರೆಯೇ ಬೆಳೆಯುತ್ತದೆ. ವೈವಿಧ್ಯತೆಯೇ ನಾಟಕದ ಭಾಷೆಯ ಜೀವಾಳ ಎಂದು ನುಡಿದ ಕಾರಂತರು ''ನಾಟಕ ಭಾಷೆಯನ್ನು ಹೆಚ್ಚು ಶಕ್ತಿಶಾಲಿಯಾಗಿ ಮಾಡುತ್ತದೆ'' ಎಂದರು.

ಸಂಗೀತ ನೃತ್ಯಗಳಲ್ಲಿ ಕನ್ನಡದವರು ಅಖಿಲ ಭಾರತ ವ್ಯಾಪ್ತಿಯಲ್ಲಿ ಪ್ರಕಾಶಿಸಲಿಲ್ಲ. ಆದರೆ ನಾಟಕದಲ್ಲಿ ಒಳ್ಳೆಯ ಹೆಸರು ಗಳಿಸಿದ್ದಾರೆ. ದೆಹಲಿಯಲ್ಲಿರುವ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದಲ್ಲಿ ತರಬೇತು ಪಡೆದಿರುವವರಲ್ಲಿ ಕನ್ನಡದವರೇ ಹೆಚ್ಚು ಮಂದಿ. ಸುಮಾರು ೬೦ ಮಂದಿ ಅಲ್ಲಿ ತರಬೇತಿ ಪಡೆದಿದ್ದಾರೆ ಎಂದು ಅಭಿಮಾನದಿಂದ ಹೇಳುವ ಕಾರಂತರು ರಂಗ ಕರ್ಮಿಗಳಿಗೆ ತರಬೇತಿ ಅತ್ಯವಶ್ಯ ಎನ್ನುತ್ತಾರೆ.

''ದೆಹಲಿಯಲ್ಲಿರುವ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ ಒಳ್ಳೆ ಕೆಲಸ ಮಾಡುತ್ತಿದೆ ನಿಜ. ಆದರೆ ಇಲ್ಲಿ ಭಾಷೆಯ ಪ್ರಶ್ನೆ ಬರುತ್ತದೆ. ಎಲ್ಲ ರಾಷ್ಟ್ರೀಯ ಭಾಷೆಗಳಲ್ಲೂ, ಅಂದರೆ ಎಲ್ಲ ರಾಜ್ಯಗಳಲ್ಲೂ ಅಂಥ ಸಂಸ್ಥೆಗಳು ಇದ್ದರೆ ಚೆನ್ನ. ಆಗ ಪ್ರತಿಭೆಯನ್ನು ಅರಸಲು ಸಹಾಯಕವಾಗುತ್ತದೆ'' ಎಂದು ಅಭಿಪ್ರಾಯಪಟ್ಟ ಕಾರಂತರು, ಕರ್ನಾಟಕ ಸರಕಾರದ ನೆರವಿನಿಂದ ಹಿರಿಯ ನಾಟಕಕಾರ ಆದ್ಯ ರಂಗಾಚಾರ್ಯ ಇವರು ನಡೆಸಿದ ನಾಟಕ ತರಬೇತಿ ಶಿಬಿರಗಳನ್ನು ನೆನಪು ಮಾಡಿಕೊಂಡರು.

ಮಾತು ರಾಜ್ಯದಲ್ಲಿ ಸರಕಾರದ ಆಶ್ರಯದಲ್ಲಿ ಮೈಸೂರಿನಲ್ಲಿ ಸ್ಥಾಪನೆಯಾಗಿರುವ ರಂಗಾಯಣದ ಕಡೆಗೆ ತಿರುಗಿತು. ನಾಟಕದ ತರಬೇತಿಗೆ ಒಳ್ಳೆಯ ರೆಪರ್ಟರಿಗಳನ್ನು ಮಾಡಲು ಸರಕಾರದ ಹಣಕಾಸಿನ ನೆರವು ಬೇಕು. ಹಾಗೆ ಥಿಯೇಟರುಗಳ ನಿರ್ಮಾಣಕ್ಕೂ ಸಹಾಯ ಬೇಕು ಎನ್ನುವ ಕಾರಂತರು ಅಂಥ ನೆರವನ್ನು ಸ್ವಾಯತ್ತತೆಯ ಆಧಾರದ ಮೇಲೆ ನೀಡಬೇಕು. ಈ ಕಾರ್ಯಗಳನ್ನು ನಡೆಸುವ ಸಂಸ್ಥೆಗಳು ಸರಕಾರಿ ಇಲಾಖೆಗಳಾಗಬಾರದು ಎನ್ನುತ್ತಾರೆ.

ರಂಗಾಯಣದ ಇಂದಿನ ವಿವಾದಗಳ ಗೊಡವೆಗೆ ಹೋಗದೆ ''ತರಬೇತಿ ನೀಡುವುದಕ್ಕೆ ಖಾಯಂ ಶಿಕ್ಷಕರನ್ನು ನೇಮಕ ಮಾಡಲು ಸರಕಾರ ಗ್ರಾಂಟ್ ನೀಡಿದರೆ ಅಡ್ಡಿ ಇಲ್ಲ. ಅಂಥ ಗ್ರಾಂಟ್ ಅಗತ್ಯವೂ ಕೂಡ. ಆದರೆ ರೆಪರ್ಟರಿಗಳಿಗೆ ನೀಡುವ ನೆರವು ಮುಂದೆ ಅವು ತಮ್ಮ ಕಾಲಮೇಲೆ ತಾವು ನಿಲ್ಲುವಂಥದ್ದಾಗಿರಬೇಕು. ಬದುಕಿನ ಸಮಸ್ಯೆಯಿಂದಾಗಿ ಖಾಯಂ ನೌಕರಿಯ ಬಯಕೆ ಅರ್ಥವಾಗುವಂಥದ್ದು. ಹಾಗಾದಾಗ ಬೆಳವಣಿಗೆ ಕುಂಠಿತವಾಗುವ ಸಂಭವವಿರುತ್ತದೆ'' ಎಂದು ಕಾರಂತರು ಅಭಿಪ್ರಾಯಪಟ್ಟರು.

ಮೈಸೂರಿನಲ್ಲಿ ರಂಗಾಯಣದ ಸ್ಥಾಪನೆಗೆ ಶ್ರಮಿಸಿದ್ದು, ಅದರ ಮೊದಲ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ ಕಾರಂತರು, ಆ ಸಂದರ್ಭದಲ್ಲಿ ನಾನಾ ಕಾರಣಗಳಿಂದಾಗಿ ನಿಯೋಜಿತ ಕಾರ್ಯಗಳನ್ನು ಸಾಧಿಸಲಾಗಲಿಲ್ಲ ಎಂದು ನೊಂದುಕೊಳ್ಳುತ್ತಾರೆ ಈಗಲೂ. ''ರಂಗಾಯಣ ನಾಲ್ಕು ವರ್ಷ ಚೆನ್ನಾಗಿ ನಡೆಯಿತು. ರಂಗಕರ್ಮಿಗಳಿಗೆ ತರಬೇತಿ ನೀಡುವ ಕಾರ್ಯಕ್ರಮದೊಂದಿಗೆ ನಾಲ್ಕೈದು ರೆಪರ್ಟರಿಗಳಾದರೂ ಕನ್ನಡದಲ್ಲಿ ಆಗಿದ್ದರೆ ಚೆನ್ನಾಗಿರುತ್ತಿತ್ತು.

''ರಂಗಾಯಣ ಈಗ ಎದುರಿಸುತ್ತಿರುವ ಸಮಸ್ಯೆಗಳು ಎಷ್ಟು ಶೀಘ್ರವಾಗಿ ಬಗೆಹರಿದರೆ ಅಷ್ಟೂ ನಾಟಕರಂಗಕ್ಕೆ ಒಳ್ಳೆಯದು. ಅದು ಬಗೆಹರಿದು ಉದ್ದೇಶಿತ ಕಾರ್ಯ ಸಫಲವಾಗಲಿ ಎಂದು ಹಾರೈಸುತ್ತೇನೆ, ಎಂದರು ಕಾರಂತರು.''

ಪ್ರಾಥಮಿಕ ಶಾಲೆಗಳ ಹಂತದಲ್ಲಿಯೇ ನಾಟಕ, ಸಿನಿಮಾ, ಸಂಗೀತ ಇವುಗಳ ಕುರಿತು ಪರಿಚಯ ಮಾಡಿಕೊಡುವ, ಅವನ್ನು ಆಸ್ವಾದಿಸುವ ಕುರಿತು ಪಾಠ ಮಾಡಿದರೆ ಒಳ್ಳೆಯದು. ಅಂಥ ವ್ಯವಸ್ಥೆಯಿಂದ ಪ್ರತಿಭೆ ಗುರ್ತಿಸಲು ಸಹಾಯಕವಾಗುವುದರ ಜೊತೆಗೆ ಒಳ್ಳೆಯ ಪ್ರೇಕ್ಷಕವರ್ಗವನ್ನು ಸೃಷ್ಟಿಸುವ ಕಾರ್ಯ ನೆರವೇರುತ್ತದೆ ಎನ್ನುವುದು ಕಾರಂತರ ಖಚಿತ ಅಭಿಪ್ರಾಯ.

ಕರ್ನಾಟಕದಲ್ಲಿ ನೀನಾಸಂ, ಸಮುದಾಯ ತಂಡಗಳ ಕಾರ್ಯವನ್ನು ಮೆಚ್ಚಿಕೊಳ್ಳುವ ಕಾರಂತರು ಕನ್ನಡದಲ್ಲಿ ಹೆಚ್ಚು ಹೆಚ್ಚು ರೆಪರ್ಟರಿಗಳಾಗಬೇಕು ಎನ್ನುತ್ತಾರೆ. ಭಾರತದಲ್ಲಿ ರೆಪರ್ಟರಿ ಈವರೆಗೆ ಸೋತಿದೆ. ಇದರಲ್ಲಿ ಯಶಸ್ವಿಯಾಗಿರುವವರು ಹಬೀಬ್ ತನ್ವೀರ್ ಒಬ್ಬರೇ. ರೆಪರ್ಟರಿಗಳು ಬೆಳೆದು ಸ್ವಾವಲಂಬಿಗಳಾದರೆ ರಂಗಭೂಮಿಯ ಏಳಿಗೆ ಆದಂತೆ. ಈಗ ನಾಟಕದಲ್ಲಿ ತರಬೇತಿ ಪಡೆದುಕೊಂಡವರು ಟೆಲಿವಿಷನ್‌ಗೆ ಹೋಗುತ್ತಾರೆ. ಅದು ತಪ್ಪಿಸಲಾಗುವುದಿಲ್ಲ. ಆದರೂ ತರಬೇತಿ ಎಂದಾದರೂ ಉಪಯೋಗಕ್ಕೆ ಬರುತ್ತದೆ ಎನ್ನುವುದು ಕಾರಂತರ ನಂಬಿಕೆ.

ಕನ್ನಡದಿಂದ ಹಿಂದಿಗೆ ತೊಘಲಕ್, ಹಯವದನ, ಯಯಾತಿ ಮೊದಲಾದ ನಾಟಕಗಳನ್ನು ಅನುವಾದಿಸಿ ಪ್ರಯೋಗಿಸಿರುವ ಕಾರಂತರು ಮಕ್ಕಳಿಗಾಗಿ ಹಲವು ನಾಟಕಗಳನ್ನು ರಚಿಸಿದ್ದಾರೆ. ನಾಟಕ, ಸಂಗೀತ, ಸಿನಿಮಾ ಕ್ಷೇತ್ರಗಳಲ್ಲಿ ಕೈ ಆಡಿಸಿರುವ ಕಾರಂತರ ಅನುಭವ ವಿಶಾಲವಾದುದು. ಅವರಿಗೆ ಹರಿಕಥೆ ಬಹಳ ಇಷ್ಟವಾದ ಒಂದು ಪ್ರಕಾರ. ಅದು ಭಕ್ತಿ ಪ್ರಧಾನವಾದ ಪುರಾಣ ಕಥೆಗಳಿಗೇ ಸೀಮಿತಗೊಂಡು, ವಿಶಾಲವಾಗಿ ಬೆಳೆಯದಿರುವುದು ವಿಷಾದಕರ. ಜನಸಾಮಾನ್ಯರನ್ನು ನೇರವಾಗಿ ಸಂಪರ್ಕಿಸಲು, ಜಾಗೃತಗೊಳಿಸಲು ಅದು ಉತ್ತಮವಾದ ಮಾಧ್ಯಮ ಎನ್ನುವ ಕಾರಂತರು ಈ ದಿಶೆಯಲ್ಲಿ ಕೆಲಸ ಆಗಬೇಕಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ. ಅವರು ಪ್ರೇಮಚಂದರ ಕತೆ ಆಧರಿಸಿಕೊಂಡು ಹರಿಕಥೆ ಪ್ರಯೋಗ ನಡೆಸಿದ್ದೂ ಉಂಟು. ''ಚಿಕ್ಕಂದಿನಿಂದಲೂ ಹರಿಕಥೆ, ಭಜನೆ, ಯಕ್ಷಗಾನ ಇವುಗಳಲ್ಲಿ ಆಸಕ್ತಿ ಇದ್ದುದರಿಂದ ನನಗೆ ಸ್ಟೇಜ್ ಫಿಯರ್ ಇರಲಿಲ್ಲ. ಈಚೆಗೆ ಏಕಪಾತ್ರಾಭಿನಯದ ನಾಟಕಗಳು ಹೆಚ್ಚಾಗಿ ಬರುತ್ತಿವೆ. ಹರಿಕಥೆ, ಯಕ್ಷಗಾನ ಇವುಗಳಲ್ಲಿ ಪ್ರಚಲಿತ ಸಮಸ್ಯೆಗಳನ್ನು ತರುವುದು ಸುಲಭವಾಗುತ್ತದೆ,'' ಎಂದು ಹೇಳಿದ ಕಾರಂತರು ಆಂಧ್ರಪ್ರದೇಶದಲ್ಲಿನ ಬುರ್ರ ಕಥಾವನ್ನು ಉದಾಹರಣೆಯಾಗಿ ನೀಡಿದರು.

ಸಿನಿಮಾರಂಗದಲ್ಲೂ ನಟನಾಗಿ, ನಿರ್ದೇಶಕನಾಗಿ, ಸಂಗೀತ ನಿರ್ದೇಶಕನಾಗಿ ಹಲವು ಉತ್ತಮ ಚಿತ್ರಗಳಲ್ಲಿ ಭಾಗವಹಿಸಿ, ಹೆಸರು ಗಳಿಸಿದ್ದರೂ ಕಾರಂತರಿಗೆ ನಾಟಕವೇ ಅತ್ಯಂತ ಪ್ರಿಯವಾದ ಮಾಧ್ಯಮ. ''ನಾನು ಚಿತ್ರರಂಗಕ್ಕೆ ಪ್ರವೇಶಿಸಿದ್ದು ಆಕಸ್ಮಿಕವಾಗಿ, ಬಲವಂತವಾಗಿ ಎನ್ನಬಹುದು! 'ವಂಶವೃಕ್ಷ' ಚಿತ್ರ ತಯಾರಕರೂ, ನನ್ನ ಹಿತೈಷಿಗಳೂ ಆದ



ಜಿ.ವಿ. ಅಯ್ಯರ್ ಒತ್ತಾಯದ ಮೇಲೆ ಬಂದದ್ದು. ಒಂದು ಮಾಧ್ಯಮದಲ್ಲಿ ಪೂರ್ಣ ಪರಿಣತಿ ಪಡೆಯದೆ ಇಂಟರ್‌ಪ್ರಿಟ್ ಮಾಡಲಾಗುವುದಿಲ್ಲ ಎನ್ನುವುದನ್ನು ನಾನು ಅನುಭವದಿಂದ ಅರಿತುಕೊಂಡೆ. 'ಚೋಮನ ದುಡಿ' ಚಿತ್ರ ತಯಾರಾಗುತ್ತಿದ್ದಾಗ ಎದುರಿಸಿದ ಸಮಸ್ಯೆಯನ್ನು ಬಗೆಹರಿಸಿದ್ದು ಜೊತೆಗಿದ್ದ ಗಿರೀಶ್ ಕಾಸರವಳ್ಳಿಯವರು. ಈ ಮಾಧ್ಯಮದಲ್ಲಿ ಅವರು ಪರಿಣತಿ ಪಡೆದಿದ್ದಾರೆ. ಅಂಥವರಿಂದ ಒಳ್ಳೆಯ ಕೆಲಸವಾಗುತ್ತದೆ'' ಎಂದು ನಿಸ್ಸಂಕೋಚವಾಗಿ ಕಾರಂತರು ಹೇಳುತ್ತಾರೆ.

ಕಂಪೆನಿ ನಾಟಕಗಳಿಗೆ ಭವಿಷ್ಯವಿದೆಯೇ ಎಂಬ ಪ್ರಶ್ನೆಗೆ ಉತ್ತರ ನೀಡುತ್ತ ಅವರು, ''ಖಂಡಿತವಾಗಿಯೂ ಇದೆ. ವ್ಯವಸ್ಥಿತವಾದ ರೀತಿಯಲ್ಲಿ ಒಳ್ಳೆಯ ನಾಟಕಗಳನ್ನು ಆಡಿದರೆ ಈಗಲೂ ಜನ ನೋಡುತ್ತಾರೆ. ಹಳೆಯ ಮೈಸೂರಿನಲ್ಲಿ ಹಿಂದೆ ಮಹಾರಾಜರ ಕೃಪಾಪೋಷಣೆಯಲ್ಲಿ ನಾಟಕ ಕಂಪೆನಿಗಳು ಬೆಳೆದುವು. ಉತ್ತರ ಕರ್ನಾಟಕದಲ್ಲಿ ಜನರ ಬೆಂಬಲದಿಂದ ನಾಟಕ ಕಂಪೆನಿಗಳು ಬೆಳೆದುವು. ಈಗಲೂ ಅವು ಅಲ್ಲಿ ಜನಪ್ರಿಯವಾಗಿವೆ,'' ಎಂದು ಹೇಳಿದರು.

*ಚಿತ್ರಗಳು : ಕೆ. ಪಿ. ಸ್ವಾಮಿ*

■

# ಬಡವರೆಲ್ಲಾ ಒಂದಾಗಿ ಮುನ್ನುಗ್ಗಿ ಬನ್ನಿ

> *ಉತ್ಪಾದನೆ ಉಪಯೋಗಕ್ಕೋ ಲಾಭದ ಗಳಿಕೆಗೋ? ಉತ್ಪಾದನೆಯ ಉದ್ದೇಶ ಎಲ್ಲಿಯವರೆಗೆ ಲಾಭವೆ ಏಕಮಾತ್ರವಾಗಿ ಇರುತ್ತದೆಯೊ ಅಲ್ಲಿಯವರೆಗೆ ಈ ವಿಷವೃತ್ತದ ಸುತ್ತ ಕೊನೆಯಿಲ್ಲದೆ ಗಿರಿಗಿರಿ ಸುತ್ತಬೇಕು.*

**ಕೋ. ಚೆನ್ನಬಸಪ್ಪ**

ಬಡತನ, ಹಸಿವೆ, ಸಾವು ಇವು ಈ ದೇಶದಲ್ಲಿ - ಜಗತ್ತಿನ ಎಲ್ಲೆಡೆಯಲ್ಲಿ ಲಾಗಾಯ್ತು ನಡೆಯುತ್ತಿರುವ ಸಂಗತಿಯೆ. ಇದರಲ್ಲಿ ಹೊಸದೇನಿದೆ? ಇದು ಗಮನಿಸಬೇಕಾದ ಸಂಗತಿಯೇ ಅಲ್ಲ, ನಿಸರ್ಗ ನಿಯಮವೋ ಎಂಬಂತೆ ಆಗಿದೆ. ಆದರೆ ಇಂದಿನ ಒಂದು ವಿಶೇಷ ಎಂದರೆ ಆರು ಕೋಟಿ ಜನರು ಅನ್ನವಿಲ್ಲದೆ ನರಳುತ್ತಿರುವಾಗ, ಭಾರತ ಸರ್ಕಾರದ ವಿವಿಧ ಆಹಾರ ದಾಸ್ತಾನು ಮಳಿಗೆಗಳಲ್ಲಿ ಅರವತ್ತು ಲಕ್ಷ ಮೆಟ್ರಿಕ್ ಟನ್ ದವಸ ಧಾನ್ಯ ಕೊಳೆತು ಹೋಗುತ್ತಿರುವುದು! ಹಿಂದಿನ ಕಾಲದಲ್ಲಿ ಮಳೆಯಿಲ್ಲದೆ, ಬೆಳೆಬಾರದೆ ಕ್ಷಾಮಡಾಮರ ಉಂಟಾಗಿ ಜನ ಹೊಟ್ಟೆಗಿಲ್ಲದೆ ಸತ್ತದ್ದು ಪ್ರಕೃತಿ ವಿಕೋಪ ಎಂದು ಸಮಾಧಾನ ಹೇಳುತ್ತಿದ್ದರು. ಯುದ್ಧಕಾಲದಲ್ಲಿ ಬಂಗಾಳಧಲ್ಲಿ ಮೂವತ್ತು ಲಕ್ಷ ಜನ ಹಸಿವೆಯಿಂದ ಸತ್ತಾಗ ಆಹಾರ ಧಾನ್ಯ ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಲು ಸೌಕರ್ಯವಿಲ್ಲದೆ ದುರಂತ ಸಂಭವಿಸಿತೆಂದು ಸಮಜಾಯಿಷಿ ಹೇಳಿದರು ! ಆದರೆ ಈಗ ಆಹಾರ ಧಾನ್ಯವೂ ಹೇರಳವಾಗಿದೆ. ಸರಕಿನ ಸಾಗಾಟಕ್ಕೂ ಈಗ ಅಭಾವವಿಲ್ಲ! ಹಾಗಾದರೆ ಈ ಹೇರಳ ಸಂಪತ್ತಿನಲ್ಲಿ ಈ ಹಸಿವೆಯ ಪೈಶಾಚಿಕ ನೃತ್ಯವೇಕೆ? ಹೀಗೆ ಏಕೆ ಆಗುತ್ತದೆ? ಇದನ್ನು ಆಗಿನವರೂ ಯೋಚಿಸಿದ್ದರು. ಈಗಿನವರೂ ಆಲೋಚಿಸಬೇಕು. ಇದಕ್ಕೆ ಏನಾದರೂ ಪರಿಹಾರವಿದೆಯೆ? ಇದ್ದರೆ ಏನು ಆ ಪರಿಹಾರ?

ಹೊಟ್ಟೆಗಿಲ್ಲದೆ ಸಾಯುವುದು ಅವರ ಕರ್ಮ ಎಂಬ ಗೊಡ್ಡು ಕರ್ಮವಾದಿಗಳ ಕಾಲ ಎಂದೋ ಮುಗಿದುಹೋಗಿದೆ. ಅಂಥ ಮಾತನಾಡಿ 'ಬಡವರ ಒಡಲಿನ ಬಡಬಾಗ್ನಿಯನ್ನು' ಹೆಚ್ಚಿಸಿ ಸೀದುಹೋಗುವ ಅವಿವೇಕವನ್ನು ಈಗ ಎಂಥ ಹುಚ್ಚರೂ ಮಾಡಲಾರರು. ಆದ್ದರಿಂದ ಆಹಾರ ಧಾನ್ಯದ ಸಮೃದ್ಧಿಯ ಮಧ್ಯದಲ್ಲಿ ಹಸಿವೆಯಿಂದ ಸಾಯುವ ಈ ವೈಪರೀತ್ಯವೇನು? ಇದನ್ನು ಅರ್ಥಶಾಸ್ತ್ರ ದೃಷ್ಟಿಯಿಂದ ವಿಶ್ಲೇಷಿಸಬೇಕು. ಅರ್ಥಶಾಸ್ತ್ರ ವಿಶ್ಲೇಷಣೆ ಎಂದರೆ ವಿವಿಧ ಪದ್ಧತಿಗಳ ಸೂತ್ರಗಳನ್ನು ಅಳೆದು ಸುರಿದು, ಕೇರಿ ತೂರಿ ತರ್ಕ ಮಾಡಬೇಕೆಂಬ ತರ್ಕಜಾಲದಲ್ಲಿ ಬಿದ್ದು ಒದ್ದಾಡಬೇಕೆಂದಲ್ಲ. ಕೌಟಿಲ್ಯನ ಅರ್ಥಶಾಸ್ತ್ರ ವಾಗಲಿ, ಆಡಂ ಸ್ಮಿತ್‌ನ ಬಂಡವಾಳಶಾಹಿ ಅರ್ಥಶಾಸ್ತ್ರವಾಗಲಿ, ಕಾರ್ಲ್ ಮಾರ್ಕ್ಸ್‌ನ ಕಮ್ಯುನಿಸಂ ಅರ್ಥಶಾಸ್ತ್ರ ಸಿದ್ಧಾಂತವಾಗಲಿ, ಇವೆರಡು ಧ್ರುವಗಳ ಮಧ್ಯದ ಸಮಾಜವಾದೀ ಅರ್ಥ ನೀತಿಯಾಗಲಿ ಎಲ್ಲ ಶಾಸ್ತ್ರಗಳ ಮೂಲಭೂತ ಸೂತ್ರ ನಿಸರ್ಗದತ್ತ ಕಚ್ಚಾ ಸಾಮಗ್ರಿಯನ್ನು ಮಾನವ ಜೀವನೋಪಾಯಕ್ಕೆ ಬೇಕಾದ ಸಾಮಗ್ರಿಗಳ ಉತ್ಪಾದನೆ ಹೇಗೆ ಆಗಬೇಕು? ಉತ್ಪಾದಿಸಿದ ಉಪಯೋಗಯೋಗ್ಯ ಸಿದ್ಧ ಸಾಮಗ್ರಿಯನ್ನು ಹೇಗೆ ವಿತರಣೆಮಾಡಬೇಕು? - ಎಂಬುದಾಗಿದೆ. ಇದೇ ಅರ್ಥಶಾಸ್ತ್ರದ ಮೂಲಭೂತವಾದ ಸೂತ್ರ. ಮತ್ತೆ ಅದೇ ಮನುಕುಲದ ಜಟಿಲವಾದ ಸಮಸ್ಯೆ.

ನಿಸರ್ಗದತ್ತ ಕಚ್ಚಾಸಾಮಗ್ರಿಯನ್ನು ಉಪಯುಕ್ತ ಸಿದ್ಧವಸ್ತುಗಳನ್ನಾಗಿ ಮಾರ್ಪಡಿಸಲು ದುಡಿಮೆ ಅತ್ಯಗತ್ಯವಾಗಿ ಬೇಕೇ ಬೇಕು. ದುಡಿಮೆ ಇಲ್ಲದೆ ಇನ್ನೇನಿದ್ದರೂ ಸಿದ್ಧ ಸಾಮಗ್ರಿ ಉತ್ಪಾದನೆ ಆಗದು. ಒಂದೇ ಒಂದು ಅನ್ನದ ಅಗುಳು, ಒಂದೇ ಒಂದು ಕಣ ಉಪ್ಪು, ಸಕ್ಕರೆ, ಒಂದೇ ಒಂದೆಳೆ ದಾರ, ಒಂದೇ ಒಂದು ಕುಡಿಯುವ ಹನಿ ನೀರು... ಅದು ಇದು ಎಂದು ಹೇಳುವುದೇ ಬೇಡ, ಆಕಾಶದ ಕೆಳಗೆ ಉತ್ಪಾದನೆ ಆಗುವ ಸಮಸ್ತ ವಸ್ತುವೂ, ಸಮುದ್ರತಳದಲ್ಲಿರುವ ಸಂಪತ್ತು ಎಲ್ಲವೂ ದುಡಿಮೆಯಿಂದಲೆ ಮಾನವನಿಗೆ - ಅಷ್ಟೇಕೆ ಮನುಷ್ಯನಿಗೆ ನೆರವಾಗುವ ಪಶು ಪ್ರಾಣಿ ಮೃಗ ಪಕ್ಷಿಗಳಿಗೆ ಬೇಕಾದದ್ದು ಸಹಿತ ಮನುಷ್ಯನ ರಟ್ಟೆಯ ಬಲದಿಂದಲೆ – ಅಂದರೆ ಶ್ರಮಜೀವಿಯ ಶ್ರಮದಿಂದಲೇ ಉತ್ಪತ್ತಿಯಾಗುತ್ತದೆ.

ಬಂಡವಾಳಶಾಹಿಗಳು ದುಡಿಯದೆಯೆ ದುಡಿದವರ ಶ್ರಮದಿಂದ ಉತ್ಪಾದನೆಯಾದ ಸಾಮಗ್ರಿಗಳ ವರಮಾನದಲ್ಲಿ ಬಹುಭಾಗ ಒಮ್ಮೊಮ್ಮೆ ಶೇಕಡಾ ೮೦, ೯೦ ರಷ್ಟನ್ನು ಕಬಳಿಸುತ್ತಾರೆ. ಶ್ರಮಜೀವಿಗಳನ್ನು ಶೋಷಣೆ ಮಾಡಿ, ದುಡಿಯುವ ಬಡವರ ರಕ್ತವನ್ನು ಹೀರಿ ಬಂಡವಾಳಗಾರರು ಸ್ವರ್ಗ ಸುಖ ಅನುಭವಿಸುತ್ತಿದ್ದಾರೆ. ಶ್ರಮಜೀವಿ ಯಾವಾಗಲೂ ದಟ್ಟ ದರಿದ್ರ. ತಾನು ಬೆಳೆದ ಆಹಾರ ಧಾನ್ಯವನ್ನು ತಾನು ಉಣ್ಣಲಾರದಂಥ ದುರ್ಬಲ! ತಾನೇ ಬೆಳೆದು ಬಂಡವಳಗಾರನ ದಾಸ್ತಾನು ಮಳಿಗೆಯಲ್ಲಿ ತುಂಬಿದ, ಆ ಬಂಡವಾಳಗಾರನ ಅಂಕೆಯಲ್ಲಿರುವ ಬಂಡವಾಳಶಾಹೀ ಸರ್ಕಾರ ಆಹಾರಧಾನ್ಯ ದಾಸ್ತಾನು ಮಳಿಗೆಯಲ್ಲಿ ತುಂಬಿ ತುಳುಕುವ ಆಹಾರವನ್ನು ತಾನು ತಿನ್ನಲಾರದೆ ಸಮುದ್ರಕ್ಕೆ ಎಸೆಯುವ, ಬೆಂಕಿ ಹಚ್ಚಿ ಸುಡುವ, ಹೆಚ್ಚಾದ ಹಾಲನ್ನು ನದಿಗೆ ಬಿಟ್ಟು ಸಮುದ್ರ ಸೇರಿಸುವ ಕ್ರೂರ, ಪೈಶಾಚಿಕ ಕೃತ್ಯ ನಡೆಯುತ್ತಿದೆ.

ಒರಿಸ್ಸಾದ ಗಿರಿಜನರು, ಚತ್ತೀಸಗಡದ ಗಿರಿಜನರು, ಮಧ್ಯ ಪ್ರದೇಶ, ಗುಜರಾತ್, ಮಹಾರಾಷ್ಟ್ರದ ಜನರು ಹೊಟ್ಟೆಗಿಲ್ಲದೆ ಸಾಯಬೇಕಾದರೆ, ಆಹಾರಧಾನ್ಯ ಕೊಳ್ಳುವ ಸಾಮರ್ಥ್ಯ ಇಲ್ಲದಿರುವುದರಿಂದ. ಆ ಸಾಮಾರ್ಥ್ಯ ಇಲ್ಲದಿರುವುದೇಕೆ? ಅವರ ಕೈಯಲ್ಲಿ ಉತ್ಪಾದನಾ ಸಲಕರಣೆಗಳು ಇಲ್ಲ. ಉತ್ಪಾದನಾ ಸಲಕರಣೆಗಳಿದ್ದರೂ ಅದಕ್ಕೆ ಬೇಕಾದ ಕಚ್ಚಾ ಸಾಮಗ್ರಿಯ ನಿಸರ್ಗ ಸಂಪತ್ತು ಅವರಿಗೆ ಸಿಕ್ಕುತ್ತಿಲ್ಲ. ನಿಸರ್ಗ ಸಂಪತ್ತು ಕೆಲವೇ ಕೆಲವು ಧನಿಕರ (ಬಂಡವಾಳ ಶಾಹಿಗಳ) ಕೈವಶವಾಗಿ ಹೋಗಿದೆ. ಅವರು ಆಳುವ ಸರ್ಕಾರಗಳನ್ನು ನಿಯಂತ್ರಿಸುವ ಅತಿಕಾಯಶಕ್ತಿ ಆಗಿದ್ದಾರೆ. ದುಡಿಯುವ ಬಹುಸಂಖ್ಯಾತರಿಗೂ ದುಡಿಯದ ಅಲ್ಪಸಂಖ್ಯಾತ ಬಂಡವಾಳಶಾಹಿಗಳಿಗೂ ಘರ್ಷಣೆ ಉಂಟಾದಾಗ ಪ್ರಭುತ್ವ ಬಂಡವಾಳಗಾರರ ಹಸ್ತಕರಾಗಿ ಬಡವರನ್ನು ಸದೆ ಬಡಿಯುವ ಉಪಕರಣವಾಗುತ್ತದೆ. ಒಂದು ವೇಳೆ ಒರಿಸ್ಸಾದ ಗಿರಿಜನರು ಉಪವಾಸಬಿದ್ದು ಸಾಯಲಾರದೆ ಮಲೆತು ನಿಂತು ಸರ್ಕಾರಿ ದಾಸ್ತಾನು ಮಳಿಗೆಗಳಿಗೆ ಮುತ್ತಿಗೆ ಹಾಕಿ, ಕೊಳೆತು ಹೋಗುತ್ತಿದ್ದ ಆಹಾರ ಧಾನ್ಯವನ್ನು ಬಲಾತ್ಕಾರ ವಾಗಿ ಕಿತ್ತುಕೊಂಡಿದ್ದರೆ, ಆಗ ಪೊಲೀಸ್ ಪಡೆ ಅವರನ್ನು ಗುಂಡಿಕ್ಕಿ ಕೊಲ್ಲುತ್ತಿತ್ತು. ಅಂದರೆ ಈ ವ್ಯವಸ್ಥೆಯಲ್ಲಿ ಆಹಾರಧಾನ್ಯ ಕೊಳೆತು ಹೋದರೂ ಚಿಂತೆಯಿಲ್ಲ, ಕೊಳ್ಳುವವರಿಲ್ಲ ಎಂಬ ಕಾರಣದಿಂದ ಬೆಲೆ ಕುಸಿದು ಹೋದಾಗ ಯೋಗ್ಯಬೆಲೆಯ ಮಟ್ಟ ಕಾಪಾಡಲು ಹೆಚ್ಚುವರಿ ಸಾಮಗ್ರಿಯನ್ನು ಬೆಂಕಿಹಚ್ಚಿ ಸುಟ್ಟರೂ ಚಿಂತೆಯಿಲ್ಲ, ಹಸಿದು ಸಾಯುವವರ ಹೊಟ್ಟೆಗೆ ಮಾತ್ರ ಸೇರಬಾರದು!! ಇಂಥ ನಡತೆ ಮನುಷ್ಯರೆಂದು ಕರೆಸಿಕೊಳ್ಳುವವರಿಗೆ ಯೋಗ್ಯವೆ?

ಹಸಿದವರೆಲ್ಲ ಉಂಡರೂ ಸಾಕಾಗುವಷ್ಟು ಆಹಾರ ಧಾನ್ಯ ಇದೆಯೆಂದು ಅದನ್ನು ಬಿಟ್ಟಿ ಯಾಗಿ ಹಂಚಲು ಸಾಧ್ಯವೆ? ದುಡಿಯದೆ ತಿನ್ನುವ ಹಕ್ಕು ಯಾರಿಗೂ ಇಲ್ಲ. ಒರಿಸ್ಸಾದ ಗಿರಿ ಜನರಾಗಲಿ, ಮಧ್ಯಪ್ರದೇಶದ ಬಡಜನರಾಗಲಿ ದುಡಿದೇ ತಿನ್ನಬೇಕು. ಹಾಗಾದರೆ ಅವರು ದುಡಿದು ಸಂಪಾದನೆ ಮಾಡಿ ಆಹಾರಧಾನ್ಯ ಕೊಂಡು ಹೊಟ್ಟೆ ಹೊರೆಯ ಬಾರದೇಕೆ? ಕೊಳ್ಳುವ ಸಾಮರ್ಥ್ಯ ಯಾಕೆ ಪಡೆಯಬಾರದು? ಲೋಕದ ಬಡಜನರೆಲ್ಲ ಕೇಳುವುದು ಅದನ್ನೆ. ''ದುಡಿಯಲು ಸಿದ್ಧರಿದ್ದೇವೆ, ದುಡಿಯುವ ಕೈಗಳಿಗೆ ಕೆಲಸ ಕೊಡಿ'' ಎಂದು ಅಂಗಲಾಚುತ್ತಾರೆ; ಅಬ್ಬರಿಸುತ್ತಾರೆ. ಕೊನೆಗೆ ಚೀತ್ಕರಿಸಿ ಬೊಬ್ಬೆಹಾಕುತ್ತಾರೆ. ಆದರೆ ಆ ಕೈಗಳನ್ನು ದುಡಿಸುವ ಅವಕಾಶ ಎಲ್ಲಿದೆ? ದುಡಿಯುವ ಕೈಗಳಿಗೆ ಕೆಲಸವಿಲ್ಲ. ಯಾಕೆಂದರೆ ಆಗಲೆ ಉತ್ಪಾದನೆಯಾಗಿರುವ ಆಹಾರ ಸಾಮಗ್ರಿ, ಬಟ್ಟೆ ಬರೆ ಇತ್ಯಾದಿ ದಿನಸಿಗಳನ್ನು ಕೊಳ್ಳುವವರಿಲ್ಲದೆ ಅವು ಕೊಳೆಯುತ್ತಿರುವಾಗ ಹೊಸದಾಗಿ ಉತ್ಪಾದನೆ ಮಾಡಿ ಏನು ಪ್ರಯೋಜನ? ಇದು ಬಂಡವಾಳಗಾರರ ಪ್ರಶ್ನೆ. ಇದೊಂದು ವಿಷವೃತ್ತ. ಇಲ್ಲಿಗೆ ಬಂದು ತಲುಪಿದ ಮೇಲೆ ಒಂದು ಪ್ರಶ್ನೆ ಎದುರಾಗುತ್ತದೆ. ಉತ್ಪಾದನೆ ಉಪಯೋಗಕ್ಕೋ ಲಾಭದ ಗಳಿಕೆಗೋ? ಉತ್ಪಾದನೆಯ ಉದ್ದೇಶ ಎಲ್ಲಿಯವರೆಗೆ ಲಾಭವೆ ಏಕಮಾತ್ರವಾಗಿ ಇರುತ್ತದೆಯೊ ಅಲ್ಲಿಯವರೆಗೆ ಈ ವಿಷವೃತ್ತದ ಸುತ್ತ ಕೊನೆಯಿಲ್ಲದೆ ಗಿರಿಗಿರಿ ಸುತ್ತಬೇಕು. ಯಾವಾಗ ಉತ್ಪಾದನೆಯ ಗುರಿ ಬಳಕೆಗಾಗಿ ( ಉಪಯೋಗಕ್ಕಾಗಿ) ಆಗುವುದೊ ಆಗ ಗಿರಾಕಿಗಳಿಲ್ಲವೆಂದು ಸಾಮಗ್ರಿಯನ್ನು ಕೊಳೆಯಲು/ಹಾಳುಮಾಡಲು/ಸುಡಲು ಅವಕಾಶ ಎಲ್ಲ. ಈ ಗುರಿ ಸಾಧಿಸುವ ಬಗೆ ಹೇಗೆ? ಯಾವಾಗ ಉತ್ಪಾದನಾ ಸಲಕರಣೆಗಳು ಯಾರೊಬ್ಬರ, ಒಂದು ಗುಂಪಿನ, ಒಂದು ವರ್ಗದ ಖಾಸಗೀ ಸ್ವತ್ತಾಗದೆ ಸಾರ್ವಜನಿಕ ಸ್ವತ್ತಾಗುವುದೊ ಆಗ ಉತ್ಪಾದನೆಯ ಗುರಿ ಬಳಕೆಯೊಂದೆ ಆಗುತ್ತದೆ. ಉತ್ಪಾದಿಸುವ ಸರಕು ಸರಿಸಮಾನವಾಗಿ ಹಂಚಿಕೆಯಾಗುತ್ತದೆ. ಯಾಕೆಂದರೆ ಸರ್ವರೂ ಸರಿಸಮಾನರು. ಅದು ದೈವ ನಿಯಮ. ಈ ಸರಿಸಮಾನತೆಯ ದೈವ ನಿಯಮವನ್ನು

(೩೭ನೇ ಪುಟಕ್ಕೆ)

# ಮೂಢನಂಬಿಕೆಗಳು ಮಾನವನ ಪ್ರಗತಿಗೆ ಮಾರಕ

ಸ್ವಾಮಿ ರಾಮಕೃಷ್ಣಾರ್ಪಣಾನಂದ

'**ನಂಬಿಕೆ**' ಎಂದರೆ ಒಂದು ವ್ಯಕ್ತಿಯ ಅಥವಾ ವಸ್ತುವಿನ, ಅಥವಾ ಆಚಾರ-ವಿಚಾರಗಳ ಮೇಲಿರುವ ವಿಶ್ವಾಸ ಅಥವಾ ಒಂದು ಬಗೆಯ ಭಾವನೆ. ಪ್ರತಿಯೊಬ್ಬ ವ್ಯಕ್ತಿಯೂ ಬದುಕಿರುವುದು, ಜೀವನ ನಡೆಸಲಿಚ್ಛಿಸುವುದು ನಂಬಿಕೆಯ ಆಧಾರದ ಮೇಲೆ ಮಾತ್ರ. ಇದರಲ್ಲಿ ಎರಡು ವಿಧ. ಒಂದು ಆಧಾರ ಅಥವಾ ಪುರಾವೆ ಸಹಿತ ಗೋಚರವಾಗುವ ನಂಬಿಕೆಯಾದರೆ ಮತ್ತೊಂದು ಯಾವುದೇ ಆಧಾರ ಅಥವಾ ಪುರಾವೆಗಳಿಲ್ಲದಿದ್ದರೂ ಹೃದಯ ಮತ್ತು ಮನಸ್ಸಿಗೆ ಮಾತ್ರ ವೇದ್ಯವಾಗುವ ಅಗೋಚರವಾದ ನಂಬಿಕೆ. ಮೊದಲನೆಯದು ವೈಜ್ಞಾನಿಕ ಹಿನ್ನೆಲೆಯದಾದರೆ, ಎರಡನೆಯದು ಮಾನವಿಕ ಸಂಬಂಧದ್ದು. ಸೂರ್ಯ ನಕ್ಷತ್ರ, ಚಂದ್ರ, ಗ್ರಹ ಎಂಬುದು ವಿಜ್ಞಾನ ರುಜುವಾತುಪಡಿಸಿದ ನಂಬಿಕೆ. ಯಾರನ್ನೇ ತೋರಿ ಮಗುವಿಗೆ 'ಇವರೇ ನಿಮ್ಮ ತಂದೆ' ಎಂದು ತಾಯಿ ಹೇಳಿದಾಗ, ಅದನ್ನು ನಂಬಿ ಆತನನ್ನು ತಂದೆ ಎಂದು ಮಗು ಸ್ವೀಕರಿಸುವುದು ಕೇವಲ ಆಕೆಯೊಡನೆ ತನಗಿರುವ ಸಂಬಂಧ ಮತ್ತು ವಿಶ್ವಾಸದಿಂದ! ಹೀಗೆ ಪ್ರತಿಯೊಬ್ಬರ ಪರಸ್ಪರ ಸ್ನೇಹ, ಸಂಬಂಧ ದೃಢವಾಗಿ ನಿಂತಿರುವುದು ನಂಬಿಕೆಯೆಂಬ ಭಾವನಾತ್ಮಕವಾದ ಆಧಾರ ಸ್ತಂಭದಿಂದ. ನಂಬಿಕೆಯೇ ಇಲ್ಲದ ವಿಶ್ವ ಅಥವಾ ವ್ಯಕ್ತಿಯನ್ನು ಕಲ್ಪಿಸಿಕೊಂಡರೆ, 'ಸಂಶಯ ಪಿಶಾಚಿ' ಮಾಡಬಹುದಾದ ಅನಾಹುತಗಳನ್ನು ನೆನೆಸಿಕೊಂಡರೆ, ಅಬ್ಬ! ಮೈಮನ ನಡುಗಿ ಜಂಘಾಬಲವೇ ಉಡುಗಿಹೋಗುತ್ತದೆ.

ಅಗೋಚರವಾದ ಭಾವನಾತ್ಮಕ ನಂಬಿಕೆಯ ಜೊತೆಜೊತೆಗೇ ನಮ್ಮ ಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿರುವ ಮತ್ತೊಂದು ನಂಬಿಕೆಯೂ ಇದೆ. ಅದೇ ನಂಬಿಕೆಯ ಮತ್ತೊಂದು ಮುಖದಂತಿರುವ, ಆಧಾರ ಪುರಾವೆಗಳೇ ಇಲ್ಲದ, ಕನಿಷ್ಠ ಪಕ್ಷ ವೈಚಾರಿಕತೆಯ ಒರೆಗೂ ಹಚ್ಚದ, ಪಾರಂಪರಿಕವಾದ, ಮೌಢ್ಯ ಮತ್ತು ಮುಗ್ಧತೆಗಳನ್ನೇ ಬಂಡವಾಳ ಮಾಡಿಕೊಂಡು ಅಸ್ತಿತ್ವದಲ್ಲಿರುವ ಮೂಢನಂಬಿಕೆಗಳು! ಭಾವನಾತ್ಮಕ ನಂಬಿಕೆಗಳು ನಮ್ಮ ಬದುಕಿಗೆ ಮತ್ತು ಪ್ರಗತಿಗೆ ಪೂರಕವಾಗಿದ್ದರೆ, ಮೂಢನಂಬಿಕೆಗಳು ಮಾರಕವಾಗಿವೆ! ಇವು ಯಾವುದೇ ಆಧಾರ ಪುರಾವೆ, ಮೌಲ್ಯಾಧಾರಿತ ಅರ್ಥ, ಸಂಬಂಧಗಳನ್ನು ಹೊಂದಿರದಿದ್ದರೂ, ವೈಜ್ಞಾನಿಕ ತಳಹದಿಯನ್ನಾಗಲೀ ಇಲ್ಲ ವೈಚಾರಿಕತೆಯ ಹಿನ್ನೆಲೆಯಾಗಲೀ ಇಲ್ಲದಿದ್ದರೂ ನಮ್ಮ ದೈನಂದಿನ ಬದುಕಿನಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಹಾಸುಹೊಕ್ಕಾಗಿವೆ. ವಿದ್ಯಾವಂತರೂ ಇದರ ಗಾಢ ಪ್ರಭಾವಕ್ಕೆ ಒಳಗಾಗಿದ್ದಾರೆಂದರೆ ವಿಸ್ಮಯಾಶ್ಚರ್ಯ ಮೂಡದಿರದು. ಇವುಗಳಿಗೆ ನಾವು ಎಂತಹ ಆದ್ಯತೆ ಮತ್ತು ಮಾನ್ಯತೆಯನ್ನು ನೀಡುತ್ತಿದ್ದೇವೆಂದರೆ ಅವಕ್ಕೆ ಧಾರ್ಮಿಕ ನೆಲೆಗಟ್ಟನ್ನೂ ನೀಡಿ ನಮ್ಮ ಧರ್ಮದ ಆಚಾರ ವಿಚಾರ ಮತ್ತು ಸಂಪ್ರದಾಯಗಳೆಂದು ಆರಾಧಿಸುತ್ತಿದ್ದೇವೆ. ಹೆಜ್ಜೆ ಹೆಜ್ಜೆಗೂ ಅನುಷ್ಠಾನ ಮಾಡುತ್ತಿದ್ದೇವೆ. ಇವುಗಳನ್ನೆಲ್ಲಾ ವೈಜ್ಞಾನಿಕ ಅಥವಾ ವೈಚಾರಿಕ ಹಿನ್ನೆಲೆಯಲ್ಲಿ ಖಂಡಿಸುವವರನ್ನು, ಆಚರಣೆಗೆ ತರದವರನ್ನು ನಾಸ್ತಿಕರು, ಧರ್ಮದ್ರೋಹಿಗಳು ಎಂದೆಲ್ಲಾ ಹರಿಹಾಯ್ದು ದಂಡಿಸಲು ಮುಂದಾಗುತ್ತೇವೆ.

ಮೂಢನಂಬಿಕೆಗಳು ಸಾಮಾನ್ಯವಾಗಿ ಎಲ್ಲಾ ಧರ್ಮೀಯರಲ್ಲೂ ಆಚರಣೆಯಲ್ಲಿವೆ. ಹಿಂದೂ ಧರ್ಮೀಯರಲ್ಲಿ ಅವು ಸ್ವಲ್ಪ ಹೇರಳವಾಗಿಯೇ ಇವೆ. ಈ ಧರ್ಮದಲ್ಲಿರುವ ಜಾತಿ ಪದ್ಧತಿಗಳು, ಅಸಂಖ್ಯ ಹಬ್ಬಹರಿದಿನಗಳು, ಗ್ರಹಗತಿಗಳನ್ನಾಧರಿಸಿ ಮನುಷ್ಯನ ಒಳಿತು, ಕೆಡುಕು, ಶುಭ, ಅಶುಭಗಳನ್ನು ನಿರ್ಧರಿಸುವ ಲೆಕ್ಕಾಚಾರ ಮೊದಲಾದವುಗಳೇ ಇದಕ್ಕೆ ಸಾಕ್ಷಿ. ಮೂಢನಂಬಿಕೆಗಳನ್ನು ಎಷ್ಟು ವೈಭವೀಕರಿಸಿದ್ದೇವೆಂದರೆ, ಅವುಗಳಿಲ್ಲದೆ ನಮ್ಮ ದೈನಂದಿನ ಚಟುವಟಿಕೆಗಳನ್ನು ಪ್ರಾರಂಭಿಸುವುದೂ ಇಲ್ಲ, ಮುಗಿಸುವುದೂ ಇಲ್ಲ. ಪ್ರತಿಯೊಂದು ವಿಷಯಕ್ಕೂ ಒಳ್ಳೆಯದು-ಕೆಟ್ಟದ್ದು, ಶುಭ ಶಕುನ-ಅಪಶಕುನ, ಪಾಪ-ಪುಣ್ಯ, ಲಾಭ-ನಷ್ಟ ಮೊದಲಾದವುಗಳ ಲೇಪ ಹಚ್ಚಿ ಭಯ ಭಕ್ತಿಗಳನ್ನು ಪ್ರದರ್ಶಿಸುತ್ತಾ ಶ್ರದ್ಧೆಯಿಂದ ಆಚರಣೆಗೆ ತರುತ್ತೇವೆ. ಮೂಢನಂಬಿಕೆಗಳನ್ನು ಅನುಷ್ಠಾನ ಮಾಡಲು ಭಕ್ತಿಗಿಂತ ಭಯವೇ ಹೆಚ್ಚು ಕಾರಣವೆಂದು ಹೇಳಬಹುದು. ಉತ್ತಮ ಭವಿಷ್ಯದ ಹಾಗೂ ಲಾಭದ ನಿರೀಕ್ಷೆಯ ದೃಷ್ಟಿಯಿಂದಲೂ ಮೂಢನಂಬಿಕೆಗಳಿಗೆ ಶರಣಾಗುವುದುಂಟು. ಕೆಲವರು ಕೇವಲ ಮನಸ್ಸಿನ ನೆಮ್ಮದಿಗಾಗಿಯೂ ಮೂಢನಂಬಿಕೆಗಳನ್ನು ಆಚರಿಸುತ್ತಾರೆ.

> *ಪುಣ್ಯಕ್ಷೇತ್ರಗಳಲ್ಲಿರುವ ನದಿಗಳಲ್ಲಿ ಮಿಂದರೆ ಪಾಪ ಪರಿಹಾರವಾಗಿ, ಮುಕ್ತಿ ಲಭಿಸುವುದೆಂದು ಭಾವಿಸಿ ಪಾಪದ ಕೂಪವನ್ನೇ ಬೆನ್ನಿಗೆ ಕಟ್ಟಿಕೊಂಡು ಪಾಪ ಪರಿಹಾರಕ್ಕಾಗಿ ಕಂಡಕಂಡ ನದಿಯಲ್ಲೆಲ್ಲಾ ಮುಳುಗು ಹಾಕುತ್ತೇವೆ. ಹಾಗೇನಾದರೂ ಮುಕ್ತಿ ಸಿಗುವುದೇ ಆದಲ್ಲಿ ಮೊದಲು ಏನೂ ಪಾಪ ಮಾಡದ, ಆ ನೀರಿನಲ್ಲೇ ಸದಾ ಕಾಲ ಇರುವ, ಜಲಚರಗಳಿಗೆ ಲಭ್ಯವಾಗಬೇಕಲ್ಲವೇ?*

ಮನೆಯಲ್ಲಿರುವ ಹಿರಿಯರಂತೂ ಹೀಗೆ ಮಾಡು, ಹಾಗೆ ಮಾಡು, ಅದನ್ನು ಮಾಡಬೇಡ, ಇದನ್ನು ಮಾಡಬೇಡ ಎಂದೆಲ್ಲಾ ಕಟ್ಟಪ್ಪಣೆಯನ್ನು ಸಾಮಾನ್ಯವಾಗಿ ಪ್ರತಿಯೊಂದು ವಿಷಯಕ್ಕೂ ಮಾಡುತ್ತಿರುತ್ತಾರೆ. ಏಕೆ? ಏನು? ಹಾಗೆ ಮಾಡಿದರೆ ಏನಾಗುತ್ತದೆ? ಹೀಗೆ ಮಾಡದಿದ್ದರೆ ಏನಾಗುತ್ತದೆ? ಎಂದು ಪ್ರಶ್ನಿಸಿದರೆ ಅಥವಾ ಕಾರಣ ಕೇಳಿದರೆ, ಅವರುಗಳಿಂದ ಸಾಮಾನ್ಯವಾಗಿ ಸಿಗುವ ಉತ್ತರವೆಂದರೆ ''ಹೇಳಿದಷ್ಟು ಮಾಡೋ... ತಲೆಹರಟೆ...'' ಎಂಬ ಸಿಡುಕೇ ಆಗಿರುತ್ತದೆ. ಏಕೆಂದರೆ, ಅವರುಗಳಿಗೆ ಆ ಮೂಢನಂಬಿಕೆಗಳಿಗೆಲ್ಲಾ ಸಮಂಜಸವಾದ ಉತ್ತರವಾಗಲೀ, ಕಾರಣವಾಗಲೀ ಪಾಪ! ಗೊತ್ತೇಯಿರುವುದಿಲ್ಲ, ಅಲ್ಲದೆ, ಅವುಗಳನ್ನು ಸಮರ್ಥಿಸಿಕೊಳ್ಳಲು ಯಾವುದೇ ಸರಕು ಅವರಲ್ಲಿರುವುದಿಲ್ಲ. ಆದರೆ ಅಷ್ಟಕ್ಕೇ ಅವರುಗಳು ಸುಮ್ಮನಾಗದೆ, ಸೋಲನ್ನು ಒಪ್ಪಿಕೊಳ್ಳದೆ ಕಿರಿಯರ ಮೇಲೆ ಗೆಲುವು ಸಾಧಿಸಲು ಉಪಯೋಗಿಸುವ ಅಸ್ತ್ರವೆಂದರೆ 'ಭಯಾಸ್ತ್ರ!' ಹಾಗೆ ಮಾಡಿದರೆ ಕೇಡಾಗುತ್ತದೆ! ಹೀಗೆ ಮಾಡದಿದ್ದರೆ ಕಷ್ಟನಷ್ಟ, ಸಾವು ನೋವು ಹೆಗಲೇರುತ್ತವೆ ! ಹೀಗೆ ಭಯದ ಹಿನ್ನೆಲೆಯಲ್ಲೇ ಅವು ಗಳು ತಲತಲಾಂತರವಾಗಿ ಶತಮಾನಗಳಿಂದ ಮುಂದುವರಿದುಕೊಂಡುಬಂದಿವೆ.



ಹಿಂದೆ ವಿದ್ಯಾವಂತರ ಸಂಖ್ಯೆ ಹೆಚ್ಚಾಗಿರಲಿಲ್ಲ. ಅವರ ವೈಚಾರಿಕತೆಯ ಮಟ್ಟ ಹೆಚ್ಚಾಗಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಏಕೆ ? ಹೇಗೆ? ಏನು? ಎಂದು ಹಿರಿಯರನ್ನು ಪ್ರಶ್ನಿಸುವ ಎದೆಗಾರಿಕೆಯೂ ಇರಲಿಲ್ಲ. ಅವರಲ್ಲಿ ಇದ್ದದ್ದು ಕೇವಲ ಆಜ್ಞಾಪಾಲನೆಯ ಮನೋಭಾವ, ಕುರುಡು ಶ್ರದ್ಧೆ ಹಾಗೂ ಅಂಧಾನುಕರಣೆಗಳಷ್ಟೆ. ಹೀಗಾಗಿ ಯಾರದೋ ಸ್ವಾರ್ಥಕ್ಕಾಗಿ, ಯಾರೋ ಸ್ವಾರ್ಥಿಗಳು ಸೃಷ್ಟಿಸಿದ ಗ್ರಹಗತಿ, ತಿಥಿಯ ಲೆಕ್ಕಾಚಾರಗಳು, ಶಾಂತಿ, ಶ್ರಾದ್ಧ ಮಾಡಿಸುವ ವಿಚಾರಗಳು, ಕಾಕತಾಳೀಯವಾಗಿ ಸಂಭವಿಸಿದ (ಘಟನೆ) ಶಕುನ, ಅಪಶಕುನಗಳು ಹಾಗೂ ಮೋಜಿಗಾಗಿ ಹುಟ್ಟಿಕೊಂಡ ಹಬ್ಬಹರಿದಿನಗಳು ಮೊದಲಾದವು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬೆಳೆಯಲು ಸಾಧ್ಯವಾಯಿತು.

ಈಗ ನಾವುಗಳು ಶೈಕ್ಷಣಿಕವಾಗಿ, ವೈಚಾರಿಕವಾಗಿ ಹಾಗೂ ವೈಜ್ಞಾನಿಕವಾಗಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದರೂ ಪ್ರತೀದಿನ, ಪ್ರತೀಕ್ಷಣ ಹಿಂದಿನ ಕೆಲವು ಸ್ವಾರ್ಥಿಗಳ ಮತ್ತು ಅಜ್ಞಾನಿಗಳ ಕೊಡುಗೆಯಾದ ಮೂಢನಂಬಿಕೆಗಳಿಗೆ ಶರಣಾಗಿದ್ದೇವೆ. ಅವುಗಳಿಂದ ಏನೂ ಪ್ರಯೋಜನವಾಗುವುದಿಲ್ಲವೆಂದು ತಿಳಿದೂ ಅವುಗಳಿಗೇ ಜೋತುಬಿದ್ದು ನಮ್ಮ ಮೂರ್ಖತನವನ್ನು ಪ್ರದರ್ಶಿಸುತ್ತಿದ್ದೇವೆ. ಬೆಳಗ್ಗೆ ಏಳುವಾಗ ಎಡ ಮಗ್ಗುಲಾಗಿ ಏಳಬಾರದೆನ್ನುತ್ತೇವೆ. ಏಳುವಾಗ ನಾವೇ ಸಾಕಿದ ಬೆಕ್ಕಿನ ದರ್ಶನವಾದರೆ ಅದರ ಮೇಲೆ ಹರಿಹಾಯುತ್ತೇವೆ. ಇಂದು ಏನು ಗ್ರಹಚಾರ ಕಾದಿದೆಯೋ ಎಂದು ಹೌಹಾರುತ್ತೇವೆ. ದಾರಿಯಲ್ಲಿ ಹೋಗುವಾಗ ಬೆಕ್ಕು ಅಡ್ಡ ಬಂದರೆ ಅಥವಾ ಯಾರಾದರೂ ಎಲ್ಲಿಗೆ ಹೊರಟಿರೆಂದು ಕೇಳಿದರೆ, ಅಪಶಕುನಗಳೆಂದು ಮನೆಗೆ ಹಿಂದಿರುಗುತ್ತೇವೆ. ಶುಭ ಕಾರ್ಯಗಳನ್ನು ಮಾಡಲು ವಾರ, ತಿಥಿ, ನಕ್ಷತ್ರ, ರಾಹುಕಾಲ, ಗುಳಿಕಕಾಲ, ಯಮಗಂಡ ಕಾಲಗಳನ್ನು ನೋಡುತ್ತೇವೆ. ಮಕ್ಕಳ ವಿವಾಹವನ್ನು ಜಾತಕ, ಕುಂಡಲಿ, ನಾಮ ನಕ್ಷತ್ರಗಳ ಮೇಲೆ ನಿರ್ಧರಿಸುತ್ತೇವೆ. ಇದುವರೆಗೆ ಯಾರೂ ಕಾಣದ ಸ್ವರ್ಗದಲ್ಲಿ ನಮ್ಮ ಪೂರ್ವಜರು ಇರುವರೆಂದು ಭಾವಿಸಿ ಅವರುಗಳಿಗೆ ಶ್ರಾದ್ಧಾದಿ ಶಾಸ್ತ್ರಗಳನ್ನು ಮಾಡುತ್ತೇವೆ. ಪಿಂಡವನ್ನು ಅರ್ಪಿಸುತ್ತೇವೆ. ಒಂಟಿ ಸೀನು ಅಪಶಕುನವೆಂದು ಭಾವಿಸುತ್ತೇವೆ. ಹಲ್ಲಿ ಲೊಚಗುಟ್ಟಿದರೆ, ಕಾಗೆಯೊಂದು 'ಕಾ... ಕಾ...' ಎಂದರೆ ಅದಕ್ಕೊಂದು ಅರ್ಥ ಕಲ್ಪಿಸುತ್ತೇವೆ. ಗ್ರಹಣ ಕಳೆದ ನಂತರ ತೊಟ್ಟಿಯ ನೀರನ್ನೆಲ್ಲಾ ಬಿಟ್ಟು, ಮಡಿಯುಟ್ಟು ಹೊಸ ನೀರು ತುಂಬಿ ಹೊಸದಾಗಿ ಅಡಿಗೆ ಮಾಡುತ್ತೇವೆ. ಇಂತಹ ವೈರುಧ್ಯಗಳು ಒಂದೇ ಎರಡೇ. ಇವನ್ನೆಲ್ಲಾ ಒಮ್ಮೆ ವಿವೇಕ, ವೈಚಾರಿಕತೆ ಹಾಗೂ ವೈಜ್ಞಾನಿಕ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ನಾವು ಎಷ್ಟು ಮೂಢರು, ಎಂತಹ ಹೆಡ್ಡರು, ನಮ್ಮ ಅಮೂಲ್ಯ ಸಮಯ, ಹಣ, ಜೀವನವೆಲ್ಲಾ ಹೇಗೆ ವ್ಯರ್ಥವಾಗುತ್ತಿದೆ, ಸಂಬಂಧಗಳನ್ನು ಹೇಗೆ ಕೆಟ್ಟದಾಗಿ ಮತ್ತು ಕೀಳಾಗಿ ಕಾಣುತ್ತಿದ್ದೇವೆ ಎಂಬುದು ವೇದ್ಯವಾಗದಿರದು.

ಒಂದು ಉದಾಹರಣೆಯಾಗಿ ನವಗ್ರಹಗಳನ್ನು ತೆಗೆದುಕೊಳ್ಳೋಣ. ನಮ್ಮ ಶಾಸ್ತ್ರಿಗಳು, ಜ್ಯೋತಿಷಿಗಳು ಈ ಗ್ರಹ ಗತಿಗಳನ್ನಾಧರಿಸಿ ವ್ಯಕ್ತಿ ಒಳಿತು, ಕೆಡುಕುಗಳನ್ನು, ಶುಭಾಶುಭಗಳನ್ನು, ಲಾಭ ನಷ್ಟ ಮೊದಲಾದವುಗಳನ್ನು ನಿರ್ಧರಿಸುತ್ತಾರೆ. ಪುರೋಹಿತರು ಯಾಗ, ಯಜ್ಞ, ಹೋಮ ಮೊದಲಾದ ಪೂಜೆಗಳನ್ನು ಮಾಡುತ್ತಾರೆ. ಆ ಒಂಭತ್ತು ಗ್ರಹಗಳೆಂದರೆ, ಸೂರ್ಯ, ಚಂದ್ರ, ಬುಧ, ಗುರು, ಶುಕ್ರ, ಶನಿ, ಕುಜ, ರಾಹು ಮತ್ತು ಕೇತು. ಇಲ್ಲಿ ನಾವು ಗಮನಿಸಬಹುದಾದ ಮೊದಲನೆಯ ಕಟುವಾದ ಕಹಿ ಸತ್ಯವೆಂದರೆ, ಸೂರ್ಯ ಒಂದು ಗ್ರಹವೇ ಅಲ್ಲವೆಂಬುದು. ಸೂರ್ಯ ಒಂದು ನಕ್ಷತ್ರ ಕಾಯವೆಂಬುದು ಪ್ರಾಥಮಿಕ ಶಾಲೆಯ ಪೋರನಿಗೂ ಗೊತ್ತು ! ಹಾಗೆಯೇ ಎರಡನೇ ಆಘಾತವೆಂದರೆ ಚಂದ್ರ ಭೂಮಿಯ ಉಪಗ್ರಹ ಹಾಗೂ ಕುಜ, ರಾಹು, ಕೇತುಗಳೆಂಬ ಗ್ರಹಗಳೇ ಇಲ್ಲವೆಂಬುದು. ಖಗೋಳಶಾಸ್ತ್ರದ ಪ್ರಕಾರ ಇರುವ ಗ್ರಹಗಳೆಂದರೆ ಬುಧ, ಗುರು, ಶುಕ್ರ, ಶನಿ, ಭೂಮಿ, ಯೂರನಸ್, ನೆಪ್ಚೂನ್, ಪ್ಲುಟೋ. ವಸ್ತುಸ್ಥಿತಿ ಹೀಗಿರುವಾಗ ನವಗ್ರಹಗಳ ಆರಾಧನೆ ಹಾಗೂ ಇವುಗಳನ್ನು ಆಧರಿಸಿ ಮನುಷ್ಯನ ಒಳಿತುಕೆಡುಕುಗಳನ್ನು, ಶುಭಾಶುಭಗಳನ್ನು ನಿರ್ಧರಿಸುವುದು ಹಾಗೂ ಅದನ್ನು 'ಸೈ' ಎಂದು ಒಪ್ಪುವುದು ಎಷ್ಟು ಸಮಂಜಸ?

ಇನ್ನು ಗ್ರಹಣ ಮತ್ತು ತತ್ಸಂಬಂಧವಾಗಿ ನಮ್ಮ ಅರಿವು ಮತ್ತು ಆಚರಣೆಗಳ ಬಗ್ಗೆ ಹೇಳುವುದಾದರೆ, ಸೂರ್ಯ ಮತ್ತು ಚಂದ್ರ ಗ್ರಹಣಗಳು ವೈಜ್ಞಾನಿಕ ಹಿನ್ನೆಲೆಯಲ್ಲಿ ಘಟಿಸುತ್ತವೆಂದು ಸ್ಪಷ್ಟವಾಗಿ ರುಜುವಾತಾಗಿದ್ದರೂ, ಸೂರ್ಯ ಗ್ರಹಣ ಕಾಲದಲ್ಲಿ ರಾಹುವು ಸೂರ್ಯನನ್ನು, ಚಂದ್ರ ಗ್ರಹಣ ಕಾಲದಲ್ಲಿ ಕೇತುವು ಚಂದ್ರನನ್ನು ನುಂಗುತ್ತವೆಂದು ನಂಬುವುದು ಯಾವ ಬುದ್ಧಿವಂತಿಕೆ? ಇಂತಹ ಗ್ರಹಣ ಸಂದರ್ಭದಲ್ಲಿ ಅಡಿಗೆ ಮತ್ತು ಊಟ ಮಾಡುವುದನ್ನು ನಾವು ನಿಷೇಧಿಸಿದ್ದೇವೆ. ಇದಕ್ಕೆ ನಾವುಗಳು ಕೊಡುವ ಕಾರಣವೆಂದರೆ, ಆ ವೇಳೆಯಲ್ಲಿ ಮಾಡಿದ ಅಡಿಗೆಗೂ ಗ್ರಹಣದ ವಕ್ರದೃಷ್ಟಿ ತಗಲುವುದರಿಂದ, ಅಂತಹ ಅಡಿಗೆಯನ್ನು ಊಟ ಮಾಡುವುದರಿಂದ ಅಥವಾ ಗ್ರಹಣದ ವೇಳೆಯಲ್ಲಿ ಊಟ ಮಾಡುವುದರಿಂದ ಅನಾರೋಗ್ಯದ ದುಷ್ಪರಿಣಾಮಗಳನ್ನು ಎದುರಿಸಬೇಕಾಗು ತ್ತದೆಂಬುದೇ ಆಗಿದೆ. ಆದರೆ, ಹಾಗೇನೂ ಆಗುವುದಿಲ್ಲ ವೆಂದು ವಿಜ್ಞಾನಿಗಳು ರುಜುವಾತು ಪಡಿಸಿದ್ದಾರೆ. ಗ್ರಹಣ ಹಿಡಿಯುವುದೇ ಆದಲ್ಲಿ ಮಾಡುವ ಅಡಿಗೆಗೇ ಏಕೆ, ಎಲ್ಲರಿಗೂ ಹಾಗೂ ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳಿಗೂ ಹಿಡಿಯಬೇಕಲ್ಲವೆ? ಪ್ರಕಾಶಿಸುತ್ತಿದ್ದ ಸೂರ್ಯ ಇದ್ದಕ್ಕಿದ್ದ ಹಾಗೇ ಕಣ್ಮರೆಯಾಗಿ, ಗಾಢಾಂಧತೆ ಕವಿಯುವುದರಿಂದ ಅಂದಿನ ಜನರಿಗೆ ಅದೊಂದು ದುಃಖದ ಸಂಗತಿಯಾಗಿತ್ತು. ಈ ಹಿನ್ನೆಲೆಯಲ್ಲಿ ಅವರು ಆಚರಣೆಗೆ ತಂದ ಆಚಾರಗಳು ಮುಂದೆ ಏನೇನೋ ಅರ್ಥಗಳನ್ನು ಕಂಡುಕೊಂಡವು.

ಗ್ರಹಣದ ಸಂಬಂಧವಾಗಿ ನಾವು ಗಮನಿಸಬಹುದಾದ ಮತ್ತೊಂದು ಹಾಸ್ಯಾಸ್ಪದ ಸಂಗತಿಯೆಂದರೆ ಕೆಲವರು ಆ ಅವಧಿ ಕಳೆದ ನಂತರ ಮನೆಯಲ್ಲಿ ಶೇಖರಿಸಿಟ್ಟಿದ್ದ ನೀರನ್ನೆಲ್ಲಾ ಹೊರ ಚೆಲ್ಲಿ ಹೊಸ ನೀರನ್ನು ತುಂಬಿಕೊಳ್ಳುತ್ತಾರೆ. ಇದಕ್ಕೆ ಇಂದಿನವರು ನೀಡುವ ಕಾರಣ ವೈಜ್ಞಾನಿಕವಾಗಿಯೇನೋ ಇದೆ. ಅದೆಂದರೆ, ಸೂರ್ಯನ ಕಿರಣಗಳು ಕ್ರಿಮಿನಾಶಕ ಶಕ್ತಿಯನ್ನು ಹೊಂದಿದ್ದು ಗ್ರಹಣದ ಅವಧಿಯಲ್ಲಿ ಅವು ನೀರಿನ ಮೇಲೆ ಬೀಳದಿರುವುದರಿಂದ ಕ್ರಿಮಿಗಳು ಉತ್ಪತ್ತಿಯಾಗಿ ಆ ನೀರು ಬಳಕೆಗೆ ಯೋಗ್ಯವಲ್ಲವೆಂಬುದೇ ಆಗಿದೆ. ಆದರೆ, ಇದೂ ಎಂತಹ ಮೂರ್ಖತನವನ್ನು ಪ್ರದರ್ಶಿಸುತ್ತದೆಂದರೆ, ನೀರು ಮನೆಯೊಳಗಿರುವುದರಿಂದ ಸೂರ್ಯನ ಕಿರಣಗಳು ಅದರ ಮೇಲೆ ಬೀಳುವ ಸಾಧ್ಯತೆ ಯಾವಾಗಲೂ ಇರುವುದಿಲ್ಲವೆಂಬುದು ಒಂದನೇ ಸತ್ಯವಾದರೆ, ಗ್ರಹಣದ ಅವಧಿಯಲ್ಲಿ ಸೂರ್ಯನ ಕಿರಣಗಳು ಮನೆಯೊಳಗಿನ ನೀರಿನ ಮೇಲೇಕೆ, ನೀರು ಸರಬರಾಜು ಮಾಡುವ ಟ್ಯಾಂಕ್‌ಗಳ ಹಾಗೂ ಇವುಗಳಿಗೆ ನೀರು ಪೂರೈಸುವ ನದಿಗಳ ಮೇಲೂ ಬೀಳುವುದಿಲ್ಲ: ಎಂದ ಮೇಲೆ ನೀರಿನ ಸಮಸ್ಯೆ ಉಲ್ಬಣಿಸಿರುವ ಈ ಕಾಲದಲ್ಲಿ ಮನೆಯಲ್ಲಿರುವ ನೀರನ್ನೆಲ್ಲಾ ಹೊರಗೆ ಚೆಲ್ಲುವುದು ಖಂಡಿತವಾಗಿಯೂ ಬುದ್ಧಿವಂತಿಕೆ ಎನ್ನಿಸುವುದಿಲ್ಲ.

ರಾಶಿಗಳ ಭವಿಷ್ಯವನ್ನು ಹಲವರು ನಂಬುತ್ತಿದ್ದಾರೆ. ಅದಕ್ಕಾಗಿಯೇ ಎಲ್ಲಾ ಪತ್ರಿಕೆಗಳೂ ರಾಶಿ ಫಲಗಳನ್ನು ಪ್ರಕಟಿಸಿದರೆ, ಎಲ್ಲಾ ಟಿ. ವಿ. ಚಾನಲ್‌ಗಳೂ ಅವನ್ನ ಪ್ರಸಾರ ಮಾಡುತ್ತಿವೆ. ಇವು ನಮ್ಮ ಆರೋಗ್ಯ, ವ್ಯವಹಾರದಲ್ಲಿನ ಲಾಭ ನಷ್ಟ, ಉದ್ಯೋಗ, ವಿದ್ಯಾಭ್ಯಾಸ, ವಿವಾಹ ಮೊದಲಾದವುಗಳ ಬಗ್ಗೆ ನಮ್ಮ ಹಣೆಬರಹವನ್ನು ಬರೆದ ಬ್ರಹ್ಮನಂತೆ ಪೋಸು ಕೊಡುತ್ತವೆ. ಆದರೆ, ಇವುಗಳೆಲ್ಲಾ ಸತ್ಯಕ್ಕೆ ಮತ್ತು ನಂಬಿಕೆಗೆ ಎಷ್ಟು ಯೋಗ್ಯವೆಂಬುದನ್ನು ಪರಿಶೀಲಿಸಲು ಒಂದು ಪ್ರಯೋಗವನ್ನು ಮಾಡಬಹುದು. ಒಂದು ವಾರ ಅಥವಾ ತಿಂಗಳಲ್ಲಿ ನಮ್ಮ ಬದುಕಿನಲ್ಲಿ ಘಟಿಸಿದ ಒಳಿತು ಕೆಡುಕುಗಳನ್ನೆಲ್ಲಾ ಒಂದೆಡೆ ಗುರುತು ಮಾಡಿಕೊಂಡು ಪಂಚಾಂಗ ಪತ್ರಿಕೆ ಮೊದಲಾದವುಗಳಲ್ಲಿ ಪ್ರಕಟವಾಗಿರುವ ರಾಶಿ ಫಲಗಳೊಡನೆ (ಎಲ್ಲಾ ಪತ್ರಿಕೆಗಳೂ ಒಂದೇ ತೆರನಾದ ಫಲಗಳನ್ನು ಹೇಳದಿರುವುದನ್ನೂ ಇಲ್ಲಿ ಗಮನಿಸಬೇಕು) ತಾಳೆ

ನೋಡಿದಾಗ ಅವುಗಳ ಸತ್ಯಾಸತ್ಯತೆಗಳು ಸ್ಪಷ್ಟವಾಗಿ ರುಜುವಾತಾಗುವುದರಿಂದ ಅವುಗಳನ್ನು ನಂಬುವುದರಲ್ಲಿ ಅರ್ಥವಿಲ್ಲವೆಂಬ ಸತ್ಯ ವೇದ್ಯವಾಗುತ್ತದೆ.

ಮೂಢನಂಬಿಕೆಗಳಲ್ಲಿ ಹಾಗೂ ಆಚರಣೆಗಳಲ್ಲಿ ಹಾಸ್ಯದ ಹೊಳೆ ಹೇಗೆ ಹರಿದಿದೆಯೆಂಬುದಕ್ಕೆ ಇನ್ನೂ ಸಾಕಷ್ಟು ಉದಾಹರಣೆಗಳಿವೆ. ಮಕ್ಕಳಿಲ್ಲದವರು ಅಥವಾ ಮಕ್ಕಳಾಗದವರು ಈ ವೈಜ್ಞಾನಿಕ ಯುಗದಲ್ಲೂ ಮಕ್ಕಳ ಭಾಗ್ಯಕ್ಕಾಗಿ ಮಿಂದು ಮಡಿಯುಟ್ಟು, ಶ್ರದ್ಧಾ ಭಕ್ತಿಯಿಂದ ಅರಳೀ ಕಟ್ಟೆಯನ್ನು ಸುತ್ತುವುದನ್ನು ನೋಡಬಹುದಾಗಿದೆ. ಕೇವಲ ಅರಳೀ ಮರವನ್ನು ಸುತ್ತುವುದರಿಂದ ಮಕ್ಕಳಾಗುವು ದಾಗಿದ್ದರೆ ತಾಯಿತನವನ್ನು ಬಯಸುವ ಸ್ತ್ರೀಯರಿಗೆ ಪುರುಷರ ಅವಶ್ಯಕತೆಯೇ ಇರುತ್ತಿರಲಿಲ್ಲವೇನೋ!

ಮಕ್ಕಳಾಗದ ಸ್ತ್ರೀ ನಮ್ಮ ಮಕ್ಕಳನ್ನು ಮುಟ್ಟಿದರೆ, ಎತ್ತಿ ಮುದ್ದಾಡಿದರೆ ಆ ಮಗುವಿಗೆ ದೃಷ್ಟಿಯಾಗಿಬಿಡುತ್ತದೆಂದು ಮಗುವನ್ನು ಆಕೆಯ ಕೈಯಿಂದ ಕೋಪದಿಂದ ಕಸಿದು ಕೊಂಡು 'ಬಂಜೆ' ಎಂದು ಜರಿದು ಆಕೆಯನ್ನು ದೂರ ವಿಡುತ್ತೇವೆ. ಪಾಪ! ಆಕೆಗೆ ಮಕ್ಕಳಾಗದ ದೌರ್ಭಾಗ್ಯಕ್ಕೆ ಪುರುಷನೇ ಕಾರಣವಿರಬಹುದು. ಹೀಗಿರುವಾಗ ಆಕೆ ಯನ್ನು ಹಂಗಿಸಿ, ಮನನೋಯಿಸುವುದು ಮಾನವೀಯತೆ ಯಿಲ್ಲದ ಮೌಢ್ಯವಲ್ಲದೆ ಬೇರೇನು?

ಬೆಳಿಗ್ಗೆ ಏಳುವಾಗ ಬೆಕ್ಕಿನ ದರ್ಶನವಾದರೆ ಅಥವಾ ದಾರಿಯಲ್ಲಿ ಹೋಗುವಾಗ ಅದು ಅಡ್ಡ ಹಾದು ಹೋದರೆ ಅಪಶಕುನವೆಂದು ಭಾವಿಸುತ್ತೇವೆ. ಯಃಕಶ್ಚಿತ್ ಬೆಕ್ಕು ಆಪತ್ತು ಅಪಶಕುನಗಳನ್ನು ನಿರ್ಧರಿಸುವಷ್ಟು ಸಮರ್ಥ ಶಾಲಿಯೆ? ಪಾಪ! ಅದೊಂದರ ಪರಿವೆಯೂ ಇಲ್ಲದ ಅದು ತನ್ನ ಆಹಾರಕ್ಕಾಗಿ ಅವರಿವರ ಮನೆಗೆ ಅಡ್ಡಾಡುವಾಗ ಆಕಸ್ಮಿಕ ವಾಗಿ ನಾವು ಅದಕ್ಕೆ ಎದುರಾದರೆ ಅದನ್ನು ಅಪಶಕುನವೆಂದು ನಾವು ಭಾವಿಸಿದರೆ ಅದರಲ್ಲಿ ಅದರ ತಪ್ಪೇನಿದೆ? ಅದೂ ನಮ್ಮಂತೆ ಅದಕ್ಕೆ ಎದುರಾದ ನಮ್ಮನ್ನು ಅಪಶಕುನವೆಂದು ಭಾವಿಸಿ, ಶಪಿಸುವಂತಾದರೆ ನಮಗೆ ಹೇಗಾಗಬೇಡ?

ಕಾಗೆಯೊಂದು ಆಕಸ್ಮಿಕವಾಗಿ ಮನೆಯೊಳಗೆ ಬಂದು ಬಿಟ್ಟರೆ, ಏನೋ ಕೇಡು ಕಾದಿದೆ, ಶನಿ ನಮಗೆ (ಶನಿಯ ವಾಹನ ಕಾಗೆಯಾದ್ದರಿಂದ) ವಕ್ಕರಿಸಿಕೊಂಡನೆಂದು ಕಂಗಾಲಾಗುತ್ತೇವೆ. ಆದರೆ, ಬದುಕಿದ್ದಾಗ ತಂದೆ ತಾಯಿಗಳಿಗೆ ಏನೂ ಉಪಚಾರ ಮಾಡದ ನಾವು ಅವರು ಸತ್ತ ಮೇಲೆ ಶ್ರದ್ಧೆಯಿಂದ ಶ್ರಾದ್ಧ ಮಾಡಿ ಪಿಂಡವನ್ನು ಅರ್ಪಿಸಿ, ಅದನ್ನು ಕಾಗೆ ಬಂದು ತಿಂದರೆ ಕಾಗೆ ರೂಪದಲ್ಲಿ ನಮ್ಮ ಪಿತೃಗಳು ಪಿಂಡವನ್ನು ಸ್ವೀಕರಿಸಿದರೆಂದು ಭಾವಿಸುವ ನಾವು ಕಾಗೆಯೊಂದು ಮನೆಯೊಳಗೆ ಬಂದಾಗ ನಮ್ಮ ಪಿತೃಗಳೇ ಕಾಗೆ ರೂಪದಲ್ಲಿ ನಮ್ಮನ್ನೆಲ್ಲಾ ನೋಡಿಕೊಂಡು ಹೋಗಲು ಬಂದಿದ್ದಾರೆಂದು ಏಕೆ ಭಾವಿಸಬಾರದು?

ಪುಣ್ಯಕ್ಷೇತ್ರಗಳಲ್ಲಿರುವ ನದಿಗಳಲ್ಲಿ ಮಿಂದರೆ ಪಾಪ ಪರಿಹಾರವಾಗಿ, ಮುಕ್ತಿ ಲಭಿಸುವುದೆಂದು ಭಾವಿಸಿ ಪಾಪದ ಕೂಪವನ್ನೇ ಬೆನ್ನಿಗೆ ಕಟ್ಟಿಕೊಂಡು ಪಾಪ ಪರಿಹಾರಕ್ಕಾಗಿ ಕಂಡಕಂಡ ನದಿಯಲ್ಲೆಲ್ಲಾ ಮುಳುಗು ಹಾಕುತ್ತೇವೆ. ಹಾಗೇನಾದರೂ ಮುಕ್ತಿ ಸಿಗುವುದೇ ಆದಲ್ಲಿ ಮೊದಲು ಏನೂ ಪಾಪ ಮಾಡದ, ಆ ನೀರಿನಲ್ಲೇ ಸದಾ ಕಾಲ ಇರುವ, ಜಲಚರಗಳಿಗೆ ಲಭ್ಯವಾಗಬೇಕಲ್ಲವೇ?

ಹಿಂದೂಗಳಲ್ಲಿರುವ ಕಂದಾಚಾರಗಳ ಮೇಲೆ ಬೆಳಕು ಚೆಲ್ಲಲು ಗುರುನಾನಕರು ಹರಿದ್ವಾರದ ಗಂಗಾ ದಡದಲ್ಲಿ ಮಾಡಿದ ಒಂದು ಘಟನೆ ನೆನಪಿಗೆ ಬರುತ್ತದೆ. ಗುರುನಾನಕರು ಗಂಗಾ ನದಿಯಿಂದ ಬೊಗಸೆ ನೀರನ್ನು ತೆಗೆತೆಗೆದು ದಡಕ್ಕೆ ಹರಿಸುತ್ತಿದ್ದರಂತೆ. ಆಗ ಅದನ್ನು ಬಹಳ ಹೊತ್ತಿನವರೆಗೂ ನೋಡಿದ ಪಿತೃಗಳಿಗೆ ಪಿಂಡಪ್ರದಾನ ಮಾಡಲು ಬಂದಿದ್ದ ವ್ಯಕ್ತಿಯೊಬ್ಬ ಕುತೂಹಲದಿಂದ ಕೇಳಿದನಂತೆ "ಏಕೆ ಹಾಗೆ ಮಾಡುತ್ತಿರುವೆ?" ಎಂದು. "ಪಂಜಾಬ್‌ನಲ್ಲಿರುವ ನನ್ನ ಗದ್ದೆಗೆ ನೀರು ಹಾಯಿಸು ತ್ತಿದ್ದೇನೆ!" ಎಂದು ಗುರುನಾನಕ್ ಉತ್ತರಿಸಿದರು. ಅದಕ್ಕೆ ಆ ವ್ಯಕ್ತಿ "ಅಯ್ಯೋ ಹುಚ್ಚಪ್ಪ, ಅದು ಹೇಗಾದರೂ ಸಾಧ್ಯವಾದೀತು?" ಎಂದು ಅಪಹಾಸ್ಯ ಮಾಡಿದ. ಅದಕ್ಕೆ ಕೊಂಚವೂ ಬೇಸರಿಸದ ಗುರುನಾನಕರು "ನೀವು ಮೂರು ಸಾರಿ ಮೇಲಕ್ಕೆರಚುವ ಗಂಗೆ ಯಾರೂ ಕಾಣದ ಸ್ವರ್ಗವನ್ನು ತಲುಪುವುದಾದರೆ... ನೂರಾರು ಮೈಲಿಗಳ ದೂರದಲ್ಲಿರುವ ನನ್ನ ಗದ್ದೆಯನ್ನು ಏಕೆ ತಲುಪಬಾರದು!?" ಎಂದು ನುಡಿದರು. ಆ ವ್ಯಕ್ತಿ ನಿರುತ್ತರನಾಗುವುದರ ಜೊತೆಗೆ ಪೆಚ್ಚಾಗಿ ಅಲ್ಲಿಂದ ಕಾಲ್ಕಿತ್ತನೆಂದು ಬೇರೆ ಹೇಳಬೇಕಾಗಿಲ್ಲ.

ನಾವು ಎಲ್ಲಿಗಾದರೂ ಹೊರಟಾಗ ಯಾರಾದರೂ ಎಲ್ಲಿಗೆಂದು ಕೇಳಿದರೆ ಮುಖ ಸಿಂಡರಿಸಿ ಏನಾದರೊಂದು ಹಾರಿಕೆ ಉತ್ತರ ನೀಡಿ, ಅಪಶಕುನವಾಯಿತೆಂದುಕೊಳ್ಳುತ್ತಾ ಅವರಿಂದ ಕಳಚಿಕೊಳ್ಳುತ್ತೇವೆ. ಆದರೆ ಬಸ್ಸಿನಲ್ಲಿ ಪ್ರಯಾಣಿಸುವಾಗ ನಿರ್ವಾಹಕ ಟಿಕೇಟು ನೀಡಲು ಎಲ್ಲಿಗೆಂದು ಕೇಳಿದಾಗ ಹೇಳದೆ ಸುಮ್ಮನಿರುತ್ತೇವೆಯೇ?

ನಮ್ಮನ್ನು ಹೆತ್ತು ಹೊತ್ತು ಬೆಳೆಸಿದ ತಾಯಿ ವಿಧವೆ ಯಾದರೆ, ಶುಭಕಾರ್ಯಗಳಿಂದ ಆಕೆಯನ್ನು ದೂರವಿಟ್ಟು, ಆಕೆಯ ಮನಸ್ಸು ಮತ್ತು ಭಾವನೆಗಳನ್ನು ಘಾಸಿಗೊಳಿಸಿ ಅಗೌರವವನ್ನು ತೋರುತ್ತೇವೆ. ಮೂಢನಂಬಿಕೆಗಳಿಗಾಗಿ ಹೆತ್ತಮ್ಮನನ್ನೇ ಅವಮಾನಿಸುವ ನಾವು ಸುಸಂಸ್ಕೃತರೇ? ಬಹಿಷ್ಕಾರದ ಈ ಕಟ್ಟುಪಾಡು ವಿಧುರರಿಗಿಲ್ಲದೆ ವಿಧವೆ ಯರಿಗೆ ಮಾತ್ರ ಮೀಸಲಿಟ್ಟಿರುವುದು ನಮ್ಮ ಸೋಗಲಾಡಿ ತನವನ್ನು ಪ್ರದರ್ಶಿಸುತ್ತದೆ.

ಅಂತಿಮವಾಗಿ ಹೇಳುವುದಾದರೆ ನಾವು ಒಳ್ಳೆಯ ಬೀಜವನ್ನು ಬಿತ್ತಿದರೆ ಹೇಗೆ ಒಳ್ಳೆಯ ಬೆಳೆ ಬರುತ್ತದೆಯೋ ಹಾಗೆ, ನಮ್ಮ ಒಳಿತು, ಕೆಡುಕುಗಳು ಹಾಗೂ ನಮ್ಮ ಸಂಸ್ಕಾರ ಗಳು ನಮ್ಮ ಬದುಕಿನ ಒಳಿತು ಕೆಡುಕುಗಳನ್ನು ನಿರ್ಣಯಿಸುತ್ತ ವೆಯೇ ಹೊರತು, ಅರ್ಥಸಂಬಂಧವೇ ಇರದ ಮೂಢ ನಂಬಿಕೆಗಳಲ್ಲ, ಪಂಚಾಂಗಗಳಲ್ಲ, ಅವು ಹೇಳುವ ಶಾಸ್ತ್ರ, ಜೋತಿಷ್ಯಗಳಲ್ಲ. ಅಂತಹವರು ನಮ್ಮ ಮನೋದೌರ್ಬಲ್ಯ ವನ್ನೇ ಬಂಡವಾಳ ಮಾಡಿಕೊಂಡು ನಮ್ಮ ಭವಿಷ್ಯವನ್ನು ಹೇಳಲು ಹಾಗೂ ನಿರ್ಧರಿಸಲು ಬರುತ್ತಾರೆ. ಹೀಗೆಂದಾಕ್ಷಣ ಎಲ್ಲಾ ನಂಬಿಕೆಗಳನ್ನೂ ಕೈ ಬಿಡಬೇಕೆಂದು ಅರ್ಥವಲ್ಲ. ನಮ್ಮಲ್ಲೂ ಅನೇಕ ಉದಾತ್ತ ಭಾವನೆಯ ಹಾಗೂ ವಿಶೇಷ ಅರ್ಥ, ಮೌಲ್ಯಗಳ ನಂಬಿಕೆಗಳಿವೆ. ಅವುಗಳನ್ನು ಅನುಸರಿಸುವುದರಲ್ಲಿ ಬಾಧಕವೇನಿಲ್ಲ. ಆದರೆ, ಯಾವುದೇ ನಂಬಿಕೆಯನ್ನು ಅದರ ಅರ್ಥ, ಮೌಲ್ಯ, ಉದ್ದೇಶಗಳನ್ನು ತಿಳಿಯದೆ, ಆಧಾರ, ಪುರಾವೆಗಳಿಲ್ಲದೆ, ಸತ್ಯವನ್ನು ಅರಿಯದೆ, ವೈಚಾರಿಕತೆಯ ಒರೆಗೆ ಹಚ್ಚದೆ, ಕೇವಲ ಅಂಧಶ್ರದ್ಧೆಯಿಂದ ಆಚರಣೆ ಮಾಡುವುದು ನಮ್ಮ ಹಾಗೂ ನಮ್ಮ ಬದುಕಿಗೆ ಮತ್ತು ಪ್ರಗತಿಗೆ ಮಾರಕವಾಗುವುದೇ ಹೊರತು ಪೂರಕವಾಗಲಾರದು.

ದೇವರ ಕೃಪೆಗಾಗಿ ನಾವು ಹೊರುವ ಹರಕೆಗಳು ನಮ್ಮ ಮೌಢ್ಯದ ಪರಮಾವಧಿಯ ಪ್ರತೀಕವಾಗಿವೆ. ಮುಡಿ ಕೊಡುವುದು, ಉರುಳು ಸೇವೆ ಮಾಡುವುದು, ಕೆನ್ನೆ, ನಾಲಿಗೆ, ಮೂಗು ಮೊದಲಾದವುಗಳಿಗೆ ದಬ್ಬಳದಂತಹ ಸೂಜಿಗಳನ್ನು ಚುಚ್ಚಿಕೊಳ್ಳುವುದು, ಮೊಳೆಗಳ ಪಾದುಕೆಗಳ ಮೇಲೆ ನಿಲ್ಲುವುದು, ಮೊಳೆಗಳ ಮಂಚದ ಮೇಲೆ ಮಲಗುವುದು, ನಿಗಿನಿಗಿ ಕೆಂಡವನ್ನು ಹಾಯುವುದು, ಸಿಡಿ ಏರುವುದು, ಉಪವಾಸವಿರುವುದು, ಇಂತಹ ಆಚರಣೆ ಗಳು ಒಂದೆರ ಡಲ್ಲ. ಕೊಳೆಯಿಂದ ಜಡೆಗಟ್ಟಿದ ಕೂದಲು ನಮಗೇ ಅಸಹ್ಯವಾಗಿರುವಾಗ ಮುಡಿಯ ರೂಪದಲ್ಲಿ ದೇವರಿಗೊಪ್ಪಿ ಸುವುದು ಆತನಿಗೆ ಹೇಗೆ ತಾನೆ ಪ್ರಿಯ ವಾದೀತು? ಅದನ್ನು ತೆಗೆದುಕೊಂಡು ಆತ ಏನು ತಾನೆ ಮಾಡಿಕೊಂಡಾನು? ನಾವುಗಳು ದೇವರಿಗೆ ಒಪ್ಪಿಸಬೇಕಾಗಿ ರುವುದು ನಮ್ಮಲ್ಲಿ ಮನೆ ಮಾಡಿಕೊಂಡಿರುವ ದ್ವೇಷ, ಅಸೂಯೆ, ಅನ್ಯಾಯ, ಅನೀತಿ, ಕ್ರೋಧ, ಭೇದಭಾವ ಮೊದಲಾದವುಗಳನ್ನೇ ಹೊರತು ಕೂದಲನ್ನಲ್ಲ. ನಮ್ಮ ಮೌಢ್ಯದ ಹಾದಿಯಲ್ಲಿ ಪವಾಡಗಳೂ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಇದರಿಂದಾಗಿಯೇ ಎಷ್ಟೋ ಜನ ಗೊಡ್ಡು ಸ್ವಾಮೀಜಿಗಳು ಸೃಷ್ಟಿಯಾಗಲು ಸಾಧ್ಯವಾಗಿದೆ. ದೇವರ ಅವತಾರಗಳೆಂದು ಹಾಗೂ ಮೈಮೇಲೆ ದೇವರು ಬರುತ್ತದೆಂದು ಹೇಳಿಕೊಳ್ಳುವುದೂ ಇಂತಹವರನ್ನು ಆರಾಧಿಸುವುದೂ ಮೂರ್ಖತನದ ಅತಿರೇಕವೇ ಸರಿ.

ಸ್ವಾಮಿ ರಾಮಕೃಷ್ಣಾರ್ಪಣಾನಂದ
೩೨೩೦, ಶ್ರೀಕಂಠಮಂಟಪ ಬ್ಲಾಕ್, ನಂಜನಗೂಡು-೫೭೧ ೩೦೧

*(ಹಿಂದಿನ ಪುಟದಿಂದ)*

ಉಲ್ಲಂಘಿಸಿದವರು ಬಡವ ಬಲ್ಲಿದ, ಮೇಲು ಕೀಳು, ಎಂಬ ತಾರತಮ್ಯವನ್ನು ಸೃಷ್ಟಿಸಿ ಜಗತ್ತಿನ ವಿಪತ್ತಿಗೆ ಕಾರಣರಾಗಿದ್ದಾರೆ. ಈ ವಿಪತ್ತನ್ನು ಕೊನೆಗಾಣಿಸುವ ಒಂದೇ ಉಪಾಯ ಸರ್ವರೂ ಸರಿಸಮಾನರು ಎಂಬ ಸಾಮ್ಯವಾದೀ ಅರ್ಥವ್ಯವಸ್ಥೆ.

ಈ ಮಾತನ್ನು ಒಪ್ಪಲು ಬಂಡವಾಳಶಾಹಿ ಲೋಕ ಸಿದ್ಧವಿಲ್ಲ. ಸಾಮ್ಯವಾದೀ ಅರ್ಥವ್ಯವಸ್ಥೆಯನ್ನು ಅನುಸರಿಸಿ ಆಚರಣೆಯಲ್ಲಿ ತಂದಿದ್ದ ಬೃಹತ್ ರಾಷ್ಟ್ರ ಸೋವಿಯತ್ ರಷ್ಯಾ ಛಿದ್ರವಾದ ಮೇಲೆ ಆ ಸಾಮ್ಯವಾದೀ ಅರ್ಥವ್ಯವಸ್ಥೆಯ ಅಸಾರ್ಥಕತೆ ಋಜುವಾತು ಆಯಿತೆಂದು ಬೊಬ್ಬೆ ಹಾಕುತ್ತಿದ್ದಾರೆ. ಆದರೆ ಎಲ್ಲಿಯವರೆಗೆ ಅಸಮಾನತೆಯ ಗರಗಸ ಮಾನವಕುಲವನ್ನು ಹೋಗುತ್ತ ಬರುತ್ತ ಕೊಯ್ಯುತ್ತಿರುತ್ತದೆಯೊ ಅಲ್ಲಿಯವರೆಗೆ ಸಾಮ್ಯವಾದ ಸಾಯುವುದೇ ಇಲ್ಲ! ಅದು ಕೆಲಕಾಲ ಮಬ್ಬಾಗಬಹುದು. ಬಂಡವಾಳಶಾಹೀ ವ್ಯವಸ್ಥೆಯ ಕಣ್ಣು ಕೋರೈಸುವ ಆಡಂಬರದಲ್ಲಿ ಕ್ಷೀಣವಾಗಬಹುದು. ಆದರೆ ಅದೆಂದಿಗೂ ನಂದಿಹೋಗದು. ಕಾಲಾನುಕಾಲಕ್ಕೆ ಎದ್ದುಕಾಣುವುದು. ಪ್ರಜ್ವಲಿಸಿ ಬೆಳಗುವುದು. ಇದರಲ್ಲಿ ನಂಬುಗೆ ಇದ್ದವರು ಒಂದಾಗಿ ಹೋರಾಡುವರು. ಇದರಲ್ಲಿ ಸಂಶಯವಿಲ್ಲ. ಸಂದೇಹ ಬೇಡ! ಬಡವರೆಲ್ಲ ಒಂದಾಗಿ ಬನ್ನಿ! ಮುನ್ನುಗ್ಗಿ ಬನ್ನಿ!!

ಕೋ. ಚೆನ್ನಬಸಪ್ಪ
೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿ ನಗರ, ಬೆಂಗಳೂರು-೫೬೦ ೦೮೬.



# ಕತೆಗಾರ

ಮಧ್ಯಾಹ್ನದ ರಣಬಿಸಿಲು. ರೈಲ್ವೆ ಡಬ್ಬಿಯಲ್ಲಿ ವಿಪರೀತ ಸೆಕೆ. ಮುಂದಿನ ನಿಲ್ದಾಣ ಸಿಗಲು ಇನ್ನೂ ಒಂದು ಗಂಟೆಯಾದರೂ ಬೇಕು. ಆ ಕಂಪಾರ್ಟ್‌ಮೆಂಟ್‌ನಲ್ಲಿದ್ದವರು – ಒಂದು ಸಣ್ಣ ಹುಡುಗಿ, ಒಂದು ಪುಟ್ಟ ಹುಡುಗಿ, ಜೊತೆಗೊಬ್ಬ ಸಣ್ಣ ಹುಡುಗ ಮತ್ತು ಅವರ ಆಂಟಿ. ಬೆಂಚಿನ ಮೂಲೆಯಲ್ಲಿ ಒಬ್ಬ ಅಪರಿಚಿತ - ಅವಿವಾಹಿತ. ಆ ಸಣ್ಣ ಹುಡುಗಿಯರು ಮತ್ತು ಸಣ್ಣ ಹುಡುಗ ಇಡೀ ಕಂಪಾರ್ಟ್‌ಮೆಂಟನ್ನೇ – ತಮ್ಮದಾಗಿಸಿಕೊಂಡಿದ್ದರು. ಆಂಟಿ ಮತ್ತು ಆ ಮಕ್ಕಳು ಅವವೇ ಮಾತುಗಳನ್ನು ಬಿಡದೆ ಮತ್ತೆ ಮತ್ತೆ ಆಡಿಕೊಳ್ಳುತ್ತಿದ್ದರು, ನೊಣ ಓಡಿಸಿದರೆ ಮತ್ತೆಮತ್ತೆ ಅಲ್ಲೇ ಬಂದು ಕುಳಿತುಕೊಳ್ಳುತ್ತದಲ್ಲಾ, ಹಾಗೆ. ಆಂಟಿಯ ಮಾತುಗಳಲ್ಲಿ ಬರೀ 'ಬೇಡಾ, ಬೇಡಾ' ತುಂಬಿದ್ದರೆ, ಮಕ್ಕಳು ಎಲ್ಲದಕ್ಕೂ 'ಯಾಕೆ, ಯಾಕೆ?' ಎಂದು ಶುರು ಮಾಡುತ್ತಿದ್ದರು. ಅವಿವಾಹಿತ ಬಾಯ್ಬಿಟ್ಟು ಏನನ್ನೂ ಹೇಳಲಿಲ್ಲ.

'ಬೇಡ ಪವನ್, ಬೇಡಾ' ಎಂದಳು ಆಂಟಿ.

ಆ ಸಣ್ಣ ಹುಡುಗ ಸೀಟಿನ ಕುಷನ್ನನ್ನು ಬಡಿದು ಬಡಿದು ಧೂಳಿನ ಹೊಗೆ ಎಬ್ಬಿಸುತ್ತಿದ್ದ.

'ಈ ಕಿಟಕೀಲಿ ನೋಡು ಬಾ, ಒಂತಮಾಷೆ ತೋರುಸ್ತೀನಿ' ಎಂದು ಕರೆದಳು ಆಂಟಿ.

ಹುಡುಗ ಮನಸ್ಸಿಲ್ಲದ ಮನಸ್ಸಿನಿಂದ ಕಿಟಕಿಯ ಬಳಿ ಬಂದ. ಪ್ರಶ್ನೆ ಶುರುವಾಯಿತು.

'ಆ ಕುರಿಗಳ್ನ ಯಾಕೆ ಆಚೆ ಹೊಡ್ಕೊಂಡ್ ಹೋಗ್ತಿದಾರೆ?'

'ಜಾಸ್ತಿ ಹುಲ್ಲಿರೋ ಇನ್ನೊಂದ್ ಜಾಗಕ್ಕೆ ಹೊಡಕೊಂಡ್ ಹೋಗ್ತಿದಾರೆ ಅಂತ ಕಾಣುತ್ತೆ' ಆಂಟಿ ಕ್ಷೀಣ ದನಿಯಲ್ಲಿ ಹೇಳಿದಳು.

'ಆದ್ರೆ ಅಲ್ಲೇ, ಇರೋ ಕಡೇನೇ ಬೇಕಾದಷ್ಟು ಹುಲ್ಲಿದ್ಯಲ್ಲಾ?... ಬರೀ ಹುಲ್ಲೇ ಅಲ್ವಾ ಇರೋದು ಅಲ್ಲಿ ಆಂಟೀ... ಅಲ್ಲೇ ಬೇಕಾದಷ್ಟು ಹುಲ್ಲಿದೆಯಲ್ಲಾ?'

'ಆ ಇನ್ನೊಂದ್ ಕಡೇ ಇರೋ ಹುಲ್ಲು ಇದಕ್ಕಿಂತಾ ಚೆನ್ನಾಗಿರಬೋದು. ಅದಕ್ಕೇ ಅಲ್ಲಿಗೆ ಹೊಡ್ಕೊಂಡ್ ಹೋಗ್ತಿದಾರೆ ಅಂತ ಕಾಣುತ್ತೆ' ಎಂದಳು ಆಂಟಿ, ಒಂದು ಥರಾ ಪೆದ್ದುಪೆದ್ದಾಗಿ.

''ಅಲ್ಲ್ಯಾಕೆ ಇದಕ್ಕಿಂತಾ ಚೆನ್ನಾಗಿರೋ ಹುಲ್ಲಿದೆ?'

ಬಾಣದಂತೆ ಬಂದೆರಗಿತು ಮರುಪ್ರಶ್ನೆ.

'ಅಗೋ! ಅಲ್ನೋಡು ಹಸುಗಳು!' ಎಂದು ಉದ್ಗರಿಸಿದಳು ಆಂಟಿ. ರೈಲು ರಸ್ತೆಯುದ್ದಕ್ಕೂ ಬಯಲಿನಲ್ಲಿ ಹಸು-ಎತ್ತುಗಳು ಮೇಯುತ್ತಿದ್ದವು. ಆಂಟಿ ಹೇಳಿದ ರೀತಿ ನೋಡಿದ್ರೆ, ಹಸು ಯಾವುದೋ ಒಂದು ಅಪರೂಪದ ಪ್ರಾಣೀನೇನೋ ಅನ್ನುವ ಭಾವನೆ ಬರುವಂತಿತ್ತು.

'ಅಲ್ಲಿರೋ ಹುಲ್ಯಾಕೆ ಚೆನ್ನಾಗಿದೆ ಹೇಳಿ ಆಂಟೀ' ಮತ್ತೆ ರಗಳೆ ಶುರು ಹಚ್ಚಿದ ಪವನ್.

ಆಂಟಿ ಆ ಅಪರಿಚಿತನ ಕಡೆ ಮುಜುಗರದಿಂದ ನೋಡಿದಳು. ಅವನ ಗಂಟುಮುಖದಲ್ಲಿ ಸಿಡುಕು ಮೆಲ್ಲಗೆ ಕಾಣಿಸಿಕೊಳ್ಳತೊಡಗಿತ್ತು. ಆತ ಕಲ್ಲೆದೆಯ ಕಠಿಣ ಮನುಷ್ಯನಿರಬೇಕೆಂದು ಆಂಟಿ ಮನಸ್ಸಿನಲ್ಲೇ ಅಂದುಕೊಂಡಳು. ಆ ಇನ್ನೊಂದು ಕಡೆ ಇರುವ ಹುಲ್ಲು ಯಾಕೆ ಚೆನ್ನಾಗಿರಬಹುದು ಎಂಬ ಬಗ್ಗೆ ಅವಳಿಗೆ ಯಾವ ಉತ್ತರವೂ ಹೊಳೆಯಲಿಲ್ಲ.

ಪುಟ್ಟ ಹುಡುಗಿ, ತನ್ನ ಗಮನವನ್ನು ಬೇರೆಡೆ ತಿರುಗಿಸಿ 'ಕರಡಿ ಬೆಟ್ಟಕೆ ಹೋಯಿತು, ಕರಡಿ ಬೆಟ್ಟಕೆ ಹೋಯಿತು' ಎಂದು ಹೇಳಿಕೊಳ್ಳಲು ಶುರುಮಾಡಿದಳು. ಅವಳಿಗೆ ಬರುತ್ತಿದ್ದುದು ಅದೊಂದೇ ಸಾಲು. ಅಷ್ಟನ್ನೇ ಅವಳು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಂಡು ಪಠಿಸತೊಡಗಿದಳು. ಯಾವುದೋ ಕನಸಿನಲ್ಲಿದ್ದಂತೆ, ತನ್ನಷ್ಟಕ್ಕೇ, ಆದರೆ ದೃಢವಾದ ದನಿಯಲ್ಲಿ, ಜೋರಾಗಿ ಅದೇ ಸಾಲನ್ನು ಮತ್ತೆ ಮತ್ತೆ ಹೇಳಿಕೊಳ್ಳುತ್ತಿದ್ದಳು. ಯಾರೋ ಅವಳೊಂದಿಗೆ, ಆ ಸಾಲನ್ನು ಒಂದು ಸಾವಿರ ಸಲ ಬಿಡದೆ, ಹೇಳಿಕೊಳ್ಳುವುದು ಸಾಧ್ಯವಿಲ್ಲ ಎಂದು ಪಂಥ ಕಟ್ಟಿದ್ದಾರೇನೋ ಎಂದು ಆ ಅಪರಿಚಿತನಿಗೆ ಅನ್ನಿಸಿತು. ಒಂದು ವೇಳೆ ಯಾರಾದರೂ ಪಂಥ ಕಟ್ಟಿದ್ದರೆ ಅವರಿಗೆ ಸೋಲು ಕಟ್ಟಿಟ್ಟ ಬುತ್ತಿ.

ಅಪರಿಚಿತ ಎರಡು ಸಲ ಆಂಟಿಯ ಮುಖ ನೋಡಿದ. ಒಮ್ಮೆ ರೈಲು ನಿಲ್ಲಿಸುವ ಸರಪಳಿಯ ಕಡೆಗೂ ನೋಡಿದ.

'ಎಲ್ಲಿ, ಎಲ್ಲಾ ಬನ್ನಿ ಇಲ್ಲಿ... ನಿಮಗೊಂದು ಕತೆ ಹೇಳ್ತೀನಿ' ಎಂದು ಮಕ್ಕಳನ್ನು ಕರೆದಳು ಆಂಟಿ.

ಸಪ್ಪೆ ಮುಖ ಮಾಡಿಕೊಂಡು ಮಕ್ಕಳು ಆಂಟಿಯ

---

ಮೂಲ : 'ಸಾಕಿ' (ಎಚ್. ಎಚ್. ಮನ್ರೊ)

---

ಹತ್ತಿರಕ್ಕೆ ಸರಿದು ಕುಳಿತರು.

ಮಕ್ಕಳ ಕಣ್ಣಲ್ಲಿ ಆಂಟಿ ಒಳ್ಳೆಯ ಕತೆಗಾರ್ತಿಯಲ್ಲ ಎನ್ನುವುದು ಎದ್ದುಕಾಣುತ್ತಿತ್ತು.

ಆಂಟಿ, ತಮಗೆ ಮಾತ್ರ ಎಂಬಂತೆ ಮೆಲುದನಿಯಲ್ಲಿ ಕತೆ ಹೇಳಲು ಶುರುಮಾಡಿದಳು. ಮಕ್ಕಳು ಕಿರಿಕಿರಿ ಹುಟ್ಟಿಸುವಂತೆ, ಗಟ್ಟಿಯಗಿ, ಎಡಬಿಡದೆ ಪ್ರಶ್ನೆ ಕೇಳುತ್ತಿದ್ದರು. ಆಂಟಿ ಶುರುಮಾಡಿದ ಕತೆ ಮಹಾಬೋರು ಹೊಡೆಸುವ ಒಂದು ದರಿದ್ರ ಕತೆ.

ಒಬ್ಬ ಪುಟ್ಟ ಹುಡುಗಿ, ಮಹಾ ಒಳ್ಳೆಯ ಹುಡುಗಿ. ಆದ್ದರಿಂದ ಎಲ್ಲರಿಗೂ ಅಚ್ಚುಮೆಚ್ಚು. ಒಂದು ಹುಚ್ಚು ಗೂಳಿ ಅವಳನ್ನು ಓಡಿಸಿಕೊಂಡು ಬರುತ್ತದೆ. ಆಗ ಅವಳನ್ನು ಮೆಚ್ಚಿಕೊಂಡ ಎಲ್ಲರೂ ತಾಮುಂದು ನಾಮುಂದು ಎಂದು ನುಗ್ಗಿ ಅವಳನ್ನು ಗೂಳಿಯಿಂದ ರಕ್ಷಿಸುತ್ತಾರೆ ಇದು ಅದರ ಸಾರಾಂಶ.

'ಅವಳು ಒಳ್ಳೆಯ ಹುಡುಗಿ ಅಲ್ಲದೇ ಹೋಗಿದ್ದರೆ, ಅವರು ಆ ಹುಡುಗಿಯನ್ನು ರಕ್ಷಿಸುತ್ತಿರಲಿಲ್ಲವಾ?' ಸಣ್ಣ ಹುಡುಗಿ ಕೇಳಿದಳು.

ಅಪರಿಚಿತ - ಅವಿವಾಹಿತನ ಮನಸ್ಸಿನಲ್ಲೂ ಅದೇ ಪ್ರಶ್ನೆ ಎದ್ದಿತ್ತು. 'ಅದೇನೋ ಸರಿ. ಆದರೆ ಆ ಹುಡುಗಿಯ ಒಳ್ಳೆತನ ಅವರಿಗೆ ಅಷ್ಟೊಂದು ಇಷ್ಟ ಆಗ್ದೇ ಇದ್ದಿದ್ರೆ, ಅವರೆಲ್ಲಾ ಅಷ್ಟೊಂದು ಜೋರಾಗಿ ಅವಳ ರಕ್ಷಣೆಗೆ ನುಗ್ತಾ ಇರಲಿಲ್ಲ ಅಂತ ಅನ್ಸುತ್ತೆ' ಎಂದಳು ಆಂಟಿ.

'ಇದೊಂದು ಮಹಾ ಪೆದ್ ಕತೆ' ಎಂದಳು ಸಣ್ಣ ಹುಡುಗಿ.

'ನಾನು ಕತೇ ಪ್ರಾರಂಭ ಮಾತ್ರ ಕೇಳಿಸಿಕೊಂಡೆ' ಎಂದ ಪವನ್.

ಪುಟ್ಟ ಹುಡುಗಿ ಕತೆಯ ಬಗ್ಗೆ ತನ್ನ ಅಭಿಪ್ರಾಯವನ್ನು ಬಾಯಿಬಿಟ್ಟು ಹೇಳದಿದ್ದರೂ, ಯಾವ ಮಾಯದಲ್ಲೋ ತನ್ನ 'ಕರಡಿ ಬೆಟ್ಟಕ್ಕೆ ಹೋಯಿತು' ಸಾಲನ್ನು ಮತ್ತೆ ಪಠಿಸಲು ತೊಡಗಿದ್ದಳು.

'ನಿಮಗೆ ಕತೆ ಹೇಳೋಕೆ ಬರೋಲ್ವೇನೋ ಅನ್ನಿಸುತ್ತೆ' ಎಂದು ಹೇಳೇಬಿಟ್ಟ ಆ ಅಪರಿಚಿತ ಕುಳಿತಲ್ಲಿಂದಲೇ.

ಆ ಅನಿರೀಕ್ಷಿತ ದಾಳಿಯಿಂದ ತತ್ತರಿಸಿದ ಆಂಟಿ, ತನ್ನನ್ನು ಹೇಗೆ ಸಮರ್ಥಿಸಿಕೊಳ್ಳಬೇಕೆಂದೇ ತಿಳಿಯದೆ ಕನಲಿದಳು.

'ಮಕ್ಕಳಿಗೆ ಇಷ್ಟಾನೂ ಆಗ್ಬೇಕು ಅರ್ಥಾನೂ ಆಗಬೇಕು. ಅಂತ ಕತೆ ಹೇಳೋದು ಎಷ್ಟು ಕಷ್ಟ ಗೊತ್ತಾ?'

'ನಂಗೇನೋ ಹಾಗನ್ನಿಸೋಲ್ಲ' ಎಂದ ಅವಿವಾಹಿತ.

'ಹಾಗಿದ್ರೆ, ಮಕ್ಕಳಿಗೆ ನೀವೇ ಯಾಕೆ ಒಂದು ಕತೆ ಹೇಳಬಾರದು?'

'ಒಂದು ಕತೆ ಹೇಳಿ ಅಂಕಲ್' ಎಂದು ದುಂಬಾಲು ಬಿದ್ದಳು ಸಣ್ಣ ಹುಡುಗಿ.

ಅವಿವಾಹಿತ ಕತೆ ಹೇಳಲು ಪ್ರಾರಂಭಿಸಿದ.

ಒಂದಾನೊಂದು ಕಾಲ್ದಲ್ಲಿ, ಒಂದೂರಲ್ಲಿ ಒಬ್ಬ ಹುಡುಗಿ ಇದ್ಲು, ಅವಳ ಹೆಸರು ನಿರ್ಮಲಾ ಅಂತ. ಅವಳು ತುಂಬಾ ಒಳ್ಳೇಳು...

ಒಂದೇ ಕ್ಷಣ, ಮಕ್ಕಳಲ್ಲಿ ಕೆರಳಿದ್ದ ಆಸಕ್ತಿ ಹೊಯ್ದಾಡಲು ತೊಡಗಿತು. ಕತೆ ಯಾರೇ ಹೇಳಲಿ. ಅವವೇ ಕತೆಗಳು. ಎಲ್ಲಾ ಒಂದೇ ಥರಾ ಬೋರು.

...ಆ ಹುಡುಗಿ ಹೇಳಿದ್ ಕೆಲ್ಸಾ ಎಲ್ಲಾ ಮಾಡ್ತಾ ಇದ್ಲು, ಯಾವಾಗ್ಲೂ ಸತ್ಯಾನೇ ಹೇಳ್ತಾ ಇದ್ಲು. ಬಟ್ಟೆ ಮಾಸ್ಕೊಳ್ದೆ ಕ್ಲೀನಾಗಿ ಇಟ್ಕೊಂಡ್ ಇರ್ತಾ ಇದ್ಲು. ಹಾಲು ಕುಡಿಯೋಕೆ ತರ್ಲೆ ಮಾಡ್ತಾ ಇರಲಿಲ್ಲ, ಇಸ್ಕೊಂಡ್ ಗಟಗಟಾಂತ ಕುಡದ್‌ಬಿಡ್ತಾ ಇದ್ಲು. ಪಾಠಾನೆಲ್ಲಾ ಚೆನ್ನಾಗಿ ಓದ್ಕೊಂತಾ ಇದ್ಲು. ಸಾಲದ್ದಕ್ಕೆ ತುಂಬಾ ವಿನಯವಂತೆ.

'ನೋಡೋಕೆ ಹ್ಯಾಗಿದ್ಲು? ಚೆನ್ನಾಗಿದ್ಲಾ?' ಸಣ್ಣ ಹುಡುಗಿ ಕೇಳಿದಳು.

'ನಿಮ್ಮಷ್ಟೇನೂ ಚೆನ್ನಾಗಿರಲಿಲ್ಲ, ಆದ್ರೆ ಭಯಂಕರ ಒಳ್ಳೇಳು' ಎಂದ ಅವಿವಾಹಿತ.

ಮಕ್ಕಳ ಆಸಕ್ತಿ ಚುರುಕಾಯಿತು. ಒಳ್ಳೆಯತನವನ್ನು ಭಯಂಕರವೆಂದು ವರ್ಣಿಸಿದ್ದು ಹೊಸತೆನ್ನಿಸಿತು. ಈ ಕತೆ ನಿಜಾ ಅನ್ಸೋ ಥರ ಇದೆ. ಆಂಟಿ ಹೇಳುವ ಮಕ್ಕಳ ಕತೆಗಳ ಥರಾ ಬುರುಡೆ ಅಲ್ಲ.

'ನಿರ್ಮಲಾ ಎಷ್ಟೊಂದು ಒಳ್ಳೇಳಪ್ಪಾ ಅಂದ್ರೆ, ಅವಳ ಒಳ್ಳೇತನ ನೋಡಿ ಅನೇಕ ಪದಕಗಳನ್ನು ಕೊಟ್ಟಿದ್ದರು. ಅವನ್ನು ಅವಳು ಸದಾ ಅಂಗಿಗೆ ಪಿನ್ ಹಾಕಿ ಸಿಕ್ಕಿಸಿಕೊಂಡಿರ್ತಾ ಇದ್ಲು. ಒಂದು ಪದಕ ವಿಧೇಯತೆಗೆ. ಇನ್ನೊಂದು ಪದಕ ಹೊತ್ತು ತಪ್ಪಿಸ್ದೇ ಇರೋದಕ್ಕೆ. ಮತ್ತೊಂದು ಪದಕ ಒಳ್ಳೇ ನಡತೆಗೆ. ಹೀಗೆ ಒಂದಲ್ಲ ಎರಡಲ್ಲ ಮೂರು ಪದಕ! ಇಷ್ಟಿಷ್ಟಗಲ ಒಂದೊಂದು ! ಅವಳು ಓಡಾಡ್ದಾಗ್ಲೆಲ್ಲಾ ಅವು ಒಂದಕ್ಕೊಂದು ತಗಲಿ ಕಿಣಿಕಿಣೀ ಕಿಣಿಕಿಣೀ ಅಂತಾ ಇದ್ದವು. ಆ ಊರಿನ ಯಾವ ಹುಡುಗೀಗೂ ಅಷ್ಟೊಂದು ಪದಕಗಳು ಸಿಕ್ಕಿರಲಿಲ್ಲ, ಆ ಪದಕಗಳ್ನ ನೋಡೇ ಎಲ್ರೂ ಅವಳನ್ನ ಅಸಾಧಾರಣ ಒಳ್ಳೇ ಹುಡುಗಿ ಅಂತ ಅಂದ್ಕೊಂಡಿದ್ರು...

'ಭಯಂಕರ ಒಳ್ಳೇಳು' ಎಂದು ನೆನಪಿಸಿದ ಪವನ್

ಯಾರು ನೋಡಿದ್ರೂ ಅವಳ ಒಳ್ಳೇತನದ ಬಗ್ಗೆ ಮಾತಾಡ್ತಾ ಇದ್ದಿದ್ರಿಂದ ಅದು ಆ ಊರಿನ ರಾಜನ ಕಿವೀಗೂ ಬಿತ್ತು. ನಿರ್ಮಲಾ ಅಷ್ಟೊಂದು ಒಳ್ಳೇಳಾಗಿದ್ದಿದ್ರಿಂದ, ಊರಾಚೆ ಇರೋ ತನ್ನ ಉದ್ಯಾನದಲ್ಲಿ ವಾರಕ್ಕೊಂದು ಸಲ ವಿಹರಿಸಬೋದು ಅಂತ ರಾಜ ಅನುಮತಿ ಕೊಟ್ಟ. ಅದೋ ತುಂಬಾ ಸೊಗಸಾದ ಉದ್ಯಾನ. ಆದ್ರೆ ಬೇರೆ ಯಾವ ಮಕ್ಕಳಿಗೂ ಅಲ್ಲಿ ಪ್ರವೇಶ ಇರಲಿಲ್ಲ. ನಿರ್ಮಲಾಗೆ ಅದೇ ಒಂದು ದೊಡ್ಡ ಗೌರವ.

'ಆ ಉದ್ಯಾನದಲ್ಲಿ ಕುರಿಗಳಿದ್ವಾ?' ಪವನ್ ಕೇಳಿದ

'ಇಲ್ಲ, ಅಲ್ಲಿ ಕುರಿಗಳೇ ಇರಲಿಲ್ಲ.'

'ಕುರಿಗಳ್ಯಾಕೆ ಇರಲಿಲ್ಲ ಅಲ್ಲಿ?' ಪ್ರಶ್ನೆ ಚಿಮ್ಮಿ ಬಂತು.

ಆಂಟಿಗೆ ಒಳಗೊಳಗೇ ನಗು. ಹತ್ತಿಕ್ಕಲಾಗದೆ ನಕ್ಕಳು. ಅಲ್ಲ, ಹಲ್ಲು ಕಿರಿದಳು ಎಂದರೆ ಸರಿಯಾದೀತು.

'ಅಲ್ಲಿ ಕುರಿಗಳ್ಯಾಕೆ ಇರ್ಲಿಲ್ಲಪ್ಪಾ ಅಂದ್ರೇ, ಆ ರಾಜಕುಮಾರನ ಅಮ್ಮಂಗೆ ಒಂದು ಕನಸು ಬಿದ್ದಿತ್ತು. ಆ ಕನಸ್ನಲ್ಲಿ ರಾಜಕುಮಾರ ಒಂದು ಕುರಿಯಿಂದ ಸಾಯ್ತಾನೆ. ಇಲ್ಲಾ, ತಲೇ ಮೇಲೆ ಗಡಿಯಾರ ಬಿದ್ದು ಸತ್ತೋಗ್ತಾನೆ ಅಂತ ಯಾರೋ ಹೇಳಿದಾಗಾಯ್ತು. ಅದಕ್ಕೇನೇ ರಾಜ ಉದ್ಯಾನದೊಳಕ್ಕೆ ಕುರಿಗಳನ್ನು ಬಿಟ್ಕೊಂಡಿರಲಿಲ್ಲ.'

ಆಂಟಿ 'ಅಬ್ಬಾ!' ಎಂದುಕೊಂಡಳು ಮನಸ್ಸಿನಲ್ಲೇ.

'ರಾಜ ಕುರಿಯಿಂದ ಸತ್ನೋ, ಗಡಿಯಾರದಿಂದ ಸತ್ನೋ?' ಪವನ್ ಕೇಳಿದ.

'ಕನಸ್ನಲ್ಲಿ ಹೇಳಿದ್ದು ನಿಜಾನೋ ಸುಳ್ಳೋ ಈಗ್ಲೇ ಹ್ಯಾಗೆ ಹೇಳೋದು? ಯಾಕೇಂದ್ರೆ, ರಾಜ ಇನ್ನೂ ಬದುಕಿದ್ದಾನಲ್ಲಾ!' ಅವಿವಾಹಿತ ಒಂದು ಚೂರೂ ತಲೆಕೆಡಿಸಿಕೊಳ್ಳದೆ ಉತ್ತರಿಸಿದ.

.... ಅದಿರ್ಲಿ..., ಅಂತೂ ಉದ್ಯಾನದಲ್ಲಿ ಕುರಿಗಳಿರಲಿಲ್ಲ, ಆದರೆ ಬೇಕಾದಷ್ಟು ಹಂದಿಮರಿಗಳಿದ್ದವು. ಉದ್ಯಾನದ ತುಂಬಾ ಓಡಾಡಿಕೊಂಡಿದ್ವು.'

'ಹಂದಿಮರಿಗಳ ಬಣ್ಣ ಯಾವ್ದು?'

'ಬಣ್ಣಾನೋ? ಕೆಲವು ಮೈಯೆಲ್ಲಾ ಕರಿ. ಮುಖ ಮಾತ್ರ ಬಿಳಿ. ಇನ್ ಕೆಲವು ಬರೀ ಬಿಳಿ, ಮೈತುಂಬಾ ಕಪ್ಪು ಚುಕ್ಕೆ. ಮತ್ತೆ ಕೆಲವು ಮೈಪೂರ್ತಾ ಕಪ್ಪು. ಇನ್ನೊಂದಿಷ್ಟಕ್ಕೆ ಮೈಯೆಲ್ಲಾ ಬೂದು ಬಣ್ಣ, ಮೇಲೆ ಬಿಳೀ ಮಚ್ಚೆಗಳು. ಮತ್ತೊಂದಿಷ್ಟಕ್ಕೆ ಮೈಯೆಲ್ಲಾ ಬಿಳೀ ಅಂದ್ರೆ ಬಿಳಿ.'

ಆ ಉದ್ಯಾನದ ಸಂಪತ್ತೆನಿಸಿದ ಹಂದಿಮರಿಗಳ ಮೈಬಣ್ಣ ಮಕ್ಕಳ ಮನಸ್ಸಿನಾಳಕ್ಕೆ ಇಳಿಯಲಿ ಎಂದು ಕತೆಗಾರ ಸ್ವಲ್ಪ ಹೊತ್ತು ತಡೆದ. ಮತ್ತೆ ಕತೆ ಮುಂದುವರೆಸಿದ.

'ಆ ಉದ್ಯಾನದಲ್ಲಿ ಹೂವುಗಳೇ ಇರಲಿಲ್ಲ, ನಿರ್ಮಲಾಗೆ ತುಂಬಾ ಬೇಜಾರಾಯ್ತು. ಯಾಕೇಂದ್ರೆ,

## ಜಾಗತೀಕರಣ

ನಮ್ಮ ಮನೆಯಂಗಣದಲ್ಲಿ,
ಮನದಂಗಣದಲ್ಲಿ
ಜಗತ್ತಿನ ಹೂಗಳೆಲ್ಲ
ಅರಳಲಿ;
ಅರಳ ಮಳೆ ಸುರಿಯಲಿ!
ಹೂಗಳ ಜಾಗತೀಕರಣಕ್ಕೆ
ಜಾಗರಕ್ಕೆ
ಯಾರು ಬೇಡವೆನ್ನುತ್ತಾರೆ ?
ಯಾರಪ್ಪನ ಆಸ್ತಿ
ಆಗಸದ ಆಗಣಿತ ತಾರೆ ?

ಸಿ. ಪಿ. ಕೆ
ಮೈಸೂರು-೧೨

ಆ ಉದ್ಯಾನಕ್ಕೆ ಹೋದಾಗ, ದೇವರಾಣೇಗೂ ಒಂದು ಹೂವನ್ನೂ ಕೀಳಲ್ಲ ಅಂತ ಕಣ್ಣಲ್ಲಿ ನೀರು ತಟ್ಟಾಡಿಸುತ್ತಾ ತನ್ನ ಆಂಟಿಗಳಿಗೆ ಭಾಷೆ ಕೊಟ್ಟಿದ್ದಳು. ಹೂವುಗಳೇ ಇಲ್ದೇ ಹೋದ್ರೆ ಕೊಟ್ಟ ಮಾತನ್ನು ಉಳಿಸಿಕೊಳ್ಳೋದು ಹ್ಯಾಗೆ? ಹೀಗಾಗಿ ನಿರ್ಮಲಾಗೆ ತುಂಬಾ ತುಂಬಾ ಬೇಜಾರಾಯ್ತು.'

'ಹೂವುಗಳ್ಯಾಕೆ ಇರಲಿಲ್ಲಾ?'

'ಹೂಗಳ್ಯಾಕೆ ಇರಲಿಲ್ಲಪ್ಪಾ ಅಂದ್ರೇ ಹಂದಿಮರಿಗಳು ಅವನ್ನೆಲ್ಲಾ ತಿಂದ್ಹಾಕಿಬಿಟ್ಟಿದ್ವು.' ಅವಿವಾಹಿತ ಚಕ್ ಅಂತ ಹೇಳಿದ.

'ಹಂದಿಮರಿಗಳು, ಇಲ್ಲಾ ಹೂವುಗಳು ಎರಡರಲ್ಲಿ ಯಾವುದಾದ್ರೂ ಒಂದನ್ನ ಇಟ್ಕೋಬೋದು, ಎರಡೂ ಸಾಧ್ಯವಿಲ್ಲ ಅಂತ ಉದ್ಯಾನದ ಮಾಲಿಗಳು ರಾಜನಿಗೆ ಹೇಳಿದ್ರು. ಆ ರಾಜ, ಹೂವುಗಳೇನೂ ಬೇಡ, ಹಂದಿಮರಿಗ್ಳೇ ಇರಲಿ ಎಂದುಬಿಟ್ಟ'.

ರಾಜನ ಆಯ್ಕೆ ಎಂಥಾ ಘನವಾದದ್ದು ಎಂಬುದರ ಬಗ್ಗೆ ಮಕ್ಕಳಿಂದ ಮೆಚ್ಚುಗೆಯ ಉದ್ಗಾರ ಕೇಳಿಬಂತು.

ಇನ್ಯಾರೇ ಆಗಿದ್ರೂ, ಅವೆರಡರಲ್ಲಿ ಹೂಗಳನ್ನು ಆಯ್ದುಕೊಳ್ಳುತ್ತಿದ್ದರೇ ಹೊರತು ಹಂದಿಮರಿಗಳನ್ನಲ್ಲ.

'ಆ ಉದ್ಯಾನದಲ್ಲಿ ಇನ್ನೂ ಬೇಕಾದಷ್ಟು ಬಗೆಯ ಚೆಂದ ಚೆಂದದ ವಸ್ತುಗ್ಳಿದ್ದವು. ನೀಲಿ, ಹಸಿರು, ಚಿನ್ನದ ಬಣ್ಣದ ಮೀನುಗಳಿಂದ ತುಂಬಿದ ಸರೋವರಗಳಿದ್ದವು. ಕಣ್ ಮಿಟಕ್ಸೋದ್ರಲ್ಲಿ ಎಂಥಾ ಜಾಣಸಂಗತಿಗಳನ್ನು ಬೇಕಾದ್ರೂ ಹೇಳಬಲ್ಲ ಸುಂದರ ಗಿಳಿಗಳಿಂದ ಗಿಜುಗುಟ್ಟುವ ಮರಗಳಿದ್ದವು. ಆ ಕಾಲದ ಜನಪ್ರಿಯ ಹಾಡುಗಳನ್ನೆಲ್ಲಾ ಶಿಳ್ಳೆ ಹಾಕಿ ಹಾಡಬಲ್ಲ ಹಕ್ಕಿಗಳಿದ್ದವು. ನಿರ್ಮಲಾ ಆ ಉದ್ಯಾನದಲ್ಲಿ ಅತ್ಯಂತ ಖುಷಿಯಿಂದ ಆ ಕಡೆಯಿಂದ ಈ ಕಡೆಗೆ ಓಡಾಡುತ್ತಾ ತನಗೆ ತಾನೇ ಹೇಳಿಕೊಂಡಳು.'

'ನಾನು ಇಷ್ಟೊಂದು ಮಹಾ ಮಹಾ ಒಳ್ಳೆಯವಳಾಗ್ದೇ ಇದ್ದಿದ್ರೆ, ಈ ಉದ್ಯಾನಕ್ಕೆ ಕಾಲಿಡೋ ಅವಕಾಶ ಸಿಕ್ತಿತ್ತೇ? ಇಲ್ಲಿರೋದನ್ನೆಲ್ಲಾ ನೋಡಿ, ಹೀಗೆ ಸಂತೋಷಪಡೋಕೆ ಆಗ್ತಿತ್ತೆ?' ಹೀಗೆಂದುಕೊಳ್ಳುತ್ತಾ ನಿರ್ಮಲಾ ಓಡಾಡುತ್ತಿದ್ದರೆ, ಅವಳ ಮೂರೂ ಪದಕಗಳು ಒಂದಕ್ಕೊಂದು ಡಿಕ್ಕಿ ಹೊಡೆಯುತ್ತಾ, ಕಿಣಿಕಿಣೀ ಕಿಣಿಕಿಣೀ ಎಂದು ಶಬ್ದ ಮಾಡುತ್ತಾ, 'ನೀನು ಎಷ್ಟೊಂದು ಒಳ್ಳೆಯವಳು' ಎಂದು ಅವಳಿಗೆ ಹೇಳುತ್ತಿದ್ದವು.

ಅಷ್ಟು ಹೊತ್ತಿಗೆ, ಆ ಉದ್ಯಾನಕ್ಕೆ ಒಂದು ದೊಡ್ಡ ತೋಳ, ಗುಂಡು ಗುಂಡಾದ ಹಂದಿಮರಿಯೊಂದು ಸಿಕ್ಕೀತೇ ಎಂದು ಹೊಂಚು ಹಾಕುತ್ತಾ ಬಂತು!

'ಯಾವ ಬಣ್ಣದ್ದು ಅದು?'

ಆಸಕ್ತಿ ಹೆಚ್ಚುತ್ತಿದ್ದ ಆ ಸಂದರ್ಭದಲ್ಲೇ ತಕ್ಷಣ ಬಾಯಿ ಹಾಕಿ ಮಕ್ಕಳು ಕೇಳಿದರು.

'ಮಣ್ಣಿನ ಬಣ್ಣದ ಮೈ, ಕರೀ ನಾಲಗೆ, ಹೇಳೋಕೇ ಆಗ್ದೆ ಇರೊ ಅಷ್ಟು ಕ್ರೌರ್ಯಾನ ತುಂಬಿಕೊಂಡು ಮಿರಿಮಿರಿ ಮಿಂಚೋ ಕಣ್ಣುಗಳು. ತೋಳನ ಕಣ್ಣಿಗೆ ಮೊದಲು ಬಿದ್ದಿದ್ದು ನಿರ್ಮಲಾ. ಅವಳ ಅಂಗಿ ಎಷ್ಟೊಂದು ಬೆಳ್ಳಗಿತ್ತಪ್ಪಾ ಅಂದ್ರೆ ಅದರ ಶುಭ್ರ ಬಿಳಿ ಅಷ್ಟು ದೂರದಿಂದಾನೇ ಕಣ್ಣಿಗೆ ರಾಚ್ತಾ ಇತ್ತು. ನಿರ್ಮಲಾಗೆ ತೋಳ ಕಾಣಿಸ್ತು. ಅದು ತನ್ನ ಕಡೇನೇ ಕಳ್ಳಹೆಜ್ಜೆ ಇಡ್ತಾ ಬರೋದನ್ನು ನೋಡಿದ್ಲು.

ಅಯ್ಯೋ ತಾನು ಈ ಉದ್ಯಾನಕ್ಕೆ ಬರ್ದೆ ಇದ್ರೇನೇ ಎಷ್ಟು ಚೆನ್ನಾಗಿರ್ತಿತ್ತು ಅಂತ ಅವಳಿಗೆ ಅನ್ನಿಸೋಕೆ ಶುರುವಾಯ್ತು. ನಿರ್ಮಲಾ ಇದ್ದಬದ್ದ ಶಕ್ತೀನೆಲ್ಲಾ ಕಾಲಿಗೆ ಸೇರಿಸಿ ಓಡೋಕೆ ಶುರುಮಾಡಿದ್ಲು. ತೋಳ ದಾಪುಗಾಲು ಹಾಕ್ತಾ, ನೆಗೀತಾ ನೆಗೀತಾ ಅವಳ ಕಡೆ ಧಾವಿಸ್ತು. ಅಲ್ಲೊಂದ್ಕಡೆ ಸೌಗಂಧಿಕಾ ಗಿಡಗಳು, ದೊಡ್ಡದಾಗಿ ಒತ್ತಾಗಿ ಬೆಳೆದಿದ್ವು. ನಿರ್ಮಲಾ ಅದ್ರೊಳಕ್ ಹೋಗಿ ಸೇರ್ಕೊಂಬಿಟ್ಲು. ತೋಳ ನಿರ್ಮಲಾನಾ ಜಾಡು ಹಿಡಿದು ಮೂಸ್ತಾ ಮೂಸ್ತಾ ಗಿಡಗಂಟೆಗಳನ್ನು ಹಾರ್ಕೊಂಡ್ ಹಾರ್ಕೊಂಡ್ ಸೌಗಂಧಿಕಾ ಗಿಡಗಳ ಹತ್ರ ಬಂತು. ತನ್ನ ಕಪ್ಪು ನಾಲಿಗೆಯನ್ನು ಚಾಚಿ, ಮೂತಿ ಸವರಿಕೊಳ್ಳುತ್ತಾ ಆಚೀಚೆ ನೋಡ್ತು. ಕಣ್ಣುಗಳು ರೋಷದಿಂದ ಉರೀತಾ ಇದ್ವು. ನಿರ್ಮಲಾಗೆ ತುಂಬಾ ಹೆದರಿಕೆ ಆಯ್ತು. ಅಯ್ಯೋ ತಾನು ತೀರಾ ಇಷ್ಟೊಂದು ಒಳ್ಳೇಳಾಗ್ದೇ ಇದ್ದಿದ್ರೇ ಚೆನ್ನಾಗಿತ್ತು. ಎಲ್ರ ಥರಾ ಮನೇಲಿ ಸುಖವಾಗಿ, ಕ್ಷೇಮವಾಗಿ ಇರ್ತಾ ಇದ್ನಲ್ಲಾ ಎಂದು ಅಂದುಕೊಂಡ್ಳು. ಪುಣ್ಯಕ್ಕೆ, ಸೌಗಂಧಿಕಾ ಗಿಡಗಳ ಗಮಲು ಎಷ್ಟೊಂದು ಜೋರಾಗಿತ್ತಪ್ಪಾ ಅಂದ್ರೆ, ಅದ್ರಿಂದ ಆ ಗಿಡಗಳ ಮಧ್ಯೆ ಇದ್ದ ನಿರ್ಮಲಾಳ ವಾಸನೆ ತೋಳಕ್ಕೆ ಹತ್ತಲೇ ಇಲ್ಲ, ಆ ಗಿಡಗಳೂ ಎಷ್ಟೊಂದು ದಟ್ಟವಾಗಿ ಬೆಳೆದಿದ್ವೂ ಅಂದ್ರೆ, ಎಷ್ಟೊತ್ತು ಹುಡುಕಿದ್ರೂ ನಿರ್ಮಲಾ ತೋಳನ ಕಣ್ಣಿಗೆ ಬೀಳೋದು ಸಾಧ್ಯನೇ ಇರ್ಲಿಲ್ಲ. ನಿರ್ಮಲಾಳ ಯೋಚ್ನೆ ಬಿಟ್ಬಿಟ್ಟು, ಯಾವ್ದಾದ್ರೂ ಹಂದೀ ಮರೀ ಸಿಕ್ಕತ್ತೇನೋ ನೋಡೋದೇ ಒಳ್ಳೇದು ಅಂತ ತೋಳಕ್ಕೆ ಅನ್ನಿಸ್ತು.

ತೋಳ ತನ್ನ ಹತ್ರಾನೇ ಕೂತು ಹೊಂಚ್ ಹಾಕ್ತಾ, ವಾಸನೆ ಹಿಡಿಯೋಕೆ ಪ್ರಯತ್ನ ಮಾಡ್ತಿರೋದನ್ನ ನೋಡಿ ನಿರ್ಮಲಾ ಥರಥರ ನಡುಗಿದ್ಲು. ಹಾಗೆ ನಡುಗಿದಾಗ ಅವಳ ಅಂಗಿಗೆ ಸಿಕ್ಕಿಸಿಕೊಂಡ ಪದಕಗಳೂ ನಡುಗಿ, ವಿಧೇಯತೆಯ ಪದಕ ಸನ್ನಡತೆ ಮತ್ತು ಸಮಯಪಾಲನೆಯ ಪದಕಗಳಿಗೆ ಬಡಿದು ಎಲ್ಲಾ ಕಿಣಿಕಿಣೀ ಕಿಣಿಕಿಣೀ ಶಬ್ದಮಾಡಿದವು. ಇನ್ನೇನು, ಆಚೆ ಹೋಗೋಕೆ ತೋಳ ಹೀಗೆ ತಿರುಗಬೇಕು, ಅಷ್ಟೊತ್ತಿಗೆ ಎಲ್ಲೋ ಕಿಣಿಕಿಣೀ ಶಬ್ದ ಕೇಳಿಸಿತು. ತೋಳ ಕಿವಿ ನಿಮಿರಿಸಿ ಆಲಿಸ್ತು. ಕಿಣಿಕಿಣೀ ಶಬ್ದ ಪೊದೆಯೊಳಗಿಂದಾನೇ ಬರ್ತಾ ಇತ್ತು. ತೋಳ ಸೌಗಂಧಿಕಾ ಪೊದೆಯೊಳಕ್ಕೆ ನುಗ್ಗಿತು. ಅದರ ಕಣ್ಣುಗಳು ರೋಷದಿಂದ, ಗೆದ್ದೆನೆಂಬ ಸಂತೋಷದಿಂದ, ಉರೀತಾ ಇದ್ವು. ತೋಳ ನಿರ್ಮಲಾಳನ್ನು ಪೊದೆಯಿಂದ ದರದರ ಈಚೆ ಎಳೆದು, ಕಚ್ಚಿ-ಸಿಗಿದು ಚೂರೂ ಬಿಡದಂತೆ ತಿಂದು ಬಿಟ್ಟಿತು. ಕೊನೇಲಿ ಉಳಿದಿದ್ದು ಅವಳ ಬೂಡ್ಸು, ಬಟ್ಟೆ ಚೂರುಗಳು, ಮತ್ತೆ ಅವಳ ಒಳ್ಳೇತನಕ್ಕೆ ಸಿಕ್ಕಿದ್ವಲ್ಲಾ ಆ ಪದಕಗಳು ಮಾತ್ರ.

'ತೋಳ ಹಂದಿಮರಿಗಳ್ನ ತಿನ್ಲಿಲ್ವಾ?'

'ಇಲ್ಲ' ಅವೆಲ್ಲಾ ತಪ್ಪಿಸಿಕೊಂಡು ಬಿಟ್ವು'.

'ಕತೆ ಕೆಟ್ಟದಾಗಿ ಶುರುವಾದ್ರೂ ಕೊನೆ ಮಾತ್ರ ತುಂಬಾ ಸೊಗಸಾಗಿದೆ' ಎಂದಳು ಪುಟ್ಟ ಹುಡುಗಿ.

'ನಾನು ಕೇಳಿರೋ ಕತೆಗಳಲ್ಲೆಲ್ಲಾ ಬೊಂಬಾಟಾಗಿರೋ ಕತೆ ಅಂದ್ರೆ ಇದು.' ಒಂದು ಚೂರು ಅಳುಕಿಲ್ಲದೆ, ನಿರ್ಧಾರವಾಗಿ ಹೇಳಿಬಿಟ್ಟಳು ಸಣ್ಣ ಹುಡುಗಿ.

'ನಾನು ಕೇಳಿರೋ ಒಳ್ಳೇ ಕತೆ ಇದೊಂದೇ' ಎಂದು ಘೋಷಿಸಿದ ಪವನ್.

ಆದರೆ ಆಂಟಿಗೆ ಕತೆ ಚೂರೂ ಇಷ್ಟವಾಗಲಿಲ್ಲ.

'ಮಕ್ಕಳಿಗೆ ಹೇಳಬಾರದ ಕತೆ ಇದು. ನಾನು ವರ್ಷಾನುಗಟ್ಟಲೆ ಕಷ್ಟಬಿದ್ದು ಹುಷಾರಾಗಿ ಅವರಿಗೆ ಕಲಿಸಿದ್ದನ್ನೆಲ್ಲಾ ಈ ಕತೆ ಒಂದೇ ಏಟಿಗೆ ಮಣ್ಣುಪಾಲು ಮಾಡ್ತು' ಎಂದಳು ಆಂಟಿ.

ಸ್ಟೇಷನ್ ಬಂತೆಂದು, ಇಳಿಯಲು ತನ್ನ ಲಗೇಜನ್ನು ಕೈಗೆತ್ತಿಕೊಳ್ಳುತ್ತಾ ಆ ಅವಿವಾಹಿತ ಮನುಷ್ಯ ಹೇಳಿದ:

'ಏನೇ ಆಗಲಿ, ನಿಮ್ಮ ಕೈಲಿ ಸಾಧ್ಯವಾಗದ್ದನ್ನು ನಾನು ಮಾಡಿ ತೋರಿಸಿದ್ದೇನೆ. ಏನಿಲ್ಲ ಅಂದ್ರೂ ಮಕ್ಕಳು ಹತ್ತು ನಿಮಿಷ ಸುಮ್ಮನೆ ಕೂರುವಂತೆ ಮಾಡಿದ್ದೇನೆ.'

ಅವಿವಾಹಿತ ರೈಲಿನಿಂದಿಳಿದ, ಪ್ಲಾಟ್‌ಫಾರಂನಲ್ಲಿ ಹೆಜ್ಜೆ ಹಾಕುತ್ತಾ ತನಗೆ ತಾನೇ ಹೇಳಿಕೊಂಡ!

ಪಾಪ, ಆ ಹೆಂಗಸಿನ ಪಾಡು ಬೇಡ, ಇನ್ನೊಂದ್ವೆರಡು ತಿಂಗಳು ಆ ಮಕ್ಕಳು ಎಲ್ಲಾರೆದುರಿಗೆ 'ಒಂದು ಹೇಳಬಾರದ ಕತೆ ಹೇಳಿ ಆಂಟಿ' ಎಂದು ಪೀಡಿಸುತ್ತಿರುತ್ತವೆ.

ಕನ್ನಡಕ್ಕೆ : ಎ. ಎನ್. ಲಕ್ಷ್ಮೀನಾರಾಯಣ
ಎಂ. ೧೨೩೭, ೨ನೇ ಮೇನ್, ವಿವೇಕಾನಂದನಗರ
ಮೈಸೂರು-೫೭೦ ೦೨೩.

## ಬೆಲೆಯಿಲ್ಲದ್ದು

ತಮರಲಾನನ ಜೊತೆ ಮುಲ್ಲ ಟರ್ಕಿಶ್ ಸ್ನಾನ ಗೃಹದಲ್ಲಿದ್ದ.

''ಮುಲ್ಲ, ಒಂದು ವಿಷಯ ಕೇಳ್ತೀನಿ, ಸತ್ಯ ಹೇಳಬೇಕು.''

''ಖಂಡಿತವಾಗಿ ಪ್ರಭು, ನಾನು ಯಾವಾಗಲೂ ನಿಜಾನೇ ಹೇಳೋದು.''

''ನನ್ನ ಬೆಲೆ ಎಷ್ಟೆಂದು ಹೇಳು.''

''ಐದು ಚಿನ್ನದ ಕಾಸುಗಳು.''

ಪ್ರಭುವಿಗೆ ನೊಣ ಕಡಿದಂತಾಯ್ತು.

''ಮುಲ್ಲಾ ನನ್ನ ಸೊಂಟ ಪಟ್ಟಿಗೇ ಅಷ್ಟಾಗುತ್ತಲ್ಲಾ !''

''ನಿಮಗೆ ಬೆಲೆಯಿಲ್ಲ ಪ್ರಭು. ನೀವು ನಿಜ ಹೇಳು ಅಂದಿರಿ. ನಿಮ್ಮ ದೇಹದ ಬೆಲೆ, ಈಗ ಹೇಳುವುದಾದರೆ ಹಣದ ಲೆಕ್ಕದಲ್ಲಿ ಐದು ಕಾಸೇ ಸರಿ. ಆದರೆ ಅದರೊಳಗಿನ ನಿಮ್ಮ ಬೆಲೆಯನ್ನು ನಾನು ಮಾತುಗಳಿಂದು ಅಳೆದು ಹೇಳಲು ಆಗುವುದಿಲ್ಲ.''

# ಶಿಕ್ಷಣ ಮತ್ತು ಖಾಸಗೀಕರಣ

*ಬಂಡವಾಳಶಾಹಿ ಶಿಕ್ಷಣ ಪದ್ಧತಿಯು ಎರಡು ರೀತಿಯ ಆಶಯಗಳನ್ನು ಹೊಂದಿರುತ್ತದೆ. ಒಂದು: ವೈಜ್ಞಾನಿಕ ಪರಿಸರವನ್ನು ನಿರ್ಮಿಸದೆ, ಸಂಪನ್ಮೂಲಗಳನ್ನು ಸರಿ ಪ್ರಮಾಣದಲ್ಲಿ ತಾವೇ ಬಳಸಿಕೊಳ್ಳದೆ, ತಂತ್ರಜ್ಞಾನವನ್ನು ರೂಪಿಸಿಕೊಳ್ಳದೆ - ಅಸಂಖ್ಯಾತ ಜನರನ್ನು ಮಾನಸಿಕವಾಗಿ ಬೌದ್ಧಿಕ ಕೀಳರಿಮೆಗೆ ಒಳಪಡಿಸುವುದು; ಮತ್ತೊಂದು : ತಮ್ಮೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ 'ಊಳಿಗಮಾನ್ಯ' ಮಂದಿಯನ್ನು ಆಧುನಿಕ ಶಿಕ್ಷಣಕ್ಕೆ ಒಳಗುಮಾಡುವುದು.*

ಡಾ|| ವೆಂಕಟಗಿರಿ ದಳವಾಯಿ

ಭಾರತ ಸ್ವಾತಂತ್ರ್ಯ ಕಂಡ ನಂತರವೂ ಶಿಕ್ಷಣ ನೀತಿಯಲ್ಲಿ ಬದಲಾವಣೆಯನ್ನು ಕಾಣದಿರುವುದು ಹುತಾತ್ಮರ ಕನಸುಗಳಿಗೆ ನಾವು ಕೊಟ್ಟ ವಿಕೃತ ರೂಪವಾಗಿದೆ. ತ್ಯಾಗ-ಬಲಿದಾನದ ಮೂಲಕ ಲಭ್ಯವಾದ 'ರಾಷ್ಟ್ರಕಲ್ಪನೆ' ಛಿದ್ರಗೊಳ್ಳುತ್ತಿರುವುದು 'ಸ್ವರಾಜ್ಯ ಕಲ್ಪನೆ'ಯ ದುರಂತವಲ್ಲದೇ ಮತ್ತೇನಲ್ಲ! ಕುದುರೆ, ಖಡ್ಗ, ಫಿರಂಗಿಯ ಮೂಲಕ ಈ ದೇಶವನ್ನಾಳುವ ಸಾಹಸಪ್ರವೃತ್ತಿಯ ಅಗತ್ಯತೆ ಇಂದು ಇಲ್ಲ! ೧೮೮೨ರ 'ಹಂಟರ್ ಆಯೋಗ'ದಿಂದ ಸ್ವಾತಂತ್ರ್ಯಾನಂತರದ ೧೯೮೬ರ 'ಹೊಸ ಶಿಕ್ಷಣ ನೀತಿ'ಯವರೆಗೂ ಗಮನಿಸಿದಾಗ 'ಬ್ರಿಟಿಷರ ನೀತಿ'ಯೇ ಮುಂದುವರೆದಿದೆ. ಈ ಕಾರಣಕ್ಕಾಗಿಯೇ "ಯಾರಿಗೆ ಸಾಧ್ಯವೋ ಅವರು ಶಿಕ್ಷಣ ಪಡೆಯಲು ಪ್ರಾರಂಭಿಸಿದರೆ ಸಾಕು" ಎಂದ ಬ್ರಿಟಿಷರ ಸರಳನೀತಿಗಿಂತಲೂ ಇಂದಿನ ಪ್ರಜಾಪ್ರಭುತ್ವ ಸರ್ಕಾರದ ನಿರ್ಧಾರಗಳು ಭಿನ್ನವಾಗುತ್ತಿಲ್ಲ. ಇದರ ಪರಿಣಾಮವಾಗಿಯೇ ಶಿಕ್ಷಣ ಕ್ಷೇತ್ರವನ್ನು ಸರ್ಕಾರವು 'ಸಾಮಾಜಿಕ ಜವಾಬ್ದಾರಿ'ಯೆಂದು ಭಾವಿಸದೆ 'ಖಾಸಗೀಕರಣ'ಗೊಳಿಸುತ್ತಿರುವುದು. ಅಷ್ಟೇ ಅಲ್ಲ, ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶ್ರೀಮಂತಿಕೆ ಮತ್ತು ಧೀಮಂತಿಕೆಯಿಂದ ಸ್ವಾವಲಂಬಿಯಾಗಬೇಕೆಂಬ 'ಮಂತ್ರ'ವನ್ನು ಬೋಧಿಸುತ್ತಿರುವುದು. ಜಾಗತೀಕರಣದ ಹಿಂದಿರುವ ಆಶಯ, ಒತ್ತಡಗಳು ನಮ್ಮ ನಾಯಕರುಗಳಿಗೆ ಸ್ಪಷ್ಟವಾಗಿದ್ದರೂ, ಪ್ರಲೋಭನೆಗಳಿಂದ ಬಿಡಿಸಿಕೊಂಡು ಬರಲಾಗುತ್ತಿಲ್ಲ. ಈ ಮಂತ್ರ ಬಂಡವಾಳಶಾಹಿಗಳ ಮಂತ್ರವಾಗಬಹುದೇ ಹೊರತು 'ಸಾಮಾಜಿಕ ನ್ಯಾಯ'ವನ್ನು ದೊರಕಿಸಿಕೊಡಲಾರದು. ಇದರಿಂದ ಸಾಮಾನ್ಯನು 'ಶಿಕ್ಷಣದ ವರ್ತುಲ'ದಿಂದ ಸಹಜವಾಗಿ ಹೊರಗುಳಿಯಲಿದ್ದಾನೆ. ಶಿಕ್ಷಣ ರಂಗವನ್ನು ವಿಶ್ವಮಾನ್ಯಗೊಳಿಸುವ, ಮಾರುಕಟ್ಟೆಯ ಸರಕನ್ನಾಗಿಸುವ ಉದ್ದೇಶ ಆಧುನಿಕ ಶಿಕ್ಷಣ ತಜ್ಞರಿಗಿರುವುದರಿಂದ ಅನಿವಾರ್ಯವಾಗಿ ಡಂಕಲ್, ಗ್ಯಾಟ್, ವಿಶ್ವ ಬ್ಯಾಂಕ್, ಐ.ಎಂ.ಎಫ್. ನಂತಹ ಬಂಡವಾಳಶಾಹಿ ಸಂಸ್ಥೆಗಳ ನಿರ್ಣಯಗಳು ನಮ್ಮ ಮಸೂದೆಗಳಾಗುತ್ತವೆ. ಇದರಿಂದಾಗಿ ಬಡತನರೇಖೆಯ ಕೆಳಗಿನವರಷ್ಟೇ ಅಲ್ಲ, ಮಧ್ಯಮವರ್ಗದವರೂ 'ಸಾಕ್ಷರತಾ ಆಂದೋಲನ'ದ ವ್ಯಾಪ್ತಿಗೆ ಬರಲಿದ್ದಾರೆ !

ನಮ್ಮ ಸಂವಿಧಾನದ ೪೫ನೇ ವಿಧಿಯು 'ಜನಸಾಮಾನ್ಯರಿಗೆ ಶಿಕ್ಷಣವನ್ನು ದೊರಕಿಸುವುದೇ ಪ್ರಜಾತಾಂತ್ರಿಕ ಶಿಕ್ಷಣ ಸಾರ' ಎನ್ನುತ್ತದೆ. ಅಲ್ಲದೆ "ಸಂವಿಧಾನವು ಜಾರಿಗೆ ಬಂದ ಹತ್ತು ವರ್ಷಗಳಲ್ಲಿ ದೇಶದ ಎಲ್ಲ ಮಕ್ಕಳಿಗೂ ಅವರ ೧೪ನೇ ವರ್ಷ ತುಂಬುವವರೆಗೆ ಉಚಿತವಾದ ಶಿಕ್ಷಣವನ್ನು ಸರ್ಕಾರ ಕಡ್ಡಾಯವಾಗಿ ನೀಡುತ್ತದೆ" ಎನ್ನುವಲ್ಲಿ ೪೫ನೇ ವಿಧಿಗೆ ದೊರೆತ ಮಾನ್ಯತೆ ಎಲ್ಲಿ? ಈ ವಿಧಿಯು ಒತ್ತಿಹೇಳುವ 'ಉಚಿತ ಮತ್ತು ಕಡ್ಡಾಯ' 'ಎಲ್ಲಾ ಮಕ್ಕಳಿಗೆ' '೧೪ ವರ್ಷದವರೆಗೆ' ಎಂಬ ಪರಿಕಲ್ಪನೆ ಅರ್ಥ ಪಡೆದುಕೊಂಡಿರುವುದೆಲ್ಲಿ? ಹುತಾತ್ಮರು ಕಂಡ ಕನಸುಗಳಿಗೆ ಅಭೀಪ್ಸೆಯಾಗಿಯೇ ನೀತಿಗಳನ್ನು ಜಾರಿಗೆ ತರುತ್ತಿರುವ ಘನ ಸರ್ಕಾರದ ನೇತಾರರು ಹೊರಟಿರುವುದು ದೇಶವನ್ನು ಕಟ್ಟಲೋ ಅಥವಾ ಮಾರಲೋ? ಪ್ರಶ್ನೆ ಕಟುವಾಗಿದೆ ಎನಿಸಬಹುದು. ಆದರೆ ವಾಸ್ತವ ಸ್ಥಿತಿಯಿಂದ ವಿಮುಖರಾಗದಿರಬೇಕಾದರೆ ಅದನ್ನೆದುರಿಸಬೇಕು.

ಸಂವಿಧಾನದ ಬಗೆಗಿನ ಗೌರವದಿಂದಲೋ ಅಥವಾ ಭಯದಿಂದಲೋ ಇತ್ತೀಚಿನವರೆಗೂ ಇಡಿಯಾಗಿಲ್ಲದಿದ್ದರೂ ಬಿಡಿಯಾದ ಯೋಜನೆಗಳು ಅನುಷ್ಠಾನಗೊಳ್ಳುತ್ತಿದ್ದವು. ಇದರಿಂದ ಶತಮಾನಗಳಿಂದಲೂ 'ಅಕ್ಷರ ಸಂಸ್ಕೃತಿ'ಯಿಂದ ವಂಚಿತರಾದ ಈ ದೇಶದ ಬಹುಸಂಖ್ಯಾತ ದುಡಿಯುವ ಜನ ಪ್ರಯೋಜನ ಪಡೆದಿತ್ತು. ಇದರಿಂದ ಆತಂಕಗೊಂಡ ಸ್ಥಾಪಿತ ಶಕ್ತಿಗಳು ನೀತಿಗಳನ್ನು ರೂಪಿಸುತ್ತಿರುವುದು ಜೀವವಿರೋಧಿಯಾಗಿಯೇ! ಹೀಗಾಗಿ ಸರ್ಕಾರದ ಕ್ರಮಗಳೆಲ್ಲವೂ ಪುನಃ ಬೇಡನ ವಿದ್ಯೆಗೆ ಪ್ರತಿಫಲವಾಗಿ 'ಹೆಬ್ಬೆರಳ'ನ್ನು ತೆಗೆದುಕೊಂಡ, ಶೂದ್ರನ 'ತಪಸ್ಸು ಶಕ್ತಿ'ಯನ್ನು ಕಂಡು ದಂಗಾಗಿ ಶಿರವನ್ನೇ ಕಡಿದ, ವೇದಗಳನ್ನು ಕೇಳಿಸಿಕೊಂಡ ತಪ್ಪಿಗೆ ಕಿವಿಯಲ್ಲಿ 'ಕಾದಸೀಸೆ'ಯನ್ನು ಸುರಿವ, ಮಂತ್ರಗಳನ್ನು ಉಚ್ಚರಿಸಿದ ಮಾತ್ರಕ್ಕೆ ನಾಲಿಗೆಯನ್ನೇ ಸೀಳಿಹಾಕಿದಂತಹ ಮನುಧರ್ಮ ಶಾಸನವನ್ನು ನೆನಪಿಸುವಂತಹದ್ದು. ಈ ಹಿನ್ನೆಲೆಯಲ್ಲಿ ಸರ್ಕಾರದ ಕ್ರಮಗಳೆಲ್ಲವೂ ಪರಂಪರಾಗತ ವರ್ಗಹಿತಾಸಕ್ತಿಯನ್ನು ಪುನರುಜ್ಜೀವನಗೊಳಿಸಲು ಹಠ ತೊಟ್ಟಂತೆ ಕಾಣುತ್ತದೆ. ಇದರ ಭಾಗವಾಗಿಯೇ ಜ್ಯೋತಿಷ್ಯ, ವಾಸ್ತುಗಳು ನಮ್ಮ ಪಠ್ಯಗಳಾಗುತ್ತವೆ. ಅಷ್ಟೇ ಅಲ್ಲ, ಅವುಗಳಿಗೂ ವೈಜ್ಞಾನಿಕತೆಯ ನೆಲೆಯನ್ನು ತಂದುಕೊಡುತ್ತಾರೆ. ರಾಷ್ಟ್ರೀಯತೆಯನ್ನು ಮರೆತು ಪಾಶ್ಚಾತ್ಯರ ನೆರಳಲ್ಲಿ ಬದುಕುತ್ತಿರುವ ಇವರ ನೀತಿಗಳು ಅದೆಷ್ಟರಮಟ್ಟಿಗೆ ನಮ್ಮನ್ನು ಪ್ರಜ್ಞಾವಂತರನ್ನಾಗಿ ಮಾಡಬಲ್ಲವು ಎಂಬುದನ್ನು ಕ್ಷಣಹೊತ್ತು ಯೋಚಿಸುವ ಅಗತ್ಯವಿದೆ.




ಬಂಡವಾಳಶಾಹಿ ಶಿಕ್ಷಣ ಪದ್ಧತಿಯು ಎರಡು ರೀತಿಯ ಆಶಯಗಳನ್ನು ಹೊಂದಿರುತ್ತದೆ. ಒಂದು: ವೈಜ್ಞಾನಿಕ ಪರಿಸರವನ್ನು ನಿರ್ಮಿಸದೆ, ಸಂಪನ್ಮೂಲಗಳನ್ನು ಸರಿ ಪ್ರಮಾಣದಲ್ಲಿ ತಾವೇ ಬಳಸಿಕೊಳ್ಳದೆ, ತಂತ್ರಜ್ಞಾನವನ್ನು ರೂಪಿಸಿಕೊಳ್ಳದೆ - ಅಸಂಖ್ಯಾತ ಜನರನ್ನು ಮಾನಸಿಕವಾಗಿ ಬೌದ್ಧಿಕ ಕೀಳರಿಮೆಗೆ ಒಳಪಡಿಸುವುದು ; ಮತ್ತೊಂದು : ತಮ್ಮೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ 'ಊಳಿಗಮಾನ್ಯ' ಮಂದಿಯನ್ನು ಆಧುನಿಕ ಶಿಕ್ಷಣಕ್ಕೆ ಒಳಗುಮಾಡುವುದು; ಈ ಆಶಯಗಳ ಹಿನ್ನೆಲೆಯಲ್ಲಿ ಶಿಕ್ಷಣ ನೀತಿಯನ್ನು ಪರಿಶೀಲಿಸಿದಾಗ ಮೇಲಿನ ಆಶಯಗಳಿಗಿಂತಲೂ ಭಿನ್ನವಾಗಿ ಕಾಣುತ್ತಿಲ್ಲ. ಅಷ್ಟೇ ಅಲ್ಲ, ಇದೊಂದು 'ವಸಾಹತುಶಾಹಿ ನೀತಿ' ಎನ್ನುವುದು ಸ್ಪಷ್ಟವಾಗುತ್ತದೆ. ಈ ನೀತಿಯ ಫಲವಾಗಿ ಇಂದು ೬ರಿಂದ ೧೪ ವರ್ಷದ ಸುಮಾರು ೯ ಕೋಟಿ ಮಂದಿ ಪ್ರಾಥಮಿಕ ಶಾಲಾ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದು ಸ್ಥಿರವ್ಯವಸ್ಥೆಗೆ ಪೋಷಕ ಅಂಶವಾಗಿರುವುದರಿಂದ ಜಾಗತೀಕರಣ ನೆಪದಲ್ಲಿ ಶಿಕ್ಷಣನೀತಿಯು ಪ್ರಾಥಮಿಕದಿಂದ ಉನ್ನತ ಶಿಕ್ಷಣದವರೆಗೂ ತನ್ನ ಕರಿನೆರಳನ್ನು ಹರಡುತ್ತಿದೆ. ಇದರಿಂದಾಗಿಯೇ 'ಹಣವೇ ನಿರ್ಣಾಯಕ' ಅಥವಾ 'ಎಷ್ಟು ಓದಿದರೂ ಉದ್ಯೋಗವಿಲ್ಲ' ಎನ್ನುವ ಅಭಿಪ್ರಾಯ ಇಂದಿನ ಯುವಪೀಳಿಗೆಯಲ್ಲಿ ಗಟ್ಟಿಯಾಗುತ್ತಿದೆ. ಈ ಮನೋಭಾವನೆಗಳಿಗೆ ತಕ್ಕಂತೆ ಶಿಕ್ಷಣ ಮಸೂದೆಗಳಿವೆ. "ಕೇಂದ್ರ ಸರ್ಕಾರ ಪಾರ್ಲಿಮೆಂಟ್‌ನಲ್ಲಿ ಮಂಡಿಸಿರುವ ಒಂದು ಮಸೂದೆಯ ಪ್ರಕಾರ ಯಾವ ವ್ಯಕ್ತಿ ೧೦ ಕೋಟಿಯನ್ನು ದೇಣಿಗೆಯಾಗಿ ಕೊಡುತ್ತಾನೋ ಅವನು ಖಾಸಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಬಹುದು." ಈ ದೇಣಿಗೆಯ ವಿಶ್ವವಿದ್ಯಾಲಯಗಳ ಕಾರ್ಯ ಪ್ರವೃತ್ತಿ

ಯನ್ನು ನಾವು ಸಹಜವಾಗಿಯೇ ಊಹಿಸಬಹುದು. ಜನತಂತ್ರಕ್ಕೆ ದೂರವಾದ ಶಿಕ್ಷಣ ಪದ್ಧತಿ ಸಾಮಾಜಿಕ ಜಾಗೃತಿಗೆ ಪೂರಕವಾಗುವುದಾದರೂ ಹೇಗೆ? ಒಂದು ಅಂದಾಜಿನ ಪ್ರಕಾರ ನಮ್ಮ ದೇಶದ ೬೦ ಕೋಟಿ ಜನಸಂಖ್ಯೆಗೆ ಸುಮಾರು ೬ ದಶಲಕ್ಷ ವಿದ್ಯಾರ್ಥಿಗಳು ಮಾತ್ರ ಉನ್ನತ ಶಿಕ್ಷಣವನ್ನು ಪಡೆಯುತ್ತಾರಂತೆ. ಇದಕ್ಕಿಂತಲೂ ಹೆಚ್ಚು ಆತಂಕಕಾರಿಯಾದ ಸಂಗತಿ ಎಂದರೆ ವಿಜ್ಞಾನವನ್ನು ಪದವಿಮಟ್ಟದಲ್ಲಿ ಅಭ್ಯಸಿಸುವವರು ಶೇ ೨೧ ರಷ್ಟು ಮಾತ್ರ! ಕಲೆ ಮತ್ತು ಮಾನವಿಕ ವಿಷಯಗಳಲ್ಲಿ ಶೇ. ೩೮, ವಾಣಿಜ್ಯ ವಿಭಾಗದಲ್ಲಿ ಶೇ. ೨೨. ಇಷ್ಟೊಂದು ಕಡಿಮೆ ಸಂಖ್ಯೆಯಲ್ಲಿ ನಾವು ವಿಜ್ಞಾನ ವಿಷಯವನ್ನು ಅಭ್ಯಸಿಸುವಂತಾದರೆ, ಬದಲಾವಣೆಯ ಸವಾಲನ್ನು ಎದುರಿಸುವುದು ಹೇಗೆ? ಈಗಿರುವ ಶಿಕ್ಷಣ ನೀತಿಯಿಂದ ಈಗ ತಾನೇ 'ಅಕ್ಷರ ಲೋಕ'ಕ್ಕೆ ಕಾಲಿಡುತ್ತಿರುವ ಬಡಮಕ್ಕಳಿಗೆ ಮಹಿಳೆಯರಿಗೆ ಶಿಕ್ಷಣವು ದುಬಾರಿಯಾಗುವುದರಲ್ಲಿ ಸಂಶಯವಿಲ್ಲ.

ಸಾಮಾಜಿಕ ಮತ್ತು ಸಾಂಸ್ಕೃತಿಕ ಬಿಕ್ಕಟ್ಟುಗಳಿಗೆ 'ಶಿಕ್ಷಣಸಂಸ್ಥೆ'ಯು ಉತ್ತರಗಳನ್ನು ಕಂಡುಕೊಳ್ಳುವುದರಿಂದ ಶಿಕ್ಷಣವನ್ನು ಸಮಾಜದ ಎಲ್ಲ ವರ್ಗದವರಿಗೂ ತಲುಪಿಸುವ ಜವಾಬ್ದಾರಿ ಸರ್ಕಾರಕ್ಕಿದೆ. ಆರ್ಥಿಕ ಮುಗ್ಗಟ್ಟಿನಿಂದ ತತ್ತರಿಸುತ್ತಿರುವ 'ಅಭಿವೃದ್ಧಿಶೀಲ' ರಾಷ್ಟ್ರಗಳಿಗೆ ವಸಾಹಾತುಶಾಹಿ ರಾಷ್ಟ್ರಗಳು ರೂಪಿಸುವ ಶಿಕ್ಷಣ ಪದ್ಧತಿಯೂ ಮಾದರಿಯಾಗಬಾರದು. ಪರಿವರ್ತನೆಯ ಕಡೆ ಬಂಡವಾಳಶಾಹಿಗಳು ವಾಲುವುದಿಲ್ಲ. ಈ ಸಂದರ್ಭದಲ್ಲಿ ಇ.ಎಂ.ಎಸ್. ನಂಬೂದ್ರಿಪಾದ್‌ರವರ ಹೇಳಿಕೆ ಹೆಚ್ಚು ಪ್ರಸ್ತುತವೆನಿಸುತ್ತದೆ: ''ಪರೀಕ್ಷಾಭಿಮುಖಿ ಮತ್ತು ಪಠ್ಯಪುಸ್ತಕ ಕೇಂದ್ರಿತವಾಗಿರುವ ನಮ್ಮ ಶಿಕ್ಷಣ ಕ್ರಮದಲ್ಲಿನ ಬೋಧನೆಯಿಂದಾಗಿ ವಿದ್ಯಾರ್ಥಿಗಳಿಗೆ ತಮ್ಮ ಸ್ವಂತ ವ್ಯಕ್ತಿತ್ವನ್ನು ರೂಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಕಲಾತ್ಮಕ, ವೈಜ್ಞಾನಿಕ ಮತ್ತಿತರ ಬಗೆಯ ಪ್ರತಿಭಾ ವಿಕಾಸಕ್ಕೆ ಏನೇನೂ ಪ್ರೋತ್ಸಾಹ ದೊರೆಯುತ್ತಿಲ್ಲ. ಇದರಿಂದಾಗಿ ಶಾಲಾ ಕಾಲೇಜುಗಳಿಂದ ಹೊರಬರುವ ಹುಡುಗ-ಹುಡುಗಿಯರು ತಮ್ಮ ಹಳ್ಳಿಗಳಿಗೆ ಹಿಂತಿರುಗಿ ಕಷ್ಟಪಟ್ಟು ಕೆಲಸ ಮಾಡುತ್ತಾ ಪ್ರಾಮಾಣಿಕ ಬದುಕಿನಲ್ಲಿ ತೊಡಗಲು ಅಸಮರ್ಥರಾಗುತ್ತಾರೆ. ಸಾಮಾನ್ಯವಾಗಿ ಇವರೆಲ್ಲರ ಆಶೋತ್ತರಗಳೆಂದರೆ ಈ ದೇಶದಲ್ಲಿ ಅಥವಾ ಸಾಧ್ಯವಾದರೆ ಪರದೇಶದಲ್ಲಿ ಒಂದಾನೊಂದು ಬಗೆಯ ದೇಹಶ್ರಮವಿಲ್ಲದ, ಬಟ್ಟೆ ಕೊಳೆಯಾಗದಂತಹ ಕೆಲಸವನ್ನು ಹುಡುಕಿಕೊಳ್ಳುವುದು... ಇಡೀ ಶಿಕ್ಷಣ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಬೇಕು. ಸ್ವದೇಶದಲ್ಲೋ ಪರದೇಶದಲ್ಲೋ ಅಂತೂ 'ಬಿಳಿ ಕತ್ತುಪಟ್ಟಿ'ಯ ಉದ್ಯೋಗವನ್ನು ದೊರಕಿಸುವ ಸಲುವಾಗಿ ಕೆಲವೇ ಜನರನ್ನು ದೃಷ್ಟಿಯಲ್ಲಿಟ್ಟು ಕೊಂಡು ರೂಪಿಸಿರುವ ಇಂದಿನ ಶಿಕ್ಷಣ ಕ್ರಮವನ್ನು ತಮ್ಮ ಸ್ವಂತ ಹಳ್ಳಿ ಅಥವಾ ಪಟ್ಟಣ ಪ್ರದೇಶದಲ್ಲಿ ಪ್ರಾಮಾಣಿಕವಾಗಿ ಬದುಕ ಬಯಸುವ ಜನರ ಆಶೋತ್ತರಗಳಿಗೆ ಅನುಗುಣವಾಗಿ ತಿದ್ದಬೇಕಾಗಿದೆ.'' ಇಲ್ಲವಾದರೆ ನಮ್ಮಲ್ಲಿರುವ ಪಿಡುಗುಗಳಾದ ಜಾತಿ, ಜನಾಂಗ, ಭಾಷೆ, ಪ್ರಾಂತದ ಹಿನ್ನೆಲೆಯಲ್ಲಿ ದ್ವೇಷಗಳು ಹುಟ್ಟಿಕೊಳ್ಳುವುದರಲ್ಲಿ ಅನುಮಾನವಿಲ್ಲ. ವಿಚ್ಛಿದ್ರಕಾರಿತನವನ್ನು ತನ್ನೊಡಲೊಳಗಿಟ್ಟುಕೊಂಡಿರುವ ಆರ್ಥಿಕ ಉದಾರೀಕರಣದಿಂದ ನಾವು ಎಚ್ಚೆತ್ತುಕೊಳ್ಳಬೇಕಿದೆ. ಇದಕ್ಕಾಗಿ ನಾವು ಚರಿತ್ರೆಯನ್ನು ಸರಿಯಾಗಿ ಅರ್ಥೈಸಿಕೊಳ್ಳುವ, ವೈಜ್ಞಾನಿಕ ಮನೋಧರ್ಮವನ್ನು ಬೆಳೆಸಿಕೊಳ್ಳುವ, ಮಾಧ್ಯಮಗಳ ಆಕರ್ಷಣೆಗೆ ಬಲಿಯಾಗದಿರುವ ಹಾಗೂ ಪ್ರಜಾತಂತ್ರ ವ್ಯವಸ್ಥೆಯನ್ನು ಸ್ಥಾಪಿಸುವ, ಗೌರವಿಸುವ ಕ್ರಿಯೆಯಲ್ಲಿ ತೊಡಗಬೇಕಾಗಿದೆ. ಬಹುಶಃ ಇವೆಲ್ಲವೂ ಕಟ್ಟುವ ಕ್ರಿಯೆಯಾಗಬಲ್ಲವು. ಭವಿಷ್ಯದ ತಲೆಮಾರನ್ನು ದೃಷ್ಟಿಯಲ್ಲಿಟ್ಟುಕೊಂಡು, ಅನೇಕ ಕಾರ್ಯಯೋಜನೆಗಳನ್ನು ರೂಪಿಸಬೇಕಾಗಿದೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಇದು ಸಾಧ್ಯವಾಗಲಿ. ಅನುತ್ಪಾದಿತ ಕೇಂದ್ರಗಳೆಂದು ಉನ್ನತ ಶಿಕ್ಷಣವನ್ನು ಕಡೆಗಣಿಸುವ ಸರ್ಕಾರದ ನಿಲುವು ಅವೈಜ್ಞಾನಿಕವಾದದ್ದು. ವಿಚಾರ ಕ್ರಾಂತಿಗೆ ವಿಶ್ವ ವಿದ್ಯಾಲಯಗಳು ಮುಕ್ತ ವೇದಿಕೆಗಳಾಗಬಹುದೆನ್ನುವ ಅತಂಕ ಬಹುರಾಷ್ಟ್ರೀಯ ಕಂಪನಿಗಳಿಗೆ ಇದ್ದೇ ಇದೆ. ಇದು ಸತ್ಯವೂ ಕೂಡ. ಆದರೆ ಭಾರತ ಹಳ್ಳಿಗಳ ದೇಶ. 'ಗ್ರಾಮಕಲ್ಪನೆ'ಯನ್ನು ಮರೆತು 'ಜಾಗತಿಕಗ್ರಾಮ'ದ ಕಡೆ ವಾಲುವ ಮುನ್ನ ಇಲ್ಲಿರುವ 'ಖಾಲಿಕೈ'ಗಳ ಕಡೆ ಗಮನವಿದ್ದಲ್ಲಿ ಯುವಜನಾಂಗ ಭಯೋತ್ಪಾದನೆ ಕಡೆ ಹರಿದಾಡುವ ಪ್ರಮೇಯವಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರವು ಶಿಕ್ಷಣ ನೀತಿಯನ್ನು ರೂಪಿಸುವುದು ಅಗತ್ಯವಾಗಿದೆ.

*ಪರಾಮರ್ಶನ ಗ್ರಂಥ : ಶತಮಾನದ ಅಂಚಿನಲ್ಲಿ ಶಿಕ್ಷಣ :* ಕೆ. ಕೆ. ಥೇಕೆಡತ್ : ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು

**ಡಾ|| ವೆಂಕಟಗಿರಿ ದಳವಾಯಿ**
ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ, ಬಿ. ವಿ. ವಿ. ಸಂಘ, ಬಾಗಲಕೋಟೆ

# ಸಂಸ್ಕೃತ ಮತ್ತು ಅದರ ಪ್ರಸ್ತುತತೆ

**ಸಂ**ಸ್ಕೃತದ ಅವಶ್ಯಕತೆಯ ಬಗ್ಗೆ ಇನ್ನೂ ಮಾತನಾಡುವವರಿದ್ದಾರೆ. ಅದು ಅನಾವಶ್ಯಕವೆಂದು ಕಂಡ ಕಾರುವವರೂ ಇದ್ದಾರೆ. ಒಂದು ಭಾಷೆಯ ಪ್ರಸ್ತುತತೆಯನ್ನು ಕಾಲ ನಿರ್ಧರಿಸುತ್ತದೆ. ಆ ಕಾಲಘಟ್ಟದಲ್ಲಿ ಆಗಿಹೋದ ಜನತೆ ನಿರ್ಧರಿಸುತ್ತದೆ. ಆಗ ಉಂಟಾದ ಸಾಹಿತ್ಯ, ಸಂಸ್ಕೃತಿಗಳ ಸಾರ್ವಕಾಲಿಕತೆ ಆ ಭಾಷೆಯನ್ನು ಜೀವಂತವಾಗಿಡುತ್ತವೆ. ಈ ಹಿನ್ನೆಲೆಯಲ್ಲಿ ಸಂಸ್ಕೃತದ ಪ್ರಸ್ತುತತೆಯನ್ನು ಪರಾಂಬರಿಸುವ ಅಗತ್ಯವಿದೆ. ಸಂಸ್ಕೃತವು ಇಂಗ್ಲಿಷ್, ಹಿಂದಿಯೂ ಸೇರಿದಂತೆ ಇಂಡೋ - ಯೂರೋಪಿಯನ್ ಭಾಷಾ ವರ್ಗಕ್ಕೆ ಸೇರಿದ್ದಾಗಿದೆ. ಅಂದರೆ ಈ ಭಾಷೆಗಳಲ್ಲಿ ಅಂತ ಸ್ಸಂಬಂಧವಿದೆ. ಅನೇಕ ಪದಗಳು, ಉಚ್ಚಾರಗಳು ಸಾಮ್ಯತೆಯನ್ನು ಹೇಳುತ್ತವೆ. ಒಂದಕ್ಕೊಂದು ಪ್ರೇರಕವಾಗಿವೆ. ಹಾಗಾದರೆ ಉಳಿದ ಭಾಷೆಗಳು ಪ್ರಬುದ್ಧಮಾನವಾಗಿ ಬೆಳೆದಿರುವಾಗ, ಒಂದೇ ಕುಟುಂಬದ ದಾಯಾದಿ ಭಾಷೆಯೊಂದು ಪ್ರಸ್ತುತತೆಯನ್ನು ಕಳೆದುಕೊಂಡುದು ಹೇಗೆ?

> ***ಕಾಲಗರ್ಭದಲ್ಲಿ ಬೆಳೆದು ನಿಂತ ಬಹುಸಂಖ್ಯಾತರ ಮೂಲ ಸಂಸ್ಕೃತಿಯನ್ನು ಉಪೇಕ್ಷಿಸಿ ಒಂದು ಕಾಲದ ಒಂದು ವರ್ಗದ ಜನರ ನಡೆನುಡಿಯನ್ನೇ ರಾಷ್ಟ್ರೀಯತೆ ಎಂದು ಬಿಂಬಿಸುವುದು ಮತ್ತು ಸಂಸ್ಕೃತವನ್ನು ರಾಷ್ಟ್ರಭಾಷೆ ಎಂದು ಬಲವಂತ ಹೇರುವುದು ಅಪ್ರಸ್ತುತವಾಗುತ್ತದೆ. ಇಂದಿನ ನಮ್ಮ ಮುಖ್ಯ ಆದ್ಯತೆ ಕನ್ನಡವನ್ನು ಯಾವುದಕ್ಕೂ ಚ್ಯುತಿ ಬಾರದಂತೆ ಬೆಳೆಸುವುದು.***

ರೀತಿ ರಿವಾಜು ಅವರಿಗೆ ಗೌಣವೆನಿಸಿದೆ. 'ಬ್ರಾಹ್ಮಣರೇ ಭೂಲೋಕದ ಸುರರು' ಎಂದು ಕ್ಷತ್ರಿಯರು, 'ರಾಜಾ ಪ್ರತ್ಯಕ್ಷ ದೇವತಾ' ಎಂದು ಬ್ರಾಹ್ಮಣರು ಪರಸ್ಪರ ಹೊಗಳಿಕೊಂಡು ಬಹುಸಂಖ್ಯಾತರನ್ನು ಪ್ರಾಣಿಗಳಂತೆ ಕಂಡಿದ್ದಾರೆ. ಇದಕ್ಕೆ ಶಂಬೂಕ ವಧೆಯ ಪ್ರಕರಣ ಮತ್ತು ಏಕಲವ್ಯ ಪ್ರಕರಣಗಳನ್ನು ಉದಾಹರಿಸಬಹುದು.

ಸಂಸ್ಕೃತ ನಾಟಕಗಳಲ್ಲಿ ಉಚ್ಚವರ್ಣದ ಪಾತ್ರಗಳೆಲ್ಲ ಸಂಸ್ಕೃತದಲ್ಲಿ ಸಂಭಾಷಿಸಿದರೆ, ಕೆಳವರ್ಣದ ಪಾತ್ರಗಳೂ, ಸ್ತ್ರೀಯರೂ ಪ್ರಾಕೃತದಲ್ಲಿ ಮಾತಾಡಿಕೊಳ್ಳುತ್ತಾರೆ. ಸ್ತ್ರೀಯರು ಯಾವುದೇ ವರ್ಣಕ್ಕೆ ಸೇರಿರಲಿ, ನಾಯಕಿಯಿರಲಿ, ದಾಸಿಯಿರಲಿ ಎಲ್ಲರೂ ಪ್ರಾಕೃತದಲ್ಲೇ ಮಾತಾಡುತ್ತಿದ್ದರು. ಸಂಸ್ಕೃತವನ್ನು ಬ್ರಾಹ್ಮಣ್ಯಕ್ಕೆ ಸಮೀಕರಿಸಿ ಶ್ರೇಷ್ಠತೆಯನ್ನ ಅರೋಪಿಸಿದ ಪರಿಣಾಮವಾಗಿಯೆ ಆ ಭಾಷೆ ಅಧೋಗತಿಯನ್ನು ಕಂಡಿತು. ಇಂತಹ ಅಸಮಾನತೆಯ ಆಧಾರದ ಮೇಲೆ ರೂಪುಗೊಂಡಿರುವ

ಸಂಸ್ಕೃತ ಆರ್ಯಾವರ್ತದಲ್ಲಿ ಪ್ರಚಲಿತವಿತ್ತು. ಎಂದರೆ ಆಫ್‌ಘಾನಿಸ್ತಾನ, ಇರಾನ್, ಮಯನ್ಮಾರ್‌ಗಳನ್ನೂ ಒಳಗೊಂಡ ಮಧ್ಯಭಾರತ. ದಕ್ಷಿಣ ಭಾರತಕ್ಕೆ ತನ್ನದೇ ಆದ ಸಂಸ್ಕೃತಿ ಮತ್ತು ಭಾಷಾಮೂಲಗಳಿದ್ದುವು. ಸಂಸ್ಕೃತ ಎಂದೂ ಮೂಲನಿವಾಸಿಗಳ ಭಾಷೆಯಾಗಿರಲಿಲ್ಲ. ಅದು ಶಿಷ್ಟರ, ಸಂಪ್ರದಾಯಸ್ಥರ ಭಾಷೆಯಾಗಿತ್ತು. ಹೀಗಾಗಿ ದೇಶವ್ಯಾಪಿ ಆಡುಭಾಷೆಯಾಗಲಿಲ್ಲ. ವರ್ಣಾಶ್ರಮವೇ ಅಡಿಪಾಯವಾದ ಸನಾತನ ಧರ್ಮ ಬಹುಸಂಖ್ಯಾತ ಶೂದ್ರರಿಗೆ ಅಕ್ಷರ ಜ್ಞಾನವನ್ನು ನಿರಾಕರಿಸಿತು. ಸಂಸ್ಕೃತವನ್ನು ದೇವಭಾಷೆಯೆಂದು ಕರೆದು ಗ್ರಂಥಗಳನ್ನು ರಚಿಸಿದರು. ಓದುವವರು ಬರೆಯುವವರು ಒಂದು ಅಲ್ಪಸಂಖ್ಯಾತ ವರ್ಗವೇ ಆಗಿ, ಭಾಷೆ ಗ್ರಂಥಸ್ಥವಾಗಿ, ಬೆಳವಣಿಗೆಗೆ ತೊಡಕಾಯಿತು. ಪಟ್ಟಭದ್ರರ ಮಡಿವಂತಿಕೆಯಿಂದ ಭಾಷೆಯೂ ಮಡಿಯುವಂತಾಯಿತು.

ಬುದ್ಧಯುಗದಲ್ಲಿ ಸಮಾಜದ ಎಲ್ಲ ವರ್ಗದವರಿಗೂ ಅಕ್ಷರಜ್ಞಾನದ ಅವಕಾಶ ಕಲ್ಪಿಸಿ ಅವರವರ ಪ್ರಾಂತೀಯ ಭಾಷೆಗಳನ್ನು ಪ್ರೋತ್ಸಾಹಿಸಲಾಯಿತು. ಬುದ್ಧಯುಗದ ಅವಸಾನದ ನಂತರ ಮತ್ತೆ ವೈದಿಕ ಧರ್ಮ ವರ್ಣಾಶ್ರಮಕ್ಕೆ ಅಂಟಿಕೊಂಡಿತು. ಬಹುಸಂಖ್ಯಾತರು ಅನಕ್ಷರಸ್ಥರಾದರು. ಹದಿನೇಳು-ಹದಿನೆಂಟನೆಯ ಶತಮಾನದಿಂದೀಚೆಗೆ ಅನೇಕ ಜ್ಞಾನಶಾಖೆಗಳು ಚಿಗುರೊಡೆದಿವೆ. ಆಧುನಿಕ ವಿಜ್ಞಾನಕ್ಕೆ ಬೇಕಾದ ಶಬ್ದಕೋಶ ಸಂಸ್ಕೃತದಲ್ಲಿ ಸಿಕ್ಕುವುದು ದುರ್ಲಭ. ಅದು ಕಾಲದ ಜತೆ,ಜನಜೀವನದ ಜತೆ, ಹುಟ್ಟುಪಡೆಯಬೇಕಾದ ಅಂಶ. ಇತಿಹಾಸದಲ್ಲಿ ರಾಜಕಾರಣದಿಂದ ಅರಳಿದ ಇಂಗ್ಲಿಷ್ ಅಂಥ ಸ್ಥಾನವನ್ನು ಆಕ್ರಮಿಸಿಕೊಂಡು ಇಂದು ವಿಶ್ವವ್ಯಾಪಿಯಾಗಿದೆ.

ಸಂಸ್ಕೃತ ಕಲಿಕೆಯ ವಾತಾವರಣವೇ ವೇಷಭೂಷಣಗಳನ್ನೂ ಒಳಗೊಂಡಂತೆ ಒಂದು ಧರ್ಮವನ್ನು ಪ್ರತಿಧ್ವನಿಸುತ್ತದೆ ಎಂದು ಬರಗೂರು ರಾಮಚಂದ್ರಪ್ಪನವರು ಹೇಳುತ್ತಾರೆ (ಕನ್ನಡ ಪ್ರಭ - ದೀಪಾವಳಿ ಸಂಚಿಕೆ ೧೯೯೯). ಇದನ್ನು ಸಂಪೂರ್ಣ ಒಪ್ಪುವುದು ಕಷ್ಟವಾಗುತ್ತದೆ. ಯಾಕೆಂದರೆ ಹಿಂದಿನ ಗುರುಕುಲಗಳು ಮರುಕಳಿಸಲು ಈಗ ಸಾಧ್ಯವಾಗಲಾರದು. ಮರುಕಳಿಸಿದರೂ ಕಲಿಕೆಗೆ ಒಂದೇ ಜಾತಿಯ ವಿದ್ಯಾರ್ಥಿಗಳೇ ಹೋಗಲಾರರು. ಹಾಗೊಮ್ಮೆ ಹೋದರೂ ಅದು ಶ್ರಾದ್ಧದ ಗದ್ದಲದಂತೆ ತರಂಗಗಳನ್ನೆಬ್ಬಿಸಿ ಮತ್ತೆ ಗಾಢಮೌನಕ್ಕೆ ಹಿಂತಿರುಗಬೇಕಾದೀತಷ್ಟೆ. ಮತ್ತೂರು ಎಂಬ ಗ್ರಾಮವನ್ನು ಆಸಕ್ತರೊಂದಷ್ಟು ಜನ ಸಂಸ್ಕೃತ ಗ್ರಾಮವನ್ನಾಗಿ ಮಾಡುತ್ತೇವೆಂದು ಪ್ರಯೋಗ ಮಾಡಿದರು. ಬೀಡಿ ಮಾರುವ ಬುಡಾನ್‌ಸಾಬಿ, ರೈತನೊಬ್ಬನಿಗೆ ನಿನಗೆಷ್ಟು ಬೀಡಿ ಬೇಕು (ಸಂಸ್ಕೃತದಲ್ಲಿ) ಎಂದು ಕೇಳುವುದನ್ನು ಟಿ.ವಿ.ಗಾಗಿ ಚಿತ್ರಿಸಿಕೊಳ್ಳಲಾಯಿತು. ಪರಿಣಾಮವೇನಾಯಿತು?

ಭಾರತೀಯ ಪ್ರಾಚೀನ ಸಾಹಿತ್ಯವೆಲ್ಲವೂ ಒಂದಲ್ಲ ಒಂದು ಧರ್ಮದಿಂದ ಪ್ರಭಾವಿತವಾದದ್ದು. ಪಾಲಿಯ ಸಾಹಿತ್ಯಕ್ಕೆ ಬೌದ್ಧಧರ್ಮವೂ, ಅರ್ಧಮಾಗಧಿ ಪ್ರಾಕೃತ ಸಾಹಿತ್ಯಕ್ಕೆ ಜೈನಧರ್ಮವೂ ಮೂಲ ಪ್ರೇರಣೆಯಾಗಿರುವಂತೆ ಸಂಸ್ಕೃತ ಸಾಹಿತ್ಯಕ್ಕೆ ಮೂಲತಃ ವೈದಿಕ ಬ್ರಾಹ್ಮಣ ಧರ್ಮವು ಪ್ರೇರಣೆ ನೀಡಿದೆ. 'ಸಂಸ್ಕೃತದಲ್ಲಿಯ ಪ್ರಧಾನ ಸಾಹಿತ್ಯವಾಹಿನಿಯು ಶ್ರುತಿ - ಸ್ಮೃತಿ - ಪುರಾಣಗಳಿಂದ ಪ್ರಪಂಚಿತವಾದ ವರ್ಣಾಶ್ರಮಧರ್ಮದ ಅಭಿವ್ಯಕ್ತಿ ರೂಪವೇ ಆಗಿದೆ' ಎಂದು ಬಿ. ಎನ್. ಸುಮಿತ್ರಾಬಾಯಿಯವರು ಹೇಳುತ್ತಾರೆ.

ಸಂಸ್ಕೃತ ಸಾಹಿತ್ಯದ ಮೇರು ಕೃತಿಗಳಾದ ರಾಮಾಯಣ, ಮಹಾಭಾರತಗಳು ಎರಡು ರಾಜವಂಶಗಳ ಮುಖ್ಯವಾಹಿನಿಯಲ್ಲಿ ಬರುವ ಅನೇಕ ತಲೆಮಾರಿನ ಕಥೆಗಳನ್ನು ಹೇಳುತ್ತವೆ. ಅವೆಲ್ಲವೂ ವರ್ಣಾಶ್ರಮ ಪದ್ಧತಿಗೆ ಬದ್ಧವಾಗಿಯೆ ರಚಿತವಾಗಿವೆ. ಜನಸಾಮಾನ್ಯರ ಬದುಕು ಸಾಹಿತ್ಯದ ಕೆಲವು ಆಶಯಗಳು ಇವತ್ತಿನ ಸಮಾಜದ ಮೌಲ್ಯಗಳಾಗಿ ಬಿಂಬಿತವಾಗುತ್ತಿರುವುದು ಈ ದೇಶದ ದುರಂತವೆನ್ನದೆ ಬೇರೆ ದಾರಿ ಇಲ್ಲ.

ಇಂದಿಗೂ ಕನ್ನಡದಲ್ಲಿ ವೇದಾಂತವನ್ನು ಹೇಳಬಾರದೆಂದು ಹೇಳುವ ಮಡಿವಂತರಿದ್ದಾರೆಂದು ಬನ್ನಂಜೆಯವರು ಒಂದೆಡೆ ಹೇಳುತ್ತಾರೆ. ಇಂಥವರು ಸಂಸ್ಕೃತದೊಂದಿಗೆ ವೇದಾಂತವನ್ನು ಸಾಯಿಸಿಬಿಡಬಹುದು. ವೈದಿಕ ಧರ್ಮ ಜಾತಿಪದ್ಧತಿಯನ್ನು ಆಧರಿಸಿದಂತೆಯೆ, ಸಂಸ್ಕೃತ ಸಾಹಿತ್ಯವೂ ಮೇಲು-ಕೀಳು ಪ್ರಜ್ಞೆಯಿಂದ ತುಂಬಿ ಹೋಗಿದೆ. ಡಾ|| ಬಿ. ಎನ್. ಸುಮಿತ್ರಾಬಾಯಿ ಹೇಳುವಂತೆ ಭಟ್ಟನಾರಾಯಣನ 'ವೇಣೀ ಸಂಹಾರ' ನಾಟಕದ ಈ ತುಣುಕು ಎಷ್ಟು ಹಾಸ್ಯಾಸ್ಪದವಾಗಿದೆ ನೋಡಿ: ದ್ರೋಣನ ಸಂಹಾರವಾದ ಮೇಲೆ ಅಶ್ವತ್ಥಾಮ ಮತ್ತು ಕರ್ಣರಿಗೆ ವಾಗ್ವಾದ ನಡೆದು ಪರಿಸ್ಥಿತಿ ವಿಕೋಪಕ್ಕೆ ಹೋಗುತ್ತದೆ. ಅಶ್ವತ್ಥಾಮನು ಕರ್ಣನಿಗೆ 'ನಿನ್ನ ನೆಲಕ್ಕುರುಳಿಸಿ ತಲೆಯ ಮೇಲೆ ಎಡಗಾಲನ್ನಿಡುವೆ' ಎಂದು ಹೇಳುತ್ತಾನೆ. ಅದಕ್ಕೆ ಕರ್ಣನು 'ಜಾತಿಯಿಂದಾಗಿ ನಿನ್ನನ್ನು ಕೊಲ್ಲಲು ಸಾಧ್ಯವಿಲ್ಲ, ಆದರೆ ನನ್ನನ್ನು ಮೆಟ್ಟಲು ಎತ್ತಿರುವ ಈ ಕಾಲನ್ನು ಕಡಿದುರುಳಿಸುವೆ' ಎನ್ನುತ್ತಾನೆ. ಅದಕ್ಕೆ ಅಶ್ವತ್ಥಾಮನ ಉತ್ತರವೂ ಕುತೂಹಲಕರವಾಗಿದೆ: 'ಜಾತಿಯಿಂದಾಗಿ ನಾನು ಅವಧ್ಯನಾಗಿದ್ದರೆ ಇದೋ ಜಾತಿಯನ್ನು ಬಿಟ್ಟಿದ್ದೇನೆ' ಎಂದು ತನ್ನ ಜನಿವಾರವನ್ನು ಕಿತ್ತುಹಾಕಿ ಯುದ್ಧಕ್ಕೆ ಆಹ್ವಾನಿಸುತ್ತಾನೆ.

ಯುದ್ಧ ಮತ್ತು ಪ್ರೀತಿ ಎರಡೂ ವರ್ಣಾಶ್ರಮವನ್ನು ಆಶ್ರಯಿಸಿದ್ದವು. ಅಷ್ಟೇ ಅಲ್ಲ, ವರ್ಣಾಶ್ರಮ ಧರ್ಮ ಅರಿಷಡ್ವರ್ಗಗಳನ್ನು ತನ್ನ ಹಿಡಿತದಲ್ಲಿಟ್ಟಿತ್ತು! ಹಾಗೆಯೆ ಸಂಸ್ಕೃತವೆಂಬ ಭಾಷೆಯೂ ಬ್ರಾಹ್ಮಣರ ಭಾಷೆಯಾಗಿ ಗರ್ಭಗುಡಿ ಸೇರಿತು. ಹೀಗೆ ಸಂಪರ್ಕ-ಸಾಧನವಾಗ ಬೇಕಾದ ಭಾಷೆ ಧರ್ಮದ ಹೆಸರಿನಲ್ಲಿ

(೪೬ನೇ ಪುಟಕ್ಕೆ)

ಮೂಡ್ನಾಕೂಡು ಚಿನ್ನಸ್ವಾಮಿ

# ಸೇಡಿಯಾಪು ಕೃಷ್ಣಭಟ್ಟರ ಸೃಜನಶೀಲ ಸಾಹಿತ್ಯ

*ದಿನಾಂಕ ೩-೨-೨೦೦೨ರಂದು 'ಸೇಡಿಯಾಪು ಕೃಷ್ಣಭಟ್ಟರ ಜನ್ಮಶತಮಾನೋತ್ಸವ'ದ ಅಂಗವಾಗಿ ಮೈಸೂರಿನಲ್ಲಿ ಏರ್ಪಾಟಾಗಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧದ ಸಂಗ್ರಹರೂಪ.*

**ಪ್ರೊ|| ಸಿ. ನಾಗಣ್ಣ**



**ಪ**ಶ್ಚಿಮ ಕರಾವಳಿಯ ಸಾಹಿತಿಗಳ ಸಾಹಿತ್ಯಕ ಕೊಡುಗೆಯನ್ನು ನೆನೆಯುತ್ತಾ ಶ್ರೀ. ಎಂ. ರಾಮಚಂದ್ರ ಅವರು ಹೀಗೆ ಹೇಳುತ್ತಾರೆ (ರಾಮಚಂದ್ರ ಅವರು ಸೇಡಿಯಾಪು ಅವರ ನಿಕಟ ಶಿಷ್ಯರಲ್ಲೊಬ್ಬರು ಮತ್ತು ಕಡೆಗಾಲದವರೆಗೆ ಅವರ ಒಡನಾಟವನ್ನಿರಿಸಿಕೊಂಡಿದ್ದವರು):

''ಪಶ್ಚಿಮ ಸಮುದ್ರದ ತಡಿಯಲ್ಲಿ, ಸಹ್ಯಾದ್ರಿಯ ಮಡಿಲಲ್ಲಿ ಮೆಯ್ ಚಾಚಿರುವ ನಮ್ಮೀ ಕರೆನಾಡು ಬಹು ಸುಂದರವಾದುದು. ಈ ನಾಡವರು ಭಾಗ್ಯಶಾಲಿಗಳು : ಪ್ರಾಕೃತಿಕವಾಗಿ, ಸಾಹಿತ್ಯಕವಾಗಿ, ದಿವಂಗತ ಪಂಜೆಯವರು, ಮುಳಿಯದವರು, ಪೈಯವರು, ಶ್ರೀಯುತ ಕಾರಂತರು, ಕಡೆಂಗೋಡ್ಲುರವರು, ಸೇಡಿಯಾಪುರವರು - ಇವರು ಈ ಊರವರು, ನಮ್ಮವರು!''

ರಾಮಚಂದ್ರ ಅವರು ಇಲ್ಲಿ ಹೆಸರಿಸಿರುವವರೆಲ್ಲ ಕನ್ನಡ ಸಾಹಿತ್ಯವನ್ನು ಉಜ್ವಲಗೊಳಿಸಿರುವವರೇ ಆಗಿದ್ದಾರೆ. ಸೃಷ್ಟಿಯ ವಿಪುಲತೆಯಲ್ಲಿ ಮತ್ತು ವಿಸ್ತಾರದಲ್ಲಿ ಕಾರಂತರು ಈ ಗುಂಪಿನಲ್ಲಿ ಎದ್ದು ಕಾಣುತ್ತಾರೆ. ಆದರೆ ಪಂಜೆಯವರು, ಪೈಗಳು, ಮುಳಿಯ ತಿಮ್ಮಪ್ಪಯ್ಯನವರು, ಕಡೆಂಗೋಡ್ಲು ಹಾಗೂ ಸೇಡಿಯಾಪು ಅವರು ಬರೆದ ಸಾಹಿತ್ಯದ ಗಾತ್ರ ದೊಡ್ಡದಲ್ಲದಿದ್ದರೂ ಅದರ ಮೌಲ್ಯ ಮಾತ್ರ ಮಹತ್ವದ್ದೆಂದು ಪುನರುಚ್ಚರಿಸುವ ಅಗತ್ಯವಿಲ್ಲ. ತಾವೇಕೆ ಹೆಚ್ಚು ಬರೆಯಲಿಲ್ಲ ಎಂಬ ಪ್ರಶ್ನೆಗೆ ಉತ್ತರವೊ ಎಂಬಂತೆ ಸೇಡಿಯಾಪು ಕೃಷ್ಣಭಟ್ಟರು ಪದ್ಯರೂಪದಲ್ಲಿ ಹೇಳಿರುವ ಮಾತುಗಳು ಚಿರಪರಿಚಿತವಾಗಿವೆ, ಅರ್ಥಗರ್ಭಿತವಾಗಿವೆ:

*''ಹೆಚ್ಚು ಬರೆದವನಲ್ಲ*
*ಮಚ್ಚರಿಸಿ ಬರೆದಿಲ್ಲ*
*ಮೆಚ್ಚಿಸಲು ಬರೆಯುವಭ್ಯಾಸವಿಲ್ಲ*
*ಇಚ್ಛೆ ಎದೆಯನು ಕುಲುಕಿ*
*ಎಚ್ಚರಿಸೆ, ಕಣ್ಣೆಮಯ್*
*ಎಚ್ಚುವಂದದಿ ತಿದ್ದಿ ತೀಡಿ ಬರೆವೆ.''*

ಇದು ನಿಜವಾಗಿ ದಿಟ್ಟತನದ ಮಾತು.

''ಗಿಳಿವಿಂಡು'' ಕವಿತಾ ಸಂಕಲನಕ್ಕೆ ಬರೆದ ಮೊದಲ ಮಾತಿನಲ್ಲಿ ಗೋವಿಂದ ಪೈ ಅವರು ವಿಪುಲವಾಗಿ ಬರೆಯುವುದು ತಮ್ಮ ಉದ್ದೇಶವಲ್ಲ ಎಂಬ ಅಂಶವನ್ನು ಪರೋಕ್ಷವಾಗಿ ತಿಳಿಸಿದ್ದಾರೆ.

''ಈ ಕವಿತೆಗಳು ಕಳೆದ ಮೂವತ್ತೇನೋ ವರ್ಷಗಳಲ್ಲಿ ಅಷ್ಟಮಿಗೊಂದು ಶಿವರಾತ್ರಿಗೊಂದು ಎಂಬಂತೆ ರಚಿತವಾದುವು... ಆಗಾಗ್ಗೆ ಕವಿ ತಂದ ದುಃಖಗಳಲ್ಲಿ ವಾಣಿಯ ಕರೆ ಕೇಳಿಸದೆ ನಡುನಡುವೆ ಎಷ್ಟೋ ವರ್ಷಗಳಾಗಿವೆ.''

ಇದೇ ವರ್ಗಕ್ಕೆ ಸೇರಿದವರು ಕಡೆಂಗೋಡ್ಲು ಶಂಕರ ಭಟ್ಟರು. ''ಕಡೆಂಗೋಡ್ಲು ಶಂಕರಭಟ್ಟರ ಚೇತನ ಮುಖ್ಯವಾಗಿ ಕವಿ ಚೇತನ - ಆದರೆ ಸ್ವಾತಂತ್ರ್ಯಪ್ರಿಯ ಕವಿ ಚೇತನ'' ಎನ್ನುತ್ತಾರೆ ಎಂ. ಕೇಶವಭಟ್ಟರು. ಕೇಶವಭಟ್ಟರು ''ಪೆಱಜೇ ವುದೇಂ ಪೆಱಜ ಮಾಡುವುದೇಂ ಪೆಱಜೆಂದಪ್ಪುದೇಂ?'' ಎಂಬ ಪಂಪನ ಮಾತನ್ನು ನಿಜ ಮಾಡುವ ರೀತಿಯಲ್ಲಿ ಕರಾವಳಿಯ ಕವಿಗಳು ಹಿತಮಿತವಾಗಿ ಬರೆದರೇ ಹೊರತು ತರಾತುರಿಯಲ್ಲಿ ಕಾವ್ಯವರ್ಷವನ್ನು ಸುರಿಸುವ ಒತ್ತಡಕ್ಕೊಳಗಾಗಲಿಲ್ಲ ಎಂದು ತಿಳಿಸುತ್ತಾರೆ.

ಅಂತೆಯೇ ದಿವಂಗತ ಸೇಡಿಯಾಪು ಕೃಷ್ಣಭಟ್ಟರು ಹತ್ತು ಕಟ್ಟುವುದಕ್ಕೆ ಬದಲು ಒಂದು ಮುತ್ತು ಕಟ್ಟಿದವರು. ಛಂದಸ್ಸು - ವ್ಯಾಕರಣ ಪ್ರಕಾರಕ್ಕೆ ಅವರು ನೀಡಿರುವ ಕೊಡುಗೆಯನ್ನು ಅನೇಕರು ಬಲ್ಲರು. ಆದರೆ ಅವರ ಕಾವ್ಯದ ಸ್ವಾದವನ್ನು ಬಹಳ ಬಲ್ಲಂತೆ ತೋರುವುದಿಲ್ಲ. ಸೃಜನಶೀಲ ಬರವಣಿಗೆಯ ಪ್ರಕಾರದಲ್ಲಿ ಸೇಡಿಯಾಪುರವರು ನಮಗೆ ನೀಡಿರುವುದು ಎರಡು ಕೃತಿಗಳನ್ನು ಮಾತ್ರ :

**ಚಂದ್ರಖಂಡ ಮತ್ತು ಕೆಲವು ಸಣ್ಣಕಾವ್ಯಗಳು** ಎಂಬ ಸಂಯುಕ್ತ ಕವಿತಾ ಸಂಕಲನ ಹಾಗೂ **ಪಳಮೆಗಳು** ಎಂಬ ಸಣ್ಣಕಥೆಗಳ ಸಂಕಲನ. ಸಂಕ್ಷಿಪ್ತವಾಗಿ ಈ ಎರಡು ಗ್ರಂಥಗಳನ್ನು ಪರಿಚಯಿಸುವುದು ಪ್ರಸ್ತುತ ಲೇಖನದ ಉದ್ದೇಶವಾಗಿದೆಯಾದರೂ ಸ್ಥಳಾಭಾವದ ಕಾರಣ ಅವರ ಕಾವ್ಯದ ಚರ್ಚೆಗೆ ಮಾತ್ರ ಸೀಮಿತಗೊಳಿಸಿಕೊಳ್ಳುತ್ತೇನೆ.

**ಚಂದ್ರಖಂಡ**ದಲ್ಲಿ ಒಟ್ಟು ೬೨ ಪದ್ಯಗಳಿವೆ - ಮೂರು ಅನುಬಂಧಿತ ಭಾಗಗಳೂ ಸೇರಿ. ಅನುಬಂಧ ಒಂದನ್ನು ಸೇಡಿಯಾಪು ಅವರು ''ವೃದ್ಧ ಉವಾಚ'' ಎಂದು ಕರೆದಿದ್ದಾರೆ. ಹಾಗೆ ಕರೆಯಲು ಕಾರಣ ಇವು ಅವರ ಇಳಿ ವಯಸ್ಸಿನಲ್ಲಿ ರಚಿತವಾದವು (ಕೃಷ್ಣಭಟ್ಟರದು ನಿಡಿದಾದ ಬಾಳು: ೧೯೦೨ರಲ್ಲಿ ಜನನ ಹಾಗೂ ಅವರು ದೇಹತ್ಯಾಗ ಮಾಡಿದುದು ೧೯೯೬ರಲ್ಲಿ). ಚುಟುಕುಗಳ ಮಾದರಿಯ ಚಿಕ್ಕ ಚಿಕ್ಕ ಪದ್ಯಗಳ ಸರಮಾಲೆ ಇಲ್ಲಿದೆ. ಒಂದೆರಡು ಉದಾಹರಣೆಗಳನ್ನು ಗಮನಿಸಬಹುದು.

*೧. ''ಬೆಳೆಯಿಸುವರುಣ್ಣುವುದು ನುಚ್ಚನುರಿ ಧಾನ್ಯ;*
*ಅಡುಗೆ ಮಾಡಿದ ಗೃಹಿಣಿಗೇ ತಂಗುಳನ್ನ!''*

*೨. ''ನೀನು ಸಣ್ಣವನಾದರೇನು? ಕುಗ್ಗದಿರು;*
*ನೀನು ಸಣ್ಣನವನಲ್ಲದಿರಲು ಹಿಗ್ಗದಿರು;*
*ಕೊಡ ಚೆಂಬು ಲೋಟಗಳ ಹಿರಿಕಿರಿಯ ಮಾನ*
*ಬರಿಯ ಗಾತ್ರದಲಿ, ಉಪಯುಕ್ತತೆ ಸಮಾನ.''*

ಭೋಗ ಸಂಸ್ಕೃತಿ (ಈಗ ಉಪಭೋಗ ಸಂಸ್ಕೃತಿ)ಯ ಅತಿರೇಕವನ್ನು ಕಂಡು ಇದು ರೀತಿಯಲ್ಲವೆಂದು ಕವಿ ಮರುಗುತ್ತಾರೆ: ''ಇಂದ್ರಿಯಾರಾಧನೆಯ ಸುಖವೆಂದು ಬೆಮೆಗೊಂಡ/ಮಂದಿ ನಾನಾ ಭೋಗ ಸಾಧನವ ಮಿತಿ ಮೀರಿ / ಸಂಗ್ರಹಿಸಿ ಭೋಗಿಸುತ್ತಿದೆಯಾದರೊಂದಿಷ್ಟು / ನೆಮ್ಮದಿಯ ಕಾಣದೆ ಕನಲ್ದು ಕಳವಳಿಸುತಿದೆ.''

ಸೇಡಿಯಾಪು ಕೃಷ್ಣಭಟ್ಟರು ಮೂಲತಃ ಅಕ್ಷರ ಆರಾಧಕ. ಹಾಗಾಗಿ, ೧೯೨೬ರಷ್ಟು ಹಿಂದೆಯೇ ಬರೆದ ಒಂದು ಪದ್ಯದಲ್ಲಿ ವಿದ್ಯಾಧಿದೇವತೆಯನ್ನು ಅವರು ಪ್ರಾರ್ಥಿಸಿದ್ದು ಹೀಗೆ :

''ಅಮ್ಮ ನಿನ್ನ ಪದವ ನೆನೆದು ಲೆಕ್ಕಣಿಕೆಯ ಕಾಲ ಹಿಡಿದು
*ಕಮ್ಮನೆನ್ನ ನುಡಿಯ ಮಾಡೆನುತ್ತ ಬೇಡಿ ಬರೆಯುವೆ*
*ಮುನ್ನ ಎದೆಯ ಹಾಲನುಣಿಸಿ ಎನ್ನ ಬೆರಳ ಹಿಡಿದು ಕುಣಿಸಿ*
*ಬೆನ್ನ ತಟ್ಟಿ ಮುದ್ದನಿತ್ತು ನುಡಿಸಿದಂತೆ ನಡೆಯಿಸು.''*

**ಚಂದ್ರಖಂಡ**ದ ಭಾಗದಲ್ಲಿ ''ಜೀವವೃಕ್ಷ'', ''ಮೋಹ ಲಹರಿ'', ''ಲೋಕದೀಪ'', ''ಬೆಳಗಿನ ತಂಗಾಳಿ'' ಮುಂತಾದ ಕವನಗಳು ಕವಿಯ ಕಾಣ್ಕೆಯನ್ನು ಪ್ರತಿಫಲಿಸುವ ಉತ್ಕೃಷ್ಟ ರಚನೆಗಳಾಗಿವೆ. ಜೀಮೂತವಾಹನನ ಜೀವನ ಚರಿತ್ರೆಯಿಂದ ಬಹಳ ಪ್ರಭಾವಿತರಾಗಿ ಅವನ ಬಗ್ಗೆ ಒಂದು ದೊಡ್ಡ ಕಾವ್ಯವನ್ನೇ ಬರೆಯಲು ಹೊರಟಿದ್ದರು ಸೇಡಿಯಾಪು ಕೃಷ್ಣಭಟ್ಟರು. ಆ ಸಾಹಸಕ್ಕೆ ಕೈಹಾಕುವಾಗ ಅವರಿಗಿನ್ನೂ ೧೫ ವರ್ಷದ ಹದಿಹರೆಯ. ಆ ಸ್ಫೂರ್ತಿಯ ಕಾವಿನಲ್ಲಿ ಅವರು ಸುಮಾರು ೫೦ ಪದ್ಯಗಳನ್ನು ರಚಿಸಿದರಾದರೂ ಅವರ ಬಳಿ ಉಳಿದುದು ಒಂದೇ ಒಂದು ಪದ್ಯ; ಉಳಿದವು ಎಲ್ಲಿ ಮಾಯವಾದವೊ ತಿಳಿಯದೆಂದು ಅವರೇ ಬರೆದುಕೊಂಡಿದ್ದಾರೆ. ತಮ್ಮ ತಾಕಿನ ಕವಿ ಮುದ್ದಣನನ್ನು ಕುರಿತ ಪದ್ಯವೊಂದರ ಭಾಗ ಹೀಗಿದೆ.

*''ಕರೆನಾಡಿನ ಸಿರಿಗನ್ನಡ ನುಡಿಯನು ನುಡಿವರಗಿಳಿಯೇ*
*ಹಳಗನ್ನಡಗೊಳ ತುಂಬಿದ ಹೊಸಗನ್ನಡದೊಸರೇ*
*ಉಡುಪಿಯ ಪುಣ್ಯದ ಮುರಲಿಯ ನುಡಿ ಹೊಮ್ಮಿದ ರಸರಂಧ್ರವೆ!*
*ತಲೆಬಾಗುವೆ ಕೊಂಡಾಡುವೆ, ಓವೋ ಮುದ್ದಣ್ಣಾ!''*

ತುಳುನಾಡಿನ ಸೊಬಗಿನ ವರ್ಣನೆಯನ್ನು ಮಾಡಿ ಪೂರಯಿಪರು ಈ ಕವಿ.

*''ಮುನ್ನೀರ ಮಡಿಲ ಹಸುಳೆ - ತುಳುನಾಡೆ*
*ಎನ್ನ ತಾಯ್, ತಂಗೆ, ಮಗಳೆ*
*ಕಂಡೆ ನೂರಾರ ನಾಡಾಡಿ - ನಾನಕ್ಕ*
*ಕಂಡಿಲ್ಲ ನಿನ್ನ ಸರಿ ಜೋಡಿ''. (''ತುಳುನಾಡ ಹಾಡು'')*

ಗೋವಿಂದ ಪೈಗಳೂ ಕೂಡ ಸ್ಫೂರ್ತಿಯಿಂದ ತಮ್ಮ ತಾಯ್ನಾಡಿನ ಹೆಮ್ಮೆಯನ್ನು ಎತ್ತರದ ದನಿಯಲ್ಲಿ ಹಾಡಿದರು :

*''ಭಾರ್ಗವನಂದು ಬಿಸುಡೆ ಕೊಡಲಿಯ*
*ನೀ ಕಡಲೊಡೆದೆಡೆಯಿಂ ಮೂಡಿ,*
*ಭಾರತ ಮಾತೆ ತೊಡೆಯೊಳೊಡಗೂಡಿಸೆ*
*ಸಹವೀಣೆಯಂ ತೀಡಿ –''*

ತುಳುನಾಡಿನ ಸೊಬಗಿನೈಸಿರಿಯನ್ನು ಕಡೆಂಗೋಡ್ಲು ಶಂಕರಭಟ್ಟರು ತಮ್ಮ ಮುಪ್ಪರಿಯದ ಸಾಲುಗಳಲ್ಲಿ ಕಡೆದು ನಿಲ್ಲಿಸಿಬಿಟ್ಟಿದ್ದಾರೆ.

*ಪಡುವಣ ಕಡಲಿನ*
*ತೆಂಗಿನ ಮಡಿಲಿನ*
*ಮರೆಯಲಿ ಮೆರೆವುದು ನಾಡೊಂದು*
*ಸೃಷ್ಟಿಯ ಮಾತೆಯ*
*ಮೀಸಲು ಸೊಬಗಿನ*
*ಹೊದಿಕೆಯ ಹೊದ್ದಿಹ ಬೀಡೊಂದು*
*(''ಹೊನ್ನಿಯ ಮದುವೆ'')*

ಸೇಡಿಯಾಪು ಕೃಷ್ಣಭಟ್ಟರ ಕಾವ್ಯ ಸೃಷ್ಟಿಯ ಸೌಂದರ್ಯ, ರಾಷ್ಟ್ರಪ್ರೇಮದ ಉಜ್ವಲತೆ, ಜೀವನ ಯಾತ್ರೆಯ ಮಥಿತಾರ್ಥ, ಕಾವ್ಯದೇವಿಯ ಒಡನಾಟದ ಸಿರಿ - ಇವುಗಳನ್ನೆಲ್ಲ ತಮ್ಮ ಪ್ರತಿಭೆಯ ಕಾಂತಿಯಿಂದ ಬೆಳಗಿಸಿದ್ದಾರೆ. ಕೃಷ್ಣಭಟ್ಟರು ಕನ್ನಡ ಕಾವ್ಯ ಜಗತ್ತಿಗೆ ಕೊಟ್ಟ ಅತ್ಯುತ್ಕೃಷ್ಟ ಕೊಡುಗೆಗಳೆಂದರೆ ''ಕೆಲವು ಸಣ್ಣಕಾವ್ಯಗಳು'' ಎಂದು ಅವರಿಂದ ನಾಮಕರಣ ಪಡೆದು ನಮಗೆ ಲಭ್ಯವಾಗಿರುವ ತರುಣ ಧಮನಿ, ಶ್ವಮೇಧ, ಕೃಷ್ಣಾಕುಮಾರಿ ಮತ್ತು ಪುಣ್ಯಲಹರಿ - ಎಂಬ ನಾಲ್ಕು ದೀರ್ಘ ಕವನಗಳು.

''ತರುಣ ಧಮನಿ'' ಮತ್ತು ''ಕೃಷ್ಣಾಕುಮಾರಿ'' ಐತಿಹಾಸಿಕ ಕಥಾ ವಸ್ತುವನ್ನೊಳಗೊಂಡಿದ್ದರೆ ''ಶ್ವಮೇಧ'' ನಡೆದ ಸಂಗತಿಯೊಂದರ ನಿರೂಪಣೆಯಂತೆ ತೋರುತ್ತದೆ. ''ಪುಣ್ಯಲಹರಿ'' ರಾಮಾಯಣದ ಕಥಾಂಶವನ್ನೊಳಗೊಂಡಿರುವ ಶಬರಿಯ ಕಥೆ. ಈ ನಾಲ್ಕೂ ಖಂಡಕಾವ್ಯಗಳನ್ನು ಸೇಡಿಯಾಪು ಅವರು ೧೯೩೩ ರಿಂದ ೧೯೩೯ನೇ ಇಸವಿಯ ಅವಧಿಯಲ್ಲಿ ಬರೆದಿರುವುದಾಗಿ ತಿಳಿದುಬರುತ್ತದೆ. ಪ್ರೌಢ ವಯಸ್ಸಿನ ಸೃಷ್ಟಿಗಳಾದ ಈ ಕಾವ್ಯಗಳು ವಿದ್ವಾನ್ ರಂಗನಾಥ ಶರ್ಮರ ಪ್ರಕಾರ ''ಉಪಮಾನ, ರೂಪಕಗಳು, ರಸಭಾವದ ದೀಪ್ತಿ, ಕಲ್ಪನಾವಿಲಾಸ, ಪದಗಳ ಬೆಡಗನ್ನು ವಿಶೇಷವಾಗಿ ಮೆರೆದಿವೆ. ಇಲ್ಲಿ ಅನುಪ್ರಾಸಗಳು ಪಾರಿಜಾತದ ಹೂಗಳಂತೆ ಉದುರಿವೆ. ಪದ್ಯಗಳ ಒಂದೊಂದು ಪಾದವೂ ಸುಗಂಧಿತ ಸುವರ್ಣ ತಂತುವಿನಂತೆ ವಿನ್ಯಸ್ತವಾಗಿದೆ.''

ಒಂದೊಂದು ಕಾವ್ಯವೂ ವಿಸ್ತೃತವಾದ ಪ್ರತ್ಯೇಕ ಪ್ರಬಂಧಕ್ಕೆ ಸಾಮಗ್ರಿಯೊದಗಿಸುವಷ್ಟು ಸಾಂದ್ರವಾಗಿರುವುದರಿಂದ ಈ ಪುಟ್ಟ ಲೇಖನದಲ್ಲಿ ಆ ಸಾಹಸಕ್ಕೆಳಿಯದೆ ಕೇವಲ ಕಥೆಯನ್ನು ತಿಳಿಸಲಷ್ಟೇ ಪ್ರಯತ್ನಿಸುತ್ತೇನೆ. ಓದುಗರು ಮೂಲವನ್ನು ಅಗತ್ಯವಾಗಿ ಗಮನಿಸಿ ಓದಿನ ಸುಖವನ್ನನುಭವಿಸಬೇಕೆಂದು ನನ್ನ ನಮ್ರ ವಿನಂತಿ.

''ತರುಣ ಧಮನಿ''ಯು ವಿಜಯನಗರದ ಅರಸನಾಗಿದ್ದ ರಾಮರಾಯನು ಹುಲಿಬೇಟೆಗೆ ಹೋಗಿದ್ದ ಸಂದರ್ಭವನ್ನು ವಿವರಿಸುತ್ತದೆ. ವಾಸ್ತವವಾಗಿ ಹುಲಿ ಬೇಟೆಗಾಗಿ ರಾಜನು ಹೊಂಚು ಹಾಕುತ್ತಾ ಮರ ಹತ್ತಿ ಕುಳಿತಿರುವಾಗ ಇಬ್ಬರು ತರುಣಿಯರು ಕಾಡಿನಲ್ಲಿ ಬರುವುದು ಗೋಚರಿಸುತ್ತದೆ. ಅವರಲ್ಲೊಬ್ಬಳು ಅನುಪಮ ಸುಂದರಿ; ಅವಳು ಯವನರ ಕುಮಾರಿಯೆಂದು ತರುವಾಯ ರಾಜನಿಗೆ ತಿಳಿಯುತ್ತದೆ. ತರುಣಿಯರನ್ನು ಹುಲಿಯ ಆಕ್ರಮಣದಿಂದ ಪಾರುಮಾಡಿದ ಬಳಿಕ ರಾಜ ಆ ಸುಂದರಿಯನ್ನು ವಿವಾಹವಾಗಿ ಅರಮನೆಯಲ್ಲಿಟ್ಟುಕೊಳ್ಳುತ್ತಾನೆ. ಈ ಸುದ್ದಿಯಿಂದ ಸಿಟ್ಟಾದ ಶತ್ರುಗಳು ತಾಳಿಕೋಟೆಯ ಯುದ್ಧಕ್ಕೆ ನಾಂದಿ ಹಾಡಿದರೆಂಬಲ್ಲಿಗೆ ಕಾವ್ಯ ಮುಕ್ತಾಯವಾಗುತ್ತದೆ.

''ಶ್ವಮೇಧ ಅಥವಾ ನಾಯನಡತೆ'' ಎಂಬುದು ಎರಡನೇ ಖಂಡಕಾವ್ಯ. ''ಪ್ರಸಿದ್ಧವಾದ 'ಅಶ್ವಮೇಧ' ಎಂಬ ಶಬ್ದಕ್ಕೆ ಸದೃಶವಾಗಿ ವಿಚಿತ್ರವಾದ 'ಶ್ವಮೇಧ' ಎಂಬ ನಾಮಕರಣವೇ ಚಮತ್ಕಾರವಾಗಿದೆ.'' ಸ್ವಾಮಿಭಕ್ತಿ ವಿವೇಚನೆ ಮತ್ತು ಸಮಯೋಚಿತತೆಯನ್ನು ಪ್ರಕಟಿಸುವ ನಾಯಿಯ 'ಮೇಧ'ವನ್ನು ಕುರಿತ ಪದ್ಯ ಇದು. ಧರ್ಮರಾಯಸೆಟ್ಟಿ ಮತ್ತು ಪದ್ಮಾವತಿ ಎಂಬ ದಂಪತಿಗಳಿಗೆ ಮಕ್ಕಳಿರದ ಕಾರಣ ಬಲು ಅಕ್ಕರೆಯಿಂದ ಒಂದು ನಾಯಿಯನ್ನು ಸಾಕಿಕೊಂಡು ಅದಕ್ಕೆ ಚೆಂದು ಎಂದು ಹೆಸರಿಟ್ಟುಕೊಂಡಿರುತ್ತಾರೆ. ಧರ್ಮರಾಯಸೆಟ್ಟಿ ಹೆಸರಿಗೆ ತಕ್ಕಂತೆ ನ್ಯಾಯವಂತ, ದಯಾಮಯಿ. ಒಮ್ಮೆ ಅವನು ಪರಸ್ಥಳಕ್ಕೆ ಹೋಗಿ ಬರುವ ಸಂದರ್ಭದಲ್ಲಿ ಒಂದು ಊರಿನಲ್ಲಿ ಗುಮ್ಮನಾಳ್ವನೆಂಬ ಶ್ರೀಮಂತ ತನ್ನ ಸೇವಕನನ್ನು ಥಳಿಸುವ ದೃಶ್ಯವನ್ನು ನೋಡುತ್ತಾನೆ; ಧರ್ಮರಾಯ ಸೆಟ್ಟಿಯ ಕರುಳು ಚುರುಕ್ ಎನ್ನುತ್ತದೆ. ಗುಮ್ಮನಾಳ್ವನ ಕೋಪದ ಮೂಲವನ್ನು ತಿಳಿದು ಆ ಸೇವಕನನ್ನು ಅವನ ಸೆರೆಯಿಂದ ಬಿಡಿಸುತ್ತಾನೆ. ಆ ಬಿಡುಗಡೆಗೆ ಉತ್ತರವಾಗಿ ಹಣ ಕೊಡಬೇಕಾಗುತ್ತದೆ. ಸಾಲದೇ ಬಂದ ಬಾಕಿಗಾಗಿ ತನ್ನ ನಾಯಿಯನ್ನು ಒತ್ತೆ ಇಡುತ್ತಾನೆ. ಗುಮ್ಮನಾಳ್ವನು ಧರ್ಮರಾಯಸೆಟ್ಟಿಯ ನಾಯಿಗೆ ಪರಿಪರಿಯಾಗಿ ಕಿರುಕುಳ ಕೊಡುತ್ತಾನೆ. ತನ್ನ ಯಜಮಾನನ ಮಾನ ಕಾಪಾಡಲು ನಾಯಿ ಎಲ್ಲ ಚಿತ್ರಹಿಂಸೆಯನ್ನೂ ಸಹಿಸಿಕೊಂಡಿರುತ್ತದೆ.




ಒಮ್ಮೆ ಗುಮ್ಮನಾಳ್ವನ ಮನೆಗೆ ಬೆಂಕಿ ಬಿದ್ದಾಗ ನಾಯಿ ಅವನ ಮಗುವನ್ನು ರಕ್ಷಿಸುತ್ತದೆ. ಇದರಿಂದ ಗುಮ್ಮನಾಳ್ವನ ಮನಸ್ಸು ಪರಿವರ್ತನೆಯಾಗಿ ಆ ನಾಯಿಯನ್ನು ಬಿಡುಗಡೆಗೊಳಿಸುತ್ತಾನೆ. ನಾಯಿ ಅವಧಿಗೆ ಮೊದಲೇ ಊರು ಸೇರಿದ್ದನ್ನು ಗಮನಿಸಿ ಪೂರ್ವ ಪರ ಆಲೋಚಿಸದೆ ಧರ್ಮ ಪರಿಪಾಲನೆಗೆ ಹೆಸರುವಾಸಿಯಾಗಿದ್ದ ಧರ್ಮರಾಯಸೆಟ್ಟಿ ಆ ಪ್ರಾಣಿಯನ್ನು ಕೋಪದಲ್ಲಿ ಕೊಂದುಬಿಡುತ್ತಾನೆ. ತರುವಾಯ ನಿಜಸಂಗತಿ ಗೊತ್ತಾಗಿ ದಂಪತಿಗಳು ಬಹಳವಾಗಿ ಪ್ರಲಾಪಿಸುತ್ತಾರೆ.

ಉದಯಪುರದ ರಾಜ ಭೀಮಸಿಂಗನೆಂಬುವನ ಹೇಡಿತನವನ್ನು ಜಾಹೀರುಮಾಡುವಂಥ ಪದ್ಯ ''ಕೃಷ್ಣಾ ಕುಮಾರಿ''. ತನ್ನ ಮಗಳು ಸುರಸುಂದರಿಯಾಗಿರುವುದರಿಂದ ಛಪ್ಪನ್ನೈವತ್ತಾರು ದೇಶದ ರಾಜಕುಮಾರರು ಬಂದು ಅವಳ ಕೈ ಹಿಡಿಯಲು ಪೈಪೋಟಿ ನಡೆಸಿ ಪರಿಣಾಮವಾಗಿ ತಾನು ಯುದ್ಧ ಮಾಡಬೇಕಾದ ಪ್ರಮೇಯ ಒದಗಬಹುದೆಂದು ಹೆದರಿ ತಾನೇ ಕೈಯಾರ ಅವಳಿಗೆ ವಿಷ ಕುಡಿಸಿ ಸಾಯಿಸುವ ಹೃದಯವಿದ್ರಾವಕವಾದ ಪ್ರಸಂಗವನ್ನು ಈ ಪದ್ಯ ಬಹಳ ಚಿತ್ರವತ್ತಾಗಿ ಬಣ್ಣಿಸುತ್ತದೆ.

*''ಹೆಣವ ಹುಗಿಯದೆ ಹದ್ದುಗಳ ಹಾರಿಕೆಯ*
*ತಡೆಯಲಿಕಹುದೆ? ವಿಷವನು ಕುಡಿದು ಮಡಿ !*
*ಮರು ನುಡಿಯದಿರು ಮಗಳಾದೊಡೆನಗೆಂದ''*

ಜೀವಂತ ಬದುಕಿರುವ ಮಗಳು ಭೀಮಸಿಂಗನ ಪಾಲಿಗೆ ಆಗಲೇ ಹೆಣವಾಗಿದ್ದಾಳೆ. ಹಾಗಾಗಿ ಅವಳನ್ನು ಹೂಳಿದರೆ ಮಾತ್ರ ಹಾರಾಡುವ ರಣಹದ್ದುಗಳಿಂದ ಪಾರಾಗಬಹುದು ಎಂಬ ಕಲ್ಪನೆ, ರೂಪಕ ವಿಶೇಷವಾದದ್ದು.

ನಿರೂಪಣೆಯ ವಿಧಾನದಲ್ಲಿ ಮತ್ತು ಕೃಷ್ಣಾ ಕುಮಾರಿಯ ಪಾತ್ರದ ಎರಕದಲ್ಲಿ ಕೋಲ್‌ರಿಜ್ ಕವಿಯ ''ಕ್ರಿಸ್ಟಬೆಲ್'' ಪದ್ಯದ ಛಾಯೆಯಿದೆ. ಕ್ರಿಸ್ಟಬೆಲ್‌ಳಂತೆಯೇ ಕೃಷ್ಣಾಕುಮಾರಿ ಕೂಡ ತಂದೆಯ ಮಾತಿಗೆ ಎದುರಾಡದ ವಿನೀತೆ. ಭೀಮಸಿಂಗ ವಿಷವನ್ನು ಕುಡಿಯೆಂದಾಕ್ಷಣ ಅವಳು ಕುಡಿದುಬಿಡುತ್ತಾಳೆ. ಅಲ್ಲಿ, ಕೋಲ್‌ರಿಜ್ ಕವನದಲ್ಲಿ ಸರ್ ಲಿಯೊಲಿನ್ (ಅವನೂ ಸಿಂಹನೇ) ಜೆರಾಲ್ಡಿನ್ ಎಂಬುವವಳು ಮಾಯಾವಿಯೆಂದು ಮಗಳು ಎಷ್ಟು ಹೇಳಿದರೂ ಕೇಳದೆ ಕ್ರಿಸ್ಟಬೆಲ್‌ಳನ್ನೇ ದೂರುವ ಸನ್ನಿವೇಶ ಬರುತ್ತದೆ. ಸನ್ನಿವೇಶದ ದುರಂತತೆಯನ್ನು ಅರಿತ ಕ್ರಿಸ್ಟಬೆಲ್ ತನ್ನ ದುರ್ಗತಿಯನ್ನು ನೆನೆದು ಸುಮ್ಮನಾಗುತ್ತಾಳೆ. ಕ್ರಿಸ್ಟಬೆಲ್ ಕೋಲ್‌ರಿಜ್‌ನ ಅಪೂರ್ವ ಕವನ.

''ಪುಣ್ಯಲಹರಿ ಶಬರಿ''ಯಲ್ಲಿ ಸೇಡಿಯಾಪುರವರು ಮೂಲ ರಾಮಾಯಣದ ಶಬರಿಗಿಂತ ಕೊಂಚ ಭಿನ್ನವಾದ ಆರಂಭವನ್ನು ಶಬರಿಯ ಕಥೆಯಲ್ಲಿ ತಂದಿದ್ದಾರೆ. ಕಾಡ ಬೇಡರ ಕುವರಿಯಾದ ಶಬರಿ ತನ್ನ ಲಗ್ನದ ದಿನದಂದು ತನ್ನ ಬಂಧುಬಾಂಧವರು ಮದುವೆಯ ಸಂಭ್ರಮವನ್ನಾಚರಿಸಲು ಮಾಂಸಕ್ಕಾಗಿ ನೂರಾರು ದನಕರುಗಳನ್ನು ಕೊಲ್ಲುತ್ತಾರೆ. ಆ ಜಾನುವಾರುಗಳ ಆರ್ತನಾದವನ್ನು ಕೇಳಿ ಶಬರಿ ಒಬ್ಬಳೇ ಕತ್ತಲೆಯ ರಾತ್ರಿಯಲ್ಲಿ ಹೊರಟುಬಿಡುವ ಸನ್ನಿವೇಶ. ತನ್ನ ಹದಿನಾರನೇ ವಯಸ್ಸಿನಲ್ಲಿ ಹೊರಟಂಥ ಶಬರಿ ಹಣ್ಣು ಹಣ್ಣು ಮುದುಕಿಯಾಗುವವರೆಗೂ ಶ್ರೀರಾಮ ದರ್ಶನಕ್ಕಾಗಿ ಕಾಯುವ ಕಥೆಯೇ ಈ ಕಾವ್ಯದ ಕೇಂದ್ರ. ಸೀತೆಯನ್ನು ಹುಡುಕಿಕೊಂಡು ಲಕ್ಷ್ಮಣ ಸಮೇತ ರಾಮ ಕಾಡಿಗೆ ಬರುವಾಗ ಶಬರಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆ:

*"... ಆ ಪರಂಜ್ಯೋತಿಯ*
*ತೇಜದೊಂದೆಸಳಾಗಿ, ನಿತ್ಯಾನಂದಲೀಲೆಯ*
*ನವಮಂದಹಾಸವಾಗಿ*
*ಕೇವಲ ಬ್ರಹ್ಮರಸವಾಗಿ, ಪರಿಪೂರ್ಣಳಾದಳು*
*ಸತ್ಯ-ಶಿವ-ಸುಂದರಿ."*

ಕನ್ನಡದ ಖಂಡಕಾವ್ಯ ಜಗತ್ತಿನಲ್ಲಿ ಸೇಡಿಯಾಪು ಕೃಷ್ಣಭಟ್ಟರ ಈ ನಾಲ್ಕು ಕಾವ್ಯಗಳು ಘನತೆಯಲ್ಲಿ ಕಡೆಂಗೋಡ್ಲು ಅವರ ನಲ್ಮೆ ಸಂಕಲನದ "ಹೊನ್ನಿಯ ಮದುವೆ", "ಮಾದ್ರಿಯ ಚಿತೆ" ಹಾಗೂ "ಮುರಲೀನಾದ"ದ ಸಾಲಿಗೆ ಸೇರುವಂಥವಾಗಿವೆ. ಗೋವಿಂದ ಪೈ ಅವರು "ಗೋಲ್ಗೊಥಾ"ದಂಥ ಉತ್ಕೃಷ್ಟವಾದ ಖಂಡಕಾವ್ಯವನ್ನು ಬರೆದು ಹಾದಿಯನ್ನು ಆಗಲೇ ನೇರ್ಪುಗೊಳಿಸಿದ್ದರೆಂಬುದನ್ನು ನಾವು ನೆನೆಯಬೇಕು. ಕೃಷ್ಣಭಟ್ಟರ ಖಂಡಕಾವ್ಯಗಳನ್ನು ಕುರಿತು ಏರ್ಯ ಲಕ್ಷ್ಮೀನಾರಾಯಣ ಆಳ್ವ ಅವರು "ಇವು ಕನ್ನಡ ಸಾಹಿತ್ಯಾಕಾಶದಲ್ಲಿ ಸೇಡಿಯಾಪು ಮೂಡಿಸಿದ ಸಪ್ತವರ್ಣದ ಕಾಮನಬಿಲ್ಲು" ಎಂದು ಸಮರ್ಪಕವಾಗಿ ಬಣ್ಣಿಸಿದ್ದಾರೆ.

ನಮ್ಮ ಹಳೆಯ ತಲೆಮಾರಿನ ಕವಿಗಳನ್ನಾಗಲೀ, ಲೇಖಕರನ್ನಾಗಲೀ ನಾವೇಕೆ ಓದಬೇಕೆಂಬ ಪ್ರಶ್ನೆ ಸುಳಿಯುವಂತಿದ್ದರೆ ೧೮೫೩ರಷ್ಟು ಹಿಂದೆಯೇ ಮ್ಯಾಥ್ಯೂ ಆರ್ನಾಲ್ಡ್ ತನ್ನ ಕವಿತಾ ಸಂಕಲನಕ್ಕೆ ಬರೆದ ಪ್ರಸ್ತಾವನೆಯಲ್ಲಿ ಉತ್ತರವಿದೆ:

"ನಮ್ಮ ಪೂರ್ವದ ಬರಹಗಾರರನ್ನು ನಾವು ಮೊದಲು ಓದೋಣ. ನಮ್ಮ ಬುದ್ಧಿಗೆ ಹತ್ತಿದ ಸೋಂಕನ್ನು ಅವರು ತೆಗೆಯಬಲ್ಲರು. ಈ ವಿಕಲ್ಪ ಸಾಹಿತ್ಯ, ಕಲೆ, ಧರ್ಮ, ನೀತಿ - ಎಲ್ಲ ವಿಭಾಗಗಳಲ್ಲೂ ಕಾಣಿಸಿಕೊಂಡಿದೆ. ಹಳೆಯ ಸಾಹಿತ್ಯದಲ್ಲಿ ಪ್ರಧಾನವಾಗಿ ಕಂಡುಬರುವ ಸಂಪನ್ನಗುಣವೆಂದರೆ ಸ್ಥಿಮಿತತೆ; ಇದು ಇಲ್ಲದಿರುವುದೇ ಆಧುನಿಕ ಸಾಹಿತ್ಯದ ಒಂದು ದೊಡ್ಡ ಊನ - ವೈವಿಧ್ಯ ಹಾಗೂ ಸಾಮರ್ಥ್ಯಗಳು ಅದಕ್ಕೆ ಇದ್ದಾಗ್ಯೂ ಕೂಡ. ನಮ್ಮ ವಿಕಲ್ಪಗಳು ಕಡಿಮೆಯಾಗಬೇಕಾದರೆ ನಾವು ಹಳಬರ ಸಾಹಿತ್ಯವನ್ನು ಅಗತ್ಯವಾಗಿ ಓದಬೇಕು; ಬೇರೆ ಮಾರ್ಗವಿಲ್ಲ."

ಕೃಷ್ಣಭಟ್ಟರಂಥವರ ಕಾವ್ಯವನ್ನು ನಾವು ಅಧ್ಯಯನ ಮಾಡಬೇಕಾದ ಅಗತ್ಯವನ್ನು ಆರ್ನಾಲ್ಡ್ ಹೇಳುತ್ತಿರುವಂತೆ ಅವನ ಮಾತುಗಳಿಂದ ವ್ಯಕ್ತವಾಗುತ್ತದೆ.

ಜ್ಯೇಷ್ಠರೆಂದು, ಶ್ರೇಷ್ಠರೆಂದು ಅವರ ಸೃಷ್ಟಿಯನ್ನು ಮತ್ತು ಬದುಕನ್ನು ಪ್ರೀತಿಸುವ, ಆರಾಧಿಸುವ ಕೆಲವು ಆಪ್ತ ಶಿಷ್ಯರಿದ್ದುದರಿಂದ ಸೇಡಿಯಾಪುರವರು ಇಂದು ಎಲ್ಲರಿಗೆ ಇನ್ನಷ್ಟು ಪರಿಚಯವಾದರು. ಇಲ್ಲದಿದ್ದರೆ "ಕಡಲಾಳದ ಮುತ್ತಿನಂತೆ, ಕಾನನದ ಸುಮದಂತೆ" ಸಾಮಾಜಿಕರ ದೃಷ್ಟಿಗೆ ಗೋಚರವಾಗದೆ ವಿಸ್ಮೃತಿಗೊಳಗಾಗಿಬಿಡುತ್ತಿದ್ದರು. ಕೃಷ್ಣಭಟ್ಟರ ಸಾಹಿತ್ಯದ ಶ್ರೀಮಂತಿಕೆಯನ್ನು ನೆನೆದು ನಾಡಿನ ಎಲ್ಲ ಕಡೆ ಅವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ವಿಚಾರ ಸಂಕಿರಣಗಳು ನಡೆಯುತ್ತಿರುವುದು ಕಡಲಕರೆಯ ಕವಿವರ್ಯನಿಗೆ ಕನ್ನಡಿಗರು ಸಲ್ಲಿಸುತ್ತಿರುವ ನುಡಿಕಾಣಿಕೆಯ ದ್ಯೋತಕವಾಗಿದೆ. ಕನ್ನಡ ಕಾವ್ಯದ ಜೀವತಂತುವು ನಿತ್ಯಚೈತನ್ಯದಿಂದ ಕಂಗೊಳಿಸುತ್ತಿದೆ ಎನ್ನುವುದಕ್ಕೆ ಪಂಜೆಯವರು, ಪೈಗಳು, ಸೇಡಿಯಾಪುರವರು ಮತ್ತು ಕಡೆಂಗೋಡ್ಲು ಅವರ ಕೃತಿಗಳು ಸಾಕ್ಷಿಯಾಗಿವೆ. ಕರೆನಾಡಿನ ಈ ಕವಿಗಳ ಕಾವ್ಯದ ವೈಶಿಷ್ಟ್ಯವನ್ನು ಕುರಿತು ಯಾರಾದರೂ ತಲಸ್ಪರ್ಶಿಯಾದ ಅಧ್ಯಯನವನ್ನು ಕೈಗೊಂಡ ಪಕ್ಷದಲ್ಲಿ ಮಹದುಪಕಾರವಾದೀತು.

**ಪ್ರೊ॥ ಸಿ. ನಾಗಣ್ಣ**
ನಂ. ೩೯೯೫, ೨೧/ಸಿ ಮೈನ್, ವಿಜಯನಗರ ೨ನೇ ಹಂತ
ಮೈಸೂರು-೫೭೦ ೦೧೭

---

*(೪೩ನೇ ಪುಟದಿಂದ)*

ಅವಹೇಳನಕ್ಕೀಡಾಯಿತು ಎಂದೇ ಹೇಳಬೇಕು.

ಒಂದು ಭಾಷೆಯ ಅವಸಾನಕಾಲದಲ್ಲಿ ಅದರ ಅಸ್ಥಿಪಂಜರವಾಗಿ ಉಳಿದುಕೊಳ್ಳುವುದು ಅದು ಸೃಷ್ಟಿಸಿದ ಸಾಹಿತ್ಯವೇ (ಸಂಸ್ಕೃತಿ ವಿಶಿಷ್ಟವಾದ ಆಕರ ಗ್ರಂಥಗಳು ಮತ್ತು ಧರ್ಮಗ್ರಂಥಗಳನ್ನು ಒಳಗೊಂಡು). ಬಹುಶಃ ಅವೆಲ್ಲವೂ ಈಗ ಭಾರತೀಯ ಭಾಷೆಗಳಲ್ಲಿ ಲಭ್ಯವಿವೆ. ಪ್ರಪಂಚದಲ್ಲೇ ಅತ್ಯಧಿಕ ಭಾಷೆಗಳಲ್ಲಿ ಭಾಷಾಂತರಗೊಂಡ ಕೃತಿ ಬೈಬಲ್ ಎಂಬುದು ಜನಜನಿತವಾಗಿದೆ. ಬಹುಶಃ ಅಷ್ಟೇ ಭರದಿಂದ ಕೋಟ್ಯಾಂತರ ಪ್ರತಿಗಳು ಮುದ್ರಣಗೊಂಡು ಮಾರಾಟವಾಗಿವೆ. ಸನಾತನ ಧರ್ಮದ ನಾಲ್ಕು ಪಾದಗಳೆಂದು ಕರೆಸಿಕೊಳ್ಳುವ ನಾಲ್ಕು ವೇದಗಳನ್ನು ಅದೇ ಮಾದರಿಯಲ್ಲಿ ಭಾಷಾಂತರಿಸಿ ಮುದ್ರಿಸಿ ಹಂಚಿ ಪ್ರಚುರಪಡಿಸುತ್ತಿಲ್ಲವೇಕೆ ಎಂಬುದು ಕುತೂಹಲಕರ ಅಂಶ. ಮೂಲದ ಸಮೇತ ಮುದ್ರಿಸಿ ಭಾಷಾಂತರಿಸಿದರೆ ಇನ್ನೂ ಹೆಚ್ಚು ಪ್ರಸ್ತುತವೆನಿಸಬಹುದು.

ಶಾಲೆ ಕಾಲೇಜುಗಳಲ್ಲಿ ಸಂಸ್ಕೃತ ಇಂದು ಜೀವಂತವಾಗಿರುವುದು ರ್‍ಯಾಂಕ್ ಪಡೆಯಲಿಚ್ಛಿಸುವ ವಿದ್ಯಾರ್ಥಿಗಳಿಂದ. ಕೆಲವು ವರ್ಷಗಳ ಹಿಂದೆ ಈ ಬಗ್ಗೆ ಒಂದು ವಿವಾದವೇ ನಡೆದುಹೋಯಿತು. ಪ್ರಾಥಮಿಕ ತರಗತಿಗಳಲ್ಲಿ ಕಲಿಯುವ ಕನ್ನಡದಂತೆ ಇರುವ ಸಂಸ್ಕೃತ ಪಠ್ಯವನ್ನು ೧೦ನೇ ತರಗತಿಯ ವಿದ್ಯಾರ್ಥಿಗಳಿಗೆ ಬಡಿಸಿ ಅತಿ ಹೆಚ್ಚು ಅಂಕ ಬರುವಂತೆ ನೋಡಿಕೊಳ್ಳುವುದು ರ್‍ಯಾಂಕ್ ಬರುವ ಬಹುತೇಕ ವಿದ್ಯಾರ್ಥಿಗಳು ಸಂಸ್ಕೃತವನ್ನು ಮೊದಲ ಭಾಷೆಯಾಗಿ ಆಯ್ಕೆಮಾಡಿಕೊಂಡವರೇ ಆಗಿರುತ್ತಿದ್ದುದಕ್ಕೆ ಕಾರಣ ಎಂದು ಆಗ ತಿಳಿಯಿತು.

ನಮ್ಮತನವನ್ನು ಉಳಿಸಿಕೊಳ್ಳಲು ನಾವು ಪಡುವ ಪರಿಪಾಟಲು ವಿಚಿತ್ರವಾಗಿರುತ್ತದೆ. ಇದನ್ನು 'ಭಾರತೀಯ ಶೈಲಿ' ಎಂದು ಕರೆಯಬಹುದು. ಇಂಗ್ಲಿಷನ್ನು ಓದಿಸಿ ಎಂದು ಅರಚುತ್ತೇವೆ, ಮೆರವಣಿಗೆ ಮಾಡುತ್ತೇವೆಯೇ ಹೊರತು ಸಂಸ್ಕೃತ ಸಂಪರ್ಕ ಭಾಷೆಯಾಗಲಿ ಎಂದು ಯಾರೂ ಪ್ರಯತ್ನಿಸುವುದಿಲ್ಲ. ಬೈಬಲ್‌ಗಳನ್ನು ಸುಡುತ್ತೇವೆಯೇ ಹೊರತು ನಮ್ಮ ವೇದಗಳನ್ನು ಓದಿ ಎಂದು ಹೇಳುವುದಿಲ್ಲ. ನಮ್ಮ ದೇವಸ್ಥಾನದೊಳಗಡೆ ಬನ್ನಿ ಎನ್ನುವುದು ಬಿಟ್ಟು ಮಸೀದಿಗಳನ್ನು ಚರ್ಚುಗಳನ್ನು ಉರುಳಿಸುತ್ತೇವೆ. ಹಾಗೆ ಮಾಡುವುದರಲ್ಲಿ ಎರಡು ಅನುಕೂಲಗಳಿವೆ. ಒಂದು ವ್ಯಕ್ತಿಗೆ ಆಯ್ಕೆಯ ಸ್ವಾತಂತ್ರ್ಯವನ್ನು ನೀಡಿದಂತಾಗುತ್ತದೆ ಮತ್ತು ನಮ್ಮದೆನ್ನುವ ಅಭಿಮಾನದಲ್ಲಿ ಆಯ್ಕೆಮಾಡಿಕೊಳ್ಳಬಹುದಾದ ಇಲ್ಲಿನ ಭಾಷೆ ಧರ್ಮಗಳು ತಮ್ಮ ಅಸ್ತಿತ್ವವನ್ನು ಮತ್ತು ಅಂತಸ್ಸತ್ವವನ್ನು ಗಟ್ಟಿಗೊಳಿಸಿಕೊಳ್ಳುತ್ತವೆ. ಒಲ್ಲದ್ದನ್ನು ಹೊಡೆದು ನಾಶಮಾಡುತ್ತೇವೆ ಎಂದು ನಂಬಿದವರಿಗೆ ಕಾಳ್ಗಿಚ್ಚನ್ನು ಬಾಯಲ್ಲಿ ಉರುಬಿ ಆರಿಸುವ ಅನುಭವವಾಗದೇ ಇರದು.

ನವೋದಯ ಕಾಲದಲ್ಲಿ ಬ್ರಾಹ್ಮಣ ಸಾಹಿತಿಗಳ ಮಧ್ಯೆ ಬೆಳೆಯಲು ಶೂದ್ರರಾದ ಕುವೆಂಪು ಸಂಸ್ಕೃತಕ್ಕೆ ಮೊರೆಹೋಗಬೇಕಾಯಿತು. ಭಾಸ, ಕಾಳಿದಾಸರ ಪರಿಚಯವಿಲ್ಲದಿದ್ದರೆ ಕೀಳರಿಮೆ ಆವರಿಸಿಕೊಳ್ಳುವ ಕಾಲ ಅದಾಗಿತ್ತು. ಆದರೂ ಅವರು ತಮ್ಮತನವನ್ನು ಮೆರೆದದ್ದು ಎರಡು ಬೃಹತ್ ಕಾದಂಬರಿಗಳಲ್ಲಿ. ಅವು ಕಾಲವನ್ನು ಗೆದ್ದು ನಿಂತವು. ಅಂದು ಸಾಹಿತ್ಯಲೋಕಕ್ಕೆ ಶೂದ್ರರು ಸಂಸ್ಕೃತದ ಕಂದೀಲು ಹಿಡಿದು ಪ್ರವೇಶ ಪಡೆದಂತೆಯೇ ಇಂದು ಮಠ ಸಂಸ್ಕೃತಿಗೆ ಶೂದ್ರ ಸಾಮೀಜಿಗಳ ಪ್ರವೇಶಕ್ಕೆ ಸಂಸ್ಕೃತದ ಕಂದೀಲಿನ ಅವಶ್ಯಕತೆ ಇದೆ. ಅಂತೆಯೇ ಶೂದ್ರಮಠಗಳು ಸಂಸ್ಕೃತ ಶಾಲೆಗಳನ್ನು ತೆರೆಯುತ್ತಿವೆ. ಇದರಿಂದ ವೈದಿಕ ಮೂಲಭೂತವಾದಿಗಳಿಗೆ ಪರಮಾನಂದವಾದರೂ ಆಶ್ಚರ್ಯವಿಲ್ಲ. ಆದರೂ ಈ ಭಾಷೆಯನ್ನು ಇವರು ಕಲಿಯಲು ಅಥವಾ ಬೋಧಿಸಲು ಯೋಗ್ಯರಲ್ಲ ಎಂಬ ಒಳ ಅರಿವು ಅವರಿಗಿದ್ದೇ ಇರುತ್ತದೆ. ಇತ್ತೀಚೆಗೆ ನಡೆದ ಸರ್ವಧರ್ಮ ಸಮ್ಮೇಳನವೊಂದರಲ್ಲಿ ಪ್ರವಚನಗಳನ್ನು ಕೇಳಿಸಿಕೊಳ್ಳುತ್ತಿದ್ದ ನನಗೆ ಇದರ ಸ್ಪಷ್ಟ ಅರಿವಾಯಿತು. ಶೂದ್ರ ಸ್ವಾಮಿಗಳು ಸಂಸ್ಕೃತದ ಶ್ಲೋಕ ಹಾಡಿದಾಗ, ಉದ್ಧರಿಸಿದಾಗ, ವೈದಿಕ ಸ್ವಾಮಿಗಳು ಅವರತ್ತ ಉದಾಸೀನ ದೃಷ್ಟಿ ಬೀರುತ್ತಿದ್ದರು. ಅವರ ಉಚ್ಚಾರಣೆಯ ಅಪಕ್ವತೆಯನ್ನು ಮೂದಲಿಸುವಂತಿತ್ತು ಅವರ ನೋಟ. ಬಹುಶಃ ಸಾಹಿತ್ಯ ಸ್ಥಿತ್ಯಂತರಗಳನ್ನು ಕಂಡಂತೆಯೇ ಮಠ ಸಂಸ್ಕೃತಿಯೂ ದಲಿತ - ಬಂಡಾಯವಾಗುವ ಕಾಲ ದೂರವಿಲ್ಲವೆಂದು ನನಗನ್ನಿಸುತ್ತಿದೆ.

ಒಂದು ಭಾಷೆ ಅಥವಾ ಒಂದು ಧರ್ಮ ತನ್ನ ಶಕ್ತಿಯಿಂದಲೇ ನಿಲ್ಲುತ್ತದೆ ಮತ್ತು ವ್ಯಾಪಿಸಿಕೊಳ್ಳುತ್ತದೆ. ಮಠ, ಮಿಶನರಿಗಳ ಆಶ್ರಯ, ಸರ್ಕಾರದ ಆರ್ಥಿಕ ಸಹಾಯವೆಂಬ ಊರುಗೋಲು ಅದನ್ನು ನಿಲ್ಲಿಸಲಾಗದು. ಬೈಬಲ್ಲಿನ ಮೂಲಭಾಷೆ ಹೀಬ್ರೂ. ಈಗ ಅದು ಇಸ್ರೇಲಿನಂಥ ಸಣ್ಣ ದೇಶದಲ್ಲಿ ಪ್ರಥಮ ಭಾಷೆಯಾಗಿ ಕಲಿಸಲ್ಪಡುತ್ತದೆ. ರಾಮಾಯಣ, ಮಹಾಭಾರತಗಳಷ್ಟೇ ಸಶಕ್ತ ಪುರಾಣಗಳಾದ ಇಲಿಯಡ್, ಒಡಿಸ್ಸಿ ಗ್ರೀಕ್ ಭಾಷೆಯಲ್ಲಿ ಹೋಮರ್ ರಚಿಸಿದ. ಈಗ ಆ ಭಾಷೆ ಮೂಲೆಗುಂಪಾಗಿದೆ. ಯುರೋಪಿನ ಚರ್ಚ್‌ಗಳಲ್ಲಿ ಲ್ಯಾಟಿನ್ ಭಾಷೆಯಲ್ಲಿಯೇ ಪ್ರಾರ್ಥನೆ ನಡೆಯಬೇಕೆಂದೂ ಸಂಘರ್ಷಗಳಾಗಿವೆ. ಆದರೂ ಅದು ಬದುಕಲಿಲ್ಲ. ಕಾಲಕ್ಕೆ ಎಲ್ಲವನ್ನೂ ಜೀರ್ಣಸಿಕೊಳ್ಳುವ ಮತ್ತು ಪುನರ್ ಸೃಷ್ಟಿಸುವ ಶಕ್ತಿ ಇದೆ.

ಇಷ್ಟಾಗಿಯೂ ನಾವು ಸಂಸ್ಕೃತವನ್ನು ನಿರಾಕರಿಸುವ, ತ್ಯಜಿಸುವ ಅಗತ್ಯವಿಲ್ಲ. ಆಸಕ್ತರು ಯಾರಾದರೂ ಅದನ್ನು ಕಲಿಯುವಂತಿರಬೇಕು. ಸಂಶೋಧನೆಗೆ ಅದು ತೆರೆದಿರಬೇಕು. ಮತ್ತೆ ಅದನ್ನು ಸರ್ವವ್ಯಾಪಿಯಾಗುವಂತೆ, ಆಡಳಿತ ಭಾಷೆಯನ್ನಾಗಿ ಮಾಡುತ್ತೇವೆನ್ನುವ ಹಟ ದುರಾಲೋಚನೆಯಾಗುತ್ತದೆ.

**ಮೂಡ್ನಾಕೂಡು ಚಿನ್ನಸ್ವಾಮಿ**
ವಿಭಾಗೀಯ ನಿಯಂತ್ರಣಾಧಿಕಾರಿ
ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ
ಗದಗ ವಿಭಾಗ, ಗದಗ - ೫೮೨ ೧೦೧


1992
ಬಾಬರಿ


2002
ಯಾವ ಮುಖ ಹೊತ್ಕೊಂಡು ವಿದೇಶಕ್ಕೆ ಹೋಗಲಿ ?!
ಗುಜರಾತ್


ಬುಷ್
ಪ್ಯಾಲೆಸ್ತೀನಿನ ಮಾನವ ಬಾಂಬುಗಳ ವಿರುದ್ಧದ ನಿಮ್ಮ ಹೋರಾಟಕ್ಕೆ ನನ್ನ ಸಂಪೂರ್ಣ ಬೆಂಬಲ ಉಂಟು, ಶರಾನ್!
ಇಸ್ರೇಲ್


ನನಗೆ ಶಾಂತಿ ಬೇಕು




# ಪ್ಯಾಲಿಸ್ತೀನಿಯನ್ನರ ಮೇಲೆ ಇಸ್ರೇಲಿ ಸೇನೆಯ ದೌರ್ಜನ್ಯ

ಸೀಯಾರ್ಕೆ

**ಪ**ಶ್ಚಿಮ ಏಶಿಯಾದಲ್ಲಿ ಪರಿಸ್ಥಿತಿ ಗಂಭೀರವಾಗಿದ್ದು ನಾಗರಿಕ ಜಗತ್ತಿನ ಎಲ್ಲ ಪ್ರಜಾಪ್ರಭುತ್ವವಾದಿ ಶಾಂತಿಪ್ರಿಯರನ್ನೂ ಆತಂಕಕ್ಕೀಡುಮಾಡಿದೆ. ಪ್ಯಾಲೆಸ್ಟೈನಿನ ಪ್ರದೇಶದ ಜನರ ಮೇಲೆ ಇಸ್ರೇಲ್ ನಡೆಸುತ್ತಿರುವ ಸೈನಿಕ ಕಾರ್ಯಾಚರಣೆ ಅಮಾನುಷ ರೀತಿಯಲ್ಲಿ ಮುಂದುವರಿಯುತ್ತಿದೆ. ಭಯೋತ್ಪಾದನೆಯನ್ನು ಹತ್ತಿಕ್ಕುವ ಹೆಸರಿನಲ್ಲಿ ಇಸ್ರೇಲಿ ಟ್ಯಾಂಕುಗಳು, ಸೈನ್ಯಗಳು ಹೆಂಗಸರು, ಮಕ್ಕಳು, ಮುದಿಯರನ್ನು ಲೆಕ್ಕಿಸದೆ ಕಗ್ಗೊಲೆ ಮಾಡುತ್ತಿವೆ. ಪ್ಯಾಲಸ್ಟೈನ್ ಅರಬ್ ಜನರ ಮನೆಮಠಗಳನ್ನು ಧ್ವಂಸ ಮಾಡುತ್ತಿವೆ. ಅಂಗಡಿ ಮುಂಗಟ್ಟುಗಳನ್ನು ಪುಡಿಗುಟ್ಟುತ್ತಿವೆ. ಪ್ಯಾಲಸ್ಟೈನ್ ಜನರ ಅಪ್ರತಿಮ ನಾಯಕ, ಪ್ಯಾಲಸ್ಟೈನ್ ಸ್ವಾಯತ್ತ ಪ್ರದೇಶದ ಸರಕಾರದ ಅಧಿಪತಿ ಯಾಸೆರ್ ಅರಾಫತ್‌ರನ್ನು ದಿಗ್ಬಂಧನದಲ್ಲಿರಿಸಿ, ಅವರ ಕಚೇರಿ ಮತ್ತು ನಿವಾಸಗಳನ್ನು ಇಸ್ರೇಲಿ ಟ್ಯಾಂಕುಗಳು ಸುತ್ತುವರಿದಿವೆ. ಅವುಗಳ ಮೇಲೆ ನಿರಂತರ ಷೆಲ್ ದಾಳಿ ನಡೆಸಿವೆ. ಇಸ್ರೇಲಿ ಪ್ರಧಾನಿ ಷರೋನ್ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ನಿರ್ಣಯಗಳನ್ನು, ಪ್ರಪಂಚದ ರಾಷ್ಟ್ರಗಳ ಕಳಕಳಿಯ ಮನವಿಗಳನ್ನು ಧಿಕ್ಕರಿಸಿ ಸೈನಿಕ ಕಾರ್ಯಾಚರಣೆ ಮುಂದುವರಿಸುತ್ತಿರುವುದರ ಜೊತೆಗೆ, ಉದ್ಧಟತನದಿಂದ ಯಾಸೆರ್ ಅರಾಫತ್‌ರನ್ನು ಗಡೀಪಾರು ಮಾಡಲು ಹವಣಿಸುತ್ತಿದ್ದಾರೆ. ಅರಾಫತ್‌ರವರಿಗೆ ಪ್ರಾಣಭೀತಿ ಒಡ್ಡಿ, ರಕ್ಷಣೆ ಬೇಕಾದರೆ ಅವರು ಮರಳಿಬಾರದೆ ದೇಶದಿಂದ ಹೊರಗೆಹೋಗಲು ಅಡ್ಡಿ ಇಲ್ಲ ಎಂದು ಹೇಳಿದ್ದಾರೆ. ಆದರೆ ಅರಾಫತ್ ಇವಾವ ಬೆದರಿಕೆಗೂ ಜಗ್ಗದೆ ದೃಢವಾಗಿ ತನ್ನ ಜನರ ಮಧ್ಯದಲ್ಲೇ ಉಳಿಯಲು ನಿರ್ಧರಿಸಿದ್ದಾರೆ.

ಇಂದು ಉದ್ಭವಿಸಿರುವ ಪರಿಸ್ಥಿತಿ ಏಕಾಏಕಿ ಉಂಟಾದುದಲ್ಲ. ಅದು ಭಯೋತ್ಪಾದನೆಯ ವಿರುದ್ಧ ಇಸ್ರೇಲ್ ನಡೆಸುತ್ತಿರುವ ಸಮರವೂ ಅಲ್ಲ. ಅದು ಪ್ಯಾಲೆಸ್ಟೈನ್ ಜನರ ಸ್ವತಂತ್ರ ರಾಷ್ಟ್ರದ ಸ್ಥಾಪನೆಯ ಆಸೆ ಆಕಾಂಕ್ಷೆಗಳನ್ನು ನೆತ್ತರ ಮಡುವಿನಲ್ಲಿ ಮುಳುಗಿಸಿ ದಮನಿಸಲು ಇಸ್ರೇಲ್ ನಡೆಸಿರುವ ಯೋಜಿತ ಸಂಚು. ಸುತ್ತಲ ಅರಬ್ ರಾಷ್ಟ್ರಗಳ ಅನೈಕ್ಯತೆ ಹಾಗೂ ನಿಷ್ಕ್ರಿಯತೆ ಇಸ್ರೇಲಿನ ದುರಾಕ್ರಮಣಕಾರರಿಗೆ ಕುಮ್ಮಕ್ಕು ನೀಡಿದಂತಾಗಿದೆ. ಇಸ್ರೇಲಿ ಸರಕಾರ ನಡೆಸುತ್ತಿರುವ ಮಾರಣಹೋಮದ ವಿರುದ್ಧ ಅರಬ್ ದೇಶಗಳು ಪ್ರತಿಭಟಿಸದೆ, ಕ್ರಮ ಕೈಗೊಳ್ಳದೆ ಕೈಕಟ್ಟಿ ಕುಳಿತಿವೆ. ಅಮೆರಿಕ ಸರಕಾರದ ಮೇಲೆ ಒತ್ತಡ ತಂದು ಇಸ್ರೇಲನ್ನು ಹದ್ದುಬಸ್ತಿನಲ್ಲಿರಿಸಲು ಕ್ರಮ ತೆಗೆದುಕೊಳ್ಳಲೂ ಈ ರಾಷ್ಟ್ರಗಳು ಸೊಲ್ಲೆತ್ತದಿರುವುದು ವಿಷಾದಕರ. ಅಮೆರಿಕದ ಬುಷ್ ಸರಕಾರ ಯಾವತ್ತಿನಂತೆ ಈ ವಿಷಯದಲ್ಲಿ ದ್ವಿಮುಖ ನೀತಿ ಅನುಸರಿಸುತ್ತಿದೆ. ಇಸ್ರೇಲಿ ಸೈನಿಕ ಕಾರ್ಯಾಚರಣೆಯನ್ನು ಸಮರ್ಥಿಸಿರುವ ಬುಷ್ ಸರಕಾರ ಈಗ ಔಪಚಾರಿಕವಾಗಿ ಪ್ಯಾಲೆಸ್ಟೈನ್ ಪ್ರದೇಶದಿಂದ ಇಸ್ರೇಲ್ ಸೈನ್ಯವನ್ನು ಹಿಂತೆಗೆದುಕೊಳ್ಳಬೇಕೆಂದು ಕರೆ ನೀಡಿದೆ. ಭಯೋತ್ಪಾದಕ ಕೃತ್ಯಗಳನ್ನು ತಡೆಯಲು ಅರಾಫತ್ ಕ್ರಮ ಕೈಗೊಳ್ಳಬೇಕೆಂದೂ ಕರೆ ನೀಡಿರುವ ಅಮೆರಿಕ ದುರಾಕ್ರಮಣ ನಡೆಸುತ್ತಿರುವ ಇಸ್ರೇಲನ್ನು ಹಾಗೂ ಆಕ್ರಮಣಕ್ಕೀಡಾಗಿರುವ ಪ್ಯಾಲಸ್ತೀನಿಯರನ್ನು ಒಂದೇ ತಕ್ಕಡಿಯಲ್ಲಿರಿಸಿದೆ. ತನ್ನ ಮಿತ್ರ ಬುಷ್‌ರ ಕರೆ ಎಷ್ಟು ಗಂಭೀರವಾದ್ದು ಎಂದು ಅರಿತಿರುವ ಇಸ್ರೇಲಿ ಪ್ರಧಾನಿ ಷರೋನ್ ಅದನ್ನು ತಿರಸ್ಕರಿಸಿದ್ದಾರೆ.

ವಾಜಪೇಯಿ ನೇತೃತ್ವದಲ್ಲಿರುವ ಎನ್‌ಡಿಎ ಸರಕಾರ ಈ ಪರಿಸ್ಥಿತಿಯಲ್ಲಿ ಪ್ಯಾಲಸ್ಟೈನನ ಪರವಾಗಿ ಕ್ರಮ ತೆಗೆದುಕೊಳ್ಳಲು ಮೀನಾ ಮೇಷ ಎಣಿಸಿರುವುದು ಖಂಡನೀಯ. ಹೊಸದಾಗಿ ಇಸ್ರೇಲಿನೊಂದಿಗೆ ಮೈತ್ರಿ ಬೆಳೆಸಿಕೊಂಡಿರುವ ವಾಜಪೇಯಿ ಸರಕಾರ ಭಯೋತ್ಪಾದನೆಯ ವಿರುದ್ಧದ ಹೋರಾಟದ ಹೆಸರಿನಲ್ಲಿ ಅಮೆರಿಕ ತಳೆದಿರುವ ಧೋರಣೆಯನ್ನೇ ತಳೆದಿರುವುದು ವಿಷಾದಕರ. ಭಾರತ ಯಾವತ್ತೂ ಪ್ಯಾಲಸ್ಟೈನ್ ಜನರ ಹೋರಾಟಕ್ಕೆ ಬೆಂಬಲ ನೀಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಕಳೆದ ಅರ್ಧ ಶತಮಾನದಿಂದ ಸ್ವತಂತ್ರ ಪ್ಯಾಲೆಸ್ಟೈನ್ ರಾಜ್ಯದ ಸ್ಥಾಪನೆಗಾಗಿ ಹೋರಾಡುತ್ತ ಬಂದಿರುವ ಯಾಸೆರ್ ಅರಾಫತ್ ನೇತೃತ್ವದ ಪ್ಯಾಲೆಸ್ಟೈನ್ ವಿಮೋಚನಾ ಸಂಸ್ಥೆ ಎದುರಿಸಿರುವ ದಬ್ಬಾಳಿಕೆಗಳು ಒಂದಲ್ಲ ಎರಡಲ್ಲ. ಅಮೆರಿಕದ ಪೋಷಣೆಯಲ್ಲಿ ಆರ್ಥಿಕವಾಗಿ ಸೈನಿಕವಾಗಿ ಪ್ರಬಲಗೊಂಡಿರುವ ಇಸ್ರೇಲ್ ಅಂತರರಾಷ್ಟ್ರೀಯ ಒತ್ತಡಗಳಿಗೆ ಮಣಿದು ಪ್ಯಾಲೆಸ್ಟೈನ್ ವಿಮೋಚನಾ ಸಂಸ್ಥೆಯ ನಾಯಕರೊಂದಿಗೆ ಮಾತುಕತೆಗಳಲ್ಲಿ ತೊಡಗಬೇಕಾಯಿತು. ದೀರ್ಘಕಾಲದ ಜುಗ್ಗಾಟದ ಪರಿಣಾಮವಾಗಿ ಬಲವಂತದಿಂದ ಇಸ್ರೇಲ್ ಪ್ಯಾಲೆಸ್ಟೈನ್ ರಾಜ್ಯದ ಸ್ಥಾಪನೆಗೆ ಪೂರ್ವಭಾವಿಯಾಗಿ ಪ್ಯಾಲಸ್ತೀನಿಯರಿಗೆ ಸೇರಿದವೆಂದು ಗುರ್ತಿಸಿದ್ದ ಪ್ರದೇಶದಲ್ಲಿ ಸ್ವಯಮಾಡಳಿತೆ ನೀಡಲು ಸಮ್ಮತಿಸಬೇಕಾಯಿತು. ಈ ಶಾಂತಿ ಸೂತ್ರ ಹುಟ್ಟಿದಾರಭ್ಯ ಒಂದಲ್ಲ ಒಂದು ತಕರಾರುಗಳಿಂದಲೇ ಕೂಡಿತ್ತು. ಅದನ್ನು ಹುಟ್ಟು ಹಾಕುತ್ತಿದ್ದುದು ಕೂಡ ಇಸ್ರೇಲ್. ಸಣ್ಣ ಪುಟ್ಟ ಘಟನೆಗಳನ್ನು ದೊಡ್ಡದು ಮಾಡಿ, ಭಯೋತ್ಪಾದಕ ಕೃತ್ಯ ಎಂದು ಬಣ್ಣಿಸಿ ಇಸ್ರೇಲ್ ಯಾಸೆರ್ ಅರಾಫತ್ ಸರಕಾರಕ್ಕೆ ಕಿರುಕುಳ ಕೊಡುತ್ತಲೇ ಇತ್ತು. ಮುಂದಿನ ಯಥಾರ್ಥವಾದ ಬೆಳವಣಿಗೆಯನ್ನು ತಡೆಯಲು ಸಮಯ ಕಾಯುತ್ತಲೇ ಇದ್ದ ಇಸ್ರೇಲಿ ನಾಯಕರಿಗೆ ಭಯೋತ್ಪಾದನೆಯ ವಿರುದ್ಧ ಹಿರಿಯಣ್ಣ ಅಮೆರಿಕದ ಅಧ್ಯಕ್ಷ ಬುಷ್ ಆರ್ಭಟದಿಂದ ಸಾರಿದ ಭಯೋತ್ಪಾದನೆಯ ವಿರುದ್ಧ ಸಮರ ಸದವಕಾಶ ನೀಡಿತು. ಪ್ಯಾಲೆಸ್ಟೈನ್ ರಾಜ್ಯದ ಸ್ಥಾಪನೆಯನ್ನು ಮೊಳಕೆಯಲ್ಲೇ ಚಿವುಟಿ ಹಾಕಲು ಭಯೋತ್ಪಾದನೆಯ ವಿರುದ್ಧ ಸಮರ ಹೂಡಿಕೆ ಒಳ್ಳೆಯ ನೆಪವಾಯಿತು.

ಭಯೋತ್ಪಾದನೆಯ ವಿರುದ್ಧ ಸಮರದ ಹೆಸರಿನಲ್ಲಿ ಅಮೆರಿಕ ಸರಕಾರ ಜೋಡಿಸಿದ ರಾಷ್ಟ್ರಗಳ ಐಕ್ಯತೆಯ ಸಂದರ್ಭದಲ್ಲಿ ಅರಬ್ ರಾಷ್ಟ್ರಗಳ ಮನವೊಲಿಸುವ ದೃಷ್ಟಿಯಿಂದ ಅಮೆರಿಕ ಮತ್ತು ಬ್ರಿಟನ್‌ಗಳು ಮೊಟ್ಟಮೊದಲ ಬಾರಿಗೆ ಪ್ರತ್ಯೇಕ ರಾಷ್ಟ್ರದ ಸ್ಥಾಪನೆಯ ಪ್ಯಾಲಸ್ತೀನಿಯನ್ನರ ಹಕ್ಕಿಗೆ ಮಾನ್ಯತೆ ನೀಡಿ ತಮ್ಮ ಬೆಂಬಲ ಸೂಚಿಸಿದವು. ವಿಶ್ವಸಂಸ್ಥೆಯಲ್ಲೂ ಕೂಡ ಪ್ಯಾಲಸ್ತೀನಿಯನ್ನರ ಹಕ್ಕಿಗೆ ಬೆಂಬಲ ಸೂಚಿಸಿದವು. ಈ ಬೆಳವಣಿಗೆಗಳು ಇಸ್ರೇಲಿ ನಾಯಕರಿಗೆ ಕಹಿಗುಳಿಗೆಯಾಗಿತ್ತು. ಭಯೋತ್ಪಾದಕತೆಯ ವಿರುದ್ಧ ಅಮೆರಿಕ ಆಫ್ಘಾನಿಸ್ತಾನದ ಮೇಲೆ ನಡೆಸಿದ ಯುದ್ಧದಿಂದ ಇಸ್ರೇಲ್ ತನಗೆ ಅನುಕೂಲವಾಗುವಂಥ ಪಾಠ ಕಲಿಯಿತು. ಈಗ ಅದೇ ತಂತ್ರವನ್ನು ಇಸ್ರೇಲ್ ಪ್ಯಾಲಸ್ತೀನೀಯರ ಮೇಲೆ ಪ್ರಯೋಗಿಸುತ್ತಿದೆ. ಭಯೋತ್ಪಾದನೆಯನ್ನು ನಿಗ್ರಹಿಸುವುದರಲ್ಲಿ ಅರಾಫತ್ ಸರಕಾರ ಸೋತಿದೆ ಎಂದು ಆರೋಪಿಸಿ ಇಸ್ರೇಲ್ ತನ್ನ ಸೈನವನ್ನು ಮತ್ತು ಟ್ಯಾಂಕುಗಳನ್ನು, ಹೆಲಿಕಾಪ್ಟರ್ ಗನ್‌ಷಿಪ್‌ಗಳನ್ನು ಪ್ಯಾಲೆಸ್ತೀನ್ ಪ್ರದೇಶದ ಮೇಲೆ ನುಗ್ಗಿಸಿ ದಾಂಧಲೆ ನಡೆಸುತ್ತಿದೆ. ಈಗಾಗಲೇ ಅದು ಸಹಸ್ರಾರು ಮಂದಿ ಅಮಾಯಕ ಪ್ಯಾಲಸ್ತೀನಿಯನ್ನರನ್ನು ಆಹುತಿ ತೆಗೆದುಕೊಂಡಿದೆ. ಪ್ಯಾಲೆಸ್ಟೈನ್ ವಿಮೋಚನಾ ಸಂಸ್ಥೆಯು ಮತ್ತೆ ತಲೆ ಎತ್ತದಂತೆ ಸದೆಬಡಿಯುವುದೇ ಇಸ್ರೇಲಿ ಕಾರ್ಯಾಚರಣೆಯ ಗುರಿ. ಅದಕ್ಕೆ ಅಮೆರಿಕದ ಕುಮ್ಮಕ್ಕೂ ಇದೆ.

ಇಂಥ ಪರಿಸ್ಥಿತಿಯಲ್ಲಿ ಎಲ್ಲ ಪ್ರಜಾಪ್ರಭುತ್ವವಾದಿ ಶಾಂತಿಪ್ರಿಯ ರಾಷ್ಟ್ರಗಳೂ ಇಸ್ರೇಲಿನ ಮೇಲೆ ಒತ್ತಾಯ ತಂದು, ಆರ್ಥಿಕ ದಿಗ್ಬಂಧನ ಮೊದಲಾದ ಕ್ರಮಗಳನ್ನು ಕೈಗೊಂಡು ಸೈನ್ಯ ಕಾರ್ಯಾಚರಣೆ ನಿಲ್ಲಿಸುವಂತೆ, ಸೈನ್ಯಗಳನ್ನು ಹಿಂತೆಗೆದುಕೊಳ್ಳುವಂತೆ ಮಾಡುವುದು ಅಗತ್ಯವಾಗಿದೆ. ಪ್ಯಾಲೆಸ್ಟೈನ್ ಜನರ ಸ್ವಾತಂತ್ರ್ಯದ ಅಪೇಕ್ಷೆಯನ್ನು ಹತ್ತಿಕ್ಕುವ ಕನಸನ್ನು ಇಸ್ರೇಲಿ ನಾಯಕರು ಕಾಣುತ್ತಿದ್ದರೆ ಅದೊಂದು ಭ್ರಮೆ ಅಷ್ಟೆ. ಹೋರಾಟದಿಂದಲೇ ಬದುಕು ಸಾಗಿಸುತ್ತಿರುವ ಸ್ವಾತಂತ್ರ್ಯಾಪೇಕ್ಷಿ ಜನತೆಯನ್ನು ದಮನಗೊಳಿಸಲು ಪ್ರಪಂಚದ ಯಾವ ಶಕ್ತಿಯಿಂದಲೂ ಸಾಧ್ಯವಿಲ್ಲ. ಅಂತೆಯೇ ಪ್ಯಾಲಸ್ತೀನಿಯನ್ನರ ಸ್ವಾತಂತ್ರ್ಯ ಹೋರಾಟ ಅಜೇಯ. ❑

# ಮಧ್ಯಯುಗದ ಅದಿಲ್‌ಷಾಹಿ ಆಳ್ವಿಕೆ - ಧನಾತ್ಮಕ ಅಂಶಗಳು

ಮ. ಶ್ರೀ. ಮುರಳಿ ಕೃಷ್ಣ

ಇತಿಹಾಸವೆಂದರೆ ಆಳಿದ, ಅಳಿದ ರಾಜ, ಮಹಾರಾಜ, ಚಕ್ರವರ್ತಿಗಳ, ಅವರ ವಂಶಗಳ ಕಾಲಗಣನೆಯ ಶಾಸ್ತ್ರವಲ್ಲ. ಆಯಾ ಕಾಲಘಟ್ಟದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಆಗು-ಹೋಗುಗಳನ್ನು ಸಮಗ್ರವಾಗಿ, ಆಳವಾಗಿ ವಿಶ್ಲೇಷಿಸುವ ಅಧ್ಯಯನಾ ಕ್ರಮ. ಬ್ರಿಟೀಶರು ನಮ್ಮ ದೇಶವನ್ನು ಆಳುತ್ತಿದ್ದಾಗ, ಒಡೆದು-ಆಳುವ ತಮ್ಮ ನೀತಿಗೆ ಅನುಗುಣವಾಗಿ ಇತಿಹಾಸವನ್ನು ವ್ಯಾಖ್ಯಾನಿಸಿದರು. ಅಂತಹವುಗಳಲ್ಲಿ ಮುಖ್ಯವಾದದ್ದೆಂದರೆ ಮಧ್ಯಯುಗೀನ ಹಿಂದು-ಮುಸಲ್ಮಾನರ ಸಂಬಂಧ.

ಪ್ರಾಚೀನ ಕಾಲದಲ್ಲಿ ಆರ್ಯರು, ಸಿಥಿಯನ್ನರು, ಪಾರ್ಥಿಯನ್ನರು, ಗ್ರೀಕರು, ಶಕರು, ಹೂಣರು, ಮಧ್ಯಯುಗದಲ್ಲಿ ಅರಬರು, ಪರ್ಷಿಯನ್ನರು, ಆಫ್ಘನ್ನರು, ಮೊಗಲರು... ಹಾಗೂ ಆಧುನಿಕ ಯುಗದಲ್ಲಿ ಆಂಗ್ಲರು, ಡಚ್ಚರು, ಫ್ರೆಂಚರು ಹಾಗೂ ಪೋರ್ಚುಗೀಸರು ಭಾರತಕ್ಕೆ ಆಗಮಿಸಿ, ವಿಶಿಷ್ಟವಾದ ಪ್ರಭಾವಗಳನ್ನು ಬೀರಿ, ಒಂದು ಬಹುಮುಖಿ ಸಂಸ್ಕೃತಿಯ ಸ್ಥಾಪನೆಗೆ ಕಾರಣಕರ್ತರಾದರು.

ವಿವಿಧತೆಯಲ್ಲಿ ಏಕತೆ ನಮ್ಮ ದೇಶದ ಜೀವಾಳ. ಸಂಸ್ಕೃತಿಯ ವಿಷಯದಲ್ಲಂತೂ ಅನೇಕ ಸ್ತರಗಳಲ್ಲಿ ಕೊಡುಕೊಳ್ಳುವ ವಿವಿಧ ಪ್ರಕ್ರಿಯೆಗಳು ಜರುಗಿರುವುದರ ಅನೇಕ ನಿದರ್ಶನಗಳು ಲಭ್ಯ. ಹೀಗಿರುವಾಗ ಇತ್ತೀಚಿನ ಕೆಲವು ವರ್ಷಗಳಲ್ಲಿ ಇತಿಹಾಸವನ್ನು ತಿರುಚುವ, ಬಹುಮುಖಿ ಸಂಸ್ಕೃತಿಗೆ ಭಂಗ ತರುವ ಕೆಲವು ದುಷ್ಟ ಕಾರ್ಯಗಳು ಜರುಗಿರುವುದು ಆತಂಕಕಾರಿ ಬೆಳವಣಿಗೆ. ಇದು ಹಿಂದು-ಮುಸಲ್ಮಾನರ ನಡುವೆ ವೈಷಮ್ಯವನ್ನು ಹೆಚ್ಚಿಸುವ ಹುನ್ನಾರ ಹೂಡಿದ ಬ್ರಿಟೀಶರು, ಅದರಲ್ಲೂ ಮುಖ್ಯವಾಗಿ ಅವರ ಇತಿಹಾಸಕಾರರು ಚರಿತ್ರೆಯನ್ನು ತಿರುಚಿದಂತಹ ಹೀನ ಕೃತ್ಯಗಳ ಮುಂದುವರಿಕೆ. ಟಿಪ್ಪುಸುಲ್ತಾನನ ದ್ವಿಶತಮಾನೋತ್ಸವದ ಸಂದರ್ಭದಲ್ಲಿ ಮತಾಂಧರಿಂದ ನಡೆದ ಅಪಪ್ರಚಾರ ಇದಕ್ಕೆ ಸೂಕ್ತ ಉದಾಹರಣೆ. ಆದ್ದರಿಂದ, ಇತಿಹಾಸವನ್ನು ವಸ್ತುನಿಷ್ಠೆಯಿಂದ ಅಭ್ಯಸಿಸುವುದರಿಂದ ಈ ರೀತಿಯ ದುಷ್ಪ್ರಚಾರಕ್ಕೆ ಸರಿಯಾದ ಸವಾಲುಗಳನ್ನು ಒಡ್ಡಬಹುದು.

ಮಧ್ಯಯುಗದಲ್ಲಿ ನಮ್ಮ ರಾಜ್ಯವನ್ನಾಳಿದ ಪ್ರಮುಖ ರಾಜವಂಶಗಳಲ್ಲಿ ಅದಿಲ್‌ಷಾಹಿ ವಂಶವೂ ಒಂದು.

ಸುಮಾರು ಎರಡು ಶತಮಾನಗಳ ಕಾಲ ಆಳಿದ ಈ ರಾಜವಂಶದ ಸುಲ್ತಾನರು ವಿಜಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಇಂದು ವಿಜಾಪುರದಲ್ಲಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನೆಲೆಸಿರುವ ಹಿಂದು ಹಾಗೂ ಮುಸಲ್ಮಾನರ ನಡುವಿನ ಬಾಂಧವ್ಯ ಅಪೂರ್ವ. ''ಕಾದರ ಲಿಂಗನಿಗೆ ಸಾವಿರ ಸಲಾಂ'' ಎನ್ನುವ ಈ ಪ್ರದೇಶದ ಮಂದಿ ಭಾವೈಕ್ಯತೆಯ ಪ್ರತೀಕ. ಹಿಂದು ಹಬ್ಬಗಳಲ್ಲಿ ಮುಸಲ್ಮಾನರು ಭಾಗಿಯಾಗುತ್ತಾರೆ. ಹಿಂದುಗಳೂ ಅಷ್ಟೆ, ಮುಸಲ್ಮಾನರ ಉತ್ಸವಗಳಲ್ಲಿ ಮುಖ್ಯ ಪಾತ್ರ ವಹಿಸುತ್ತಾರೆ. ಮಾನವರ ನಡುವೆ ಇಲ್ಲಿ ಕಂದರಗಳು, ತಡೆಗೋಡೆಗಳು ಹೆಚ್ಚಾಗಿ ಕಾಣುವುದಿಲ್ಲ. ಪರಸ್ಪರ ಹೊಂದಿಕೊಂಡು ಜೀವನ ಸಾಗಿಸುವ ಉದಾತ್ತ ಭಾವನೆಗಳಿವೆ. ಈ ರೀತಿಯ ಸಹಬಾಳ್ವೆ ಇತರರಿಗೆ ಸೂಕ್ತ ಮಾದರಿ. ಈ ಸಮೃದ್ಧ ಹಾಗೂ ಸಮ್ಮಿಶ್ರ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆ ಕೊಟ್ಟವರು ಅದಿಲ್‌ಷಾಹಿ ರಾಜವಂಶದ ಸುಲ್ತಾನರು.

ಈ ಸುಲ್ತಾನರು ಶೂರರಾಗಿದ್ದರು. ಚೊಕ್ಕವಾಗಿ ಆಡಳಿತ ನಡೆಸುತ್ತಿದ್ದರು. ರಾಜ್ಯ ವಿಸ್ತರಣ, ಶತ್ರುಗಳಿಂದ ರಾಜ್ಯದ ರಕ್ಷಣೆ, ಕಚ್ಚಾವಸ್ತುಗಳ ವೃದ್ಧಿ ಹಾಗೂ ಕ್ರೋಡೀಕರಣ, ವ್ಯಾಪಾರ ವಹಿವಾಟುಗಳಿಗೆ ಸರಿಯಾದ ವ್ಯವಸ್ಥೆ, ಕಲೆ, ಸಾಹಿತ್ಯ, ಸಂಗೀತ, ವಾಸ್ತುಶಿಲ್ಪ, ನೃತ್ಯ, ಮುಂತಾದವುಗಳಿಗೆ ಪ್ರೋತ್ಸಾಹ, ನಾಗರಿಕ ಸೌಲಭ್ಯಗಳಿಗೆ ಆದ್ಯತೆ... ಇವು ಅವರ ಆಡಳಿತದ ಗಮನಾರ್ಹ ಅಂಶಗಳು.

ಇವರ ಆಡಳಿತದಲ್ಲಿ ಜನರ ಜೀವನದ ಮಟ್ಟ ಚೆನ್ನಾಗಿತ್ತು. ವಿದೇಶಗಳೊಡನೆ ವ್ಯಾಪಾರ ನಡೆಸಲು ಅನೇಕ ಸೌಕರ್ಯಗಳನ್ನು ಒದಗಿಸಿದ್ದರು. ಯುರೋಪಿನ ಕೆಲವು ದೇಶಗಳಿಗೆ, ಮಧ್ಯ ಏಷ್ಯಾ, ಅರೇಬಿಯಾ, ಪರ್ಷಿಯಾ ಮುಂತಾದ ನಾಡುಗಳಿಗೆ ತೆಂಗಿನಕಾಯಿ, ಮೆಣಸು, ಬಟ್ಟೆ, ಅಕ್ಕಿ, ಪೆಟ್ಲುಪ್ಪು, ಹತ್ತಿ, ಏಲಕ್ಕಿ, ಇತ್ಯಾದಿ ಪದಾರ್ಥಗಳನ್ನು ರಫ್ತು ಮಾಡಲಾಗುತ್ತಿತ್ತು. ಗ್ರಾಹಕ ವಸ್ತುಗಳ ತಯಾರಿಕೆಯಲ್ಲಿ ಹೆಚ್ಚಳ ಕಂಡು ಬಂದಿತು. ನಗರೀಕರಣಕ್ಕೆ ಚಾಲನೆ ಸಿಕ್ಕಿತು. ಕೈಗಾರಿಕಾ ಚಟುವಟಿಕೆಗಳು ಜಾಸ್ತಿಯಾಗಿ, ಉತ್ಪಾದಿತ ಪದಾರ್ಥಗಳ ಗುಣಮಟ್ಟ ಹೆಚ್ಚಿತು. ಗಣಿ ಉದ್ಯಮ ಅಭಿವೃದ್ಧಿ ಹೊಂದಿತು. ಚಿನ್ನ, ಬೆಳ್ಳಿ, ವಜ್ರ ಮುಂತಾದ ಬೆಲೆಬಾಳುವ ವಸ್ತುಗಳಿಂದ ರಾಜ್ಯದ ಸಂಪತ್ತು ವೃದ್ಧಿ ಹೊಂದಿತು. ಬೇಸಾಯವು ಕೆರೆ, ಕಾಲುವೆಗಳ ನಿರ್ಮಾಣದಿಂದ ಬೆಳೆಯಿತು. ಗ್ರಾಮೀಣ ಜನರ ಜೀವನ ಮಟ್ಟ ಸುಧಾರಿಸಿತು.



ಪ್ರವಾಸಿಗರನ್ನು ಮೂಕವಿಸ್ಮಿತರನ್ನಾಗಿಸುವ ವಿಶ್ವವಿಖ್ಯಾತ ಗೋಳಗುಮ್ಮಟ

ಅನ್ಯ ದೇಶಗಳಿಂದ ವಲಸೆ ಬಂದ ಕುಶಲವೃತ್ತಿಕಾರರಿಂದ ಹೊಸ ಕಲೆಗಳು, ಕಸುಬುಗಳು ಪರಿಚಯವಾದವು. ಕೋಟೆ, ಮಹಲು, ಮಸೀದಿ, ರಸ್ತೆ, ಸೇತುವೆ, ಕಾಲುವೆ, ಕೆರೆ, ನಾಲೆ, ಕಟ್ಟಡಗಳು.. ಮುಂತಾದವುಗಳ ಬೃಹತ್ ಪ್ರಮಾಣದ ನಿರ್ಮಾಣ ಕಾರ್ಯಗಳಿಂದ ಅನೇಕ ಕಾರ್ಮಿಕರಿಗೆ ನೌಕರಿ ಲಭಿಸಿದವು. ಈ ಬೆಳವಣಿಗೆಯಿಂದ ವಿಜಾಪುರ ರಾಜ್ಯ ಇಡೀ ಭಾರತದ ಗಮನ ಸೆಳೆದಿತ್ತು.

ಅದಿಲ್‌ಷಾಹಿ ರಾಜ್ಯದ ಸಂಸ್ಥಾಪಕ ಯುಸುಫ್ ಅದಿಲ್ ಖಾನ್ (೧೪೮೯-೧೫೧೦) ಎಲ್ಲಾ ಧರ್ಮಗಳನ್ನು ಸಮಾನವಾಗಿ ಕಾಣುವ ದೂರದರ್ಶಿತ್ವ ಹೊಂದಿದ್ದ. ಮುಸಲ್ಮಾನರು– ಹಿಂದುಗಳೆಂಬ ಭೇದ-ಭಾವಗಳಿಗೆ ಆಸ್ಪದ ಕೊಡುತ್ತಿರಲಿಲ್ಲ. ಬಹುಮನಿ ಸೇನೆಯ ಮರಾಠ ಸರದಾರ ಮುಕುಂದ ರಾವ್‌ನ ಸಹೋದರಿಯನ್ನು ವಿವಾಹವಾಗಿ, ತಾನೇ ಸ್ವತಃ ಪ್ರಜೆಗಳಿಗೆ ಮಾದರಿಯಾಗಿದ್ದ. ಅವನ ಆಡಳಿತಾವಧಿಯಲ್ಲಿ ಹಿಂದುಗಳು ಕಂದಾಯ ಅಧಿಕಾರಿಗಳಾಗಿದ್ದರು. ಅನೇಕ ಹಿಂದುಗಳು ಆಸ್ಥಾನದಲ್ಲಿ ಗಣ್ಯ ಸ್ಥಾನಗಳನ್ನಲಂಕರಿಸಿದ್ದರು. ಪ್ರತಿಭೆಗೆ ಮನ್ನಣೆ ಸಿಗುತ್ತಿತ್ತು.

ಎರಡನೇ ಇಬ್ರಾಹಿಂ ಅದಿಲ್‌ಷಾನ (೧೫೮೦-೧೬೨೭) ದೀರ್ಘ ರಾಜ್ಯಭಾರ ಈ ರಾಜವಂಶಕ್ಕೆ ಕೀರ್ತಿ ತಂದಿತು. ಈತ ಮಾನವತೆಗೆ ಒತ್ತು ಕೊಡುತ್ತಿದ್ದ ಸುಲ್ತಾನನಾಗಿದ್ದ. ಸರ್ವ ಧರ್ಮಗಳನ್ನು ಸಮಭಾವದಿಂದ ಕಾಣುತ್ತಿದ್ದ. ಪ್ರಜೆಗಳ ಹಿತರಕ್ಷಣೆಗೆ ಆದ್ಯತೆ ನೀಡಿದ. ಸಕಲ ಕಲೆಗಳ ಪೋಷಕನಾಗಿ, ಆ ಕಾಲದಲ್ಲಿ, ಇಡೀ

ಭಾರತ ದೇಶಕ್ಕೆ ಮಾದರಿಯಾಗಿದ್ದನು. ಅವನ ಆಸ್ಥಾನದಲ್ಲಿ ಕವಿಗಳು, ಕಲಾವಿದರು, ಸಾಹಿತಿಗಳು, ಇತಿಹಾಸಕಾರರು, ಸಂಗೀತಕಾರರು, ವಾಸ್ತುಶಿಲ್ಪಿಗಳು, ಚಿತ್ರಕಾರರಿಗೆ ನೆಲೆ ಸಿಕ್ಕಿದ್ದಿತು. ಅವರಲ್ಲಿ ಅನೇಕರು ವಿದೇಶಿಯರಾಗಿದ್ದರು. ಕೋಟೆ, ಮಹಲ್ ಹಾಗೂ ಗೋರಿಗಳಲ್ಲದೆ, ನಾಗರಿಕರ ಹಿತದೃಷ್ಟಿಯಿಂದ ಬಾವಿ, ಜಲಾಶಯಗಳನ್ನು ಕಟ್ಟಿಸಿದನು. ಈತ ಕಟ್ಟಿಸಿದ ತಾಜ್ ಬಾವ್‌ಡಿ ಎಂಬ ದೊಡ್ಡ ಬಾವಿಯನ್ನು ಬಿಜಾಪುರದಲ್ಲಿ ಇಂದೂ ಸಹ ಕಾಣಬಹುದು.

ಈತ ಒಬ್ಬ ಶ್ರೇಷ್ಠ ಕವಿ, ಸಂಗೀತಕಾರ, ವರ್ಣಚಿತ್ರ ಕಲಾವಿದ, ಅಲಂಕಾರ ಲಿಪಿತಜ್ಞ ಹಾಗೂ ಚತುರ ಚದುರಂಗದಾಟಗಾರನೂ ಆಗಿದ್ದನು. ಪ್ರಜೆಗಳು ಗೌರವದಿಂದ ಈತನನ್ನು ''ಅಸಹಾಯಕರ ರಕ್ಷಕ, ಜಗತ್ತಿಗೆ ಗುರು'' ಎಂದು ಗುಣಗಾನ ಮಾಡಿ ''ಜಗದ್ಗುರು'' ಎಂಬ ಬಿರುದನ್ನು ನೀಡಿದ್ದರು. ಜನರ ಈ ಪ್ರೀತಿಗೆ ಹೃದಯ ತುಂಬಿ ಇಬ್ರಾಹಿಂ ಚಿನ್ನದ ನಾಣ್ಯ ''ಹೊನ್-ಎ-ನೌರಸ್'' ಮೇಲೆ ಈ ಬಿರುದನ್ನು ಮುದ್ರಿಸಿದ. ಈತನ ಸಣ್ಣ ವಯಸ್ಸಿನಲ್ಲೇ ರಾಣಿ ಚಾಂದ್‌ಬೀಬಿ ನಾಡು, ನುಡಿ, ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿಗಳ ಬಗ್ಗೆ ಮನದಟ್ಟು ಮಾಡಿದ್ದಳು. ಮುಂದೆ ಸುಲ್ತಾನನಾದಾಗ ಈ ಎಲ್ಲಾ ಪ್ರಕಾರಗಳಿಗೂ ಉತ್ತೇಜನ ಕೊಟ್ಟನು. ಸಂಗೀತದಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. ''ಕಿತಾಬ್-ಎ-ನೌರಸ್'' ಎಂಬ ಗೀತೆಗಳ ಗ್ರಂಥವನ್ನು ರಚಿಸಿದನು. ಸರಸ್ವತಿ ಹಾಗೂ ಗಣಪತಿಯ ಬಗ್ಗೆ ಗೌರವವಿತ್ತು. ''ಕಿತಾಬ್ - ಎ - ನೌರಸ್'' ಕೃತಿಯ ಪ್ರಾರಂಭದಲ್ಲಿ ಈ ದೇವ-ದೇವತೆಯರ ಸ್ತುತಿಗಳಿವೆ. ಈತ ಕಟ್ಟಿಸಿದ ಇಬ್ರಾಹಿಂ ರೋಜಾ ಎಂಬ ಸ್ಮಾರಕದ ಸಮಾಧಿ ಭವನದ ಮೇಲ್ಗಡೆ ಹಿಂದು ಧರ್ಮದ ಲಾಂಛನ ಇದೆ. ಸಾತ್ ಮಂಜಿಲ್‌ನಾ (ವಿಜಾಪುರ) ಸಮೀಪವಿರುವ ನರಸಿಂಹ ದೇವಾಲಯದ (ದತ್ತ ಮಂದಿರ) ಬಗ್ಗೆ ಈತ ಅಪಾರ ಶ್ರದ್ಧೆ ಹೊಂದಿದ್ದ.

ಅದಿಲ್‌ಷಾಹಿಗಳ ಕಾಲದಲ್ಲಿ ಅರೇಬಿಕ್, ಪರ್ಷಿಯನ್, ದಖ್ಖನಿ ಉರ್ದು (ಮರಾಠಿ, ಹಿಂದಿ, ಪರ್ಷಿಯನ್ ಹಾಗೂ ಅರೇಬಿಕ್ ಭಾಷೆಗಳ ಮಿಶ್ರಣ), ಉರ್ದು ಭಾಷೆಗಳ ಜೊತೆ ಕನ್ನಡ, ಮರಾಠಿ ಹಾಗೂ ಸಂಸ್ಕೃತ ಭಾಷೆಗಳಿಗೂ ಪ್ರಾಮುಖ್ಯತೆ ದೊರೆಯಿತು. ಮೊದಲನೇ ಇಬ್ರಾಹಿಂ ಅದಿಲ್‌ಷಾನ (೧೫೩೫ - ೧೫೫೭) ಕಾಲದಲ್ಲಿ ಮರಾಠಿ ಹಾಗೂ ಕನ್ನಡ ಆಡಳಿತ ಭಾಷೆಗಳಾಗಿದ್ದವು. ಲೆಕ್ಕ ಪತ್ರಗಳೂ ಸಹ ಈ ಭಾಷೆಗಳಲ್ಲಿ ಇರುತ್ತಿದ್ದವು. ಈ ಸುಲ್ತಾನನಿಗೆ ''ಕನ್ನಡ ಜಾಣ'' ಎಂಬ ಬಿರುದಿತ್ತು. ಕನ್ನಡ ಭಾಷೆಯ ಮೇಲಿದ್ದ ಅವನ ಅನುರಾಗ ಹಾಗೂ ಪ್ರೌಢಿಮೆಯ ಜೊತೆ ಈತ ಜನರ ಪ್ರೀತಿಗೆ ಪಾತ್ರನಾಗಿದ್ದನೆಂದು ಈ ವಿಷಯದಿಂದ ಅರಿಯಬಹುದು.

ಆ ಕಾಲದಲ್ಲಿ ಸೂಫಿ ಪಂಥವು ಜನರನ್ನು ಆಕರ್ಷಿಸಿತ್ತು. ಇಸ್ಲಾಂ ಧರ್ಮದ ಅನುಭಾವಿಕ ಆಯಾಮ ಪಡೆದಿತ್ತು ಈ ಪಂಥ. ಸೂಫಿಗಳು ದೇವ ಹಾಗೂ ಮಾನವ ಶ್ರೇಷ್ಠರ ಸಂದೇಶವನ್ನು ನಿಮ್ನ ವರ್ಗಗಳ ಜನರಿಗೂ ತಲುಪಿಸಿದರು. ಅಸಮಾನತೆಯ ನೊಗಕ್ಕೆ ಸಿಕ್ಕಿ ನರಳುತ್ತಿದ್ದ ಈ ವರ್ಗಗಳ ಜನರ ಜೀವನದಲ್ಲಿ ಹೊಸ ಗಾಳಿ ಬೀಸಲು ಶುರುವಾಯಿತು.



*ತಾಜ್‌ಮಹಲ್‌ಗೆ ಮಾದರಿಯಾಗಿದ್ದ ವಿಶಿಷ್ಟ ವಾಸ್ತು ಶಿಲ್ಪದ ಇಬ್ರಾಹಿಂ ರೋಜಾ*

ಅನೇಕರು ಸೂಫಿ ಪಂಥದ ಅನುಯಾಯಿಗಳಾದರು. ಆದರೆ ಅವರು ಹಿಂದಿನ ಬಾಳಿನ ಅನೇಕ ಲಕ್ಷಣಗಳನ್ನು ಉಳಿಸಿಕೊಂಡರು. ಮೊದಲೇ ಹೇಳಿದಂತೆ, ಹಿಂದು ಹಬ್ಬಗಳಲ್ಲಿ ಮುಸಲ್ಮಾನರು ಪಾಲ್ಗೊಳ್ಳುತ್ತಿದ್ದರು. ಹಾಗೆಯೇ ಹಿಂದುಗಳೂ ಸಹ ಮುಸಲ್ಮಾನರ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ''ಶಬ್-ಎ-ಬರಾತ್'' ಎನ್ನುವುದು ಶಿವರಾತ್ರಿಯನ್ನು ನೆನಪಿಗೆ ತರುತ್ತಿತ್ತು. ಪಟಾಕಿಗಳನ್ನು ಸಿಡಿಸಿ ಸಂಭ್ರಮ ಪಡುತ್ತಿದ್ದರು. ಮೊಹರಂ ಮೆರವಣಿಗೆಯ 'ತಾಜಿಯಾ'ಗಳು ಕೃಷ್ಣ ಲೀಲೆಯ ಆಟಗಳನ್ನು ನೆನಪಿಗೆ ತರುತ್ತಿದ್ದವು. ಅದಿಲ್ ಷಾಹಿಗಳ ಕಾಲದಲ್ಲಿ ದೇಗುಲಗಳನ್ನು ನಾಶ ಮಾಡಿರುವುದರ ಬಗ್ಗೆ ದಾಖಲೆಗಳು ಇಲ್ಲ.

ಒಂದು ಹೊಸ ಧರ್ಮ, ಸಂಸ್ಕೃತಿ ಹಾಗೂ ಕಲೆ ಸ್ಥಳೀಯ ವಿಚಾರಗಳೊಂದಿಗೆ ಮಿಲನವಾಗಿ ಹೊಸ ಆವಿಷ್ಕಾರಗಳಿಗೆ ನಾಂದಿಯಾದವು. ವಿಭಿನ್ನ ಹಿನ್ನಲೆಯುಳ್ಳ ಜನ ಉತ್ತರ ಭಾರತ, ಇರಾನ್, ಮಧ್ಯ ಏಷ್ಯಾ ಹಾಗೂ ಇತರ ದೇಶಗಳಿಂದ ಬಂದು ಸ್ಥಳೀಯರೊಂದಿಗೆ ಬೆರೆತರು. ಪರಿಣಾಮ : ಕಲೆ ಹಾಗೂ ವಾಸ್ತುಶಿಲ್ಪದಲ್ಲಿ ವಿನೂತನ ಶೈಲಿಯ ರಚನಾಕ್ರಮಗಳ ಉಗಮ. ಹಿಂದು ಹಾಗೂ ಇಸ್ಲಾಂ ಕಲೆಗಳು ಪರಸ್ಪರ ಅನೇಕ ಲಕ್ಷಣಗಳನ್ನು ವಿನಿಮಯ ಮಾಡಿಕೊಂಡವು. ಎರಡನೇ ಇಬ್ರಾಹಿಂ ಅದಿಲ್‌ಷಾ ಸುಮಾರು ೧೬೨೦ರಲ್ಲಿ ಕಟ್ಟಿಸಿದ ಮೆಹ್ತರ್ ಮಹಲ್‌ನ (ವಿಜಾಪುರ) ಕುಸುರಿ ಕೆಲಸಗಳನ್ನು ಗಮನಿಸಿದಾಗ ಹಿಂದು ಕಲೆಯ ಪ್ರಭಾವವಾಗಿರುವುದು ಸ್ಪಷ್ಟ. ಇಸ್ಲಾಂ ಕಲೆಯಲ್ಲಿ ಮಾನವಾಕೃತಿಗಳಿಗೆ ಆಸ್ಪದವಿಲ್ಲದಿದ್ದರೂ, ಮಹಮ್ಮದ್ ಆದಿಲ್‌ಷಾ (೧೬೨೬-೧೬೫೬) ಸುಮಾರು ೧೬೪೬ರಲ್ಲಿ ನಿರ್ಮಿಸಿದ ಅಸರ್ ಮಹಲ್‌ನಲ್ಲಿ ಮಾನವ ಚಿತ್ರಗಳಿರುವುದು ಅಚ್ಚರಿಯ ಸಂಗತಿ. ಆ ಕಾಲದಲ್ಲಿದ್ದ ಉದಾರತೆಯ ಆರೋಗ್ಯಕರ ವಾತಾವರಣಕ್ಕೆ ಇದು ಸೂಕ್ತ ದೃಷ್ಟಾಂತ.

ವಿಜಾಪುರದ ಆಗಿನ ಹಿರಿಮೆ, ವೈಭೋಗ, ಅಭಿವೃದ್ಧಿ, ವಾಸ್ತುಶಿಲ್ಪದ ಐಸಿರಿಯ ಬಗ್ಗೆ ಆ ಅವಧಿಯಲ್ಲಿ ಭೇಟಿ ನೀಡಿದ ಇಂಗ್ಲೆಂಡಿನ ರಾಲ್ಫ್ ಫಿಚ್, ಫ್ರಾನ್ಸಿನ ಟ್ರವರ್ನಿಯ, ಇಟಲಿಯ ವರ್ತೆಮ, ಜರ್ಮನಿಯ ಮಂಡೆಸ್ಲೊ ಮುಂತಾದ ಯಾತ್ರಿಕರು ಶ್ಲಾಘಿಸಿದ್ದಾರೆ.

ಅದಿಲ್ ಷಾಹಿಗಳು ಆಳಿದ ಆ ಅವಧಿ ಪುನರುತ್ಥಾನದ ಕಾಲವಾಗಿತ್ತು. ಇಡೀ ವಿಶ್ವದಲ್ಲಿ ಅನೇಕ ಪ್ರಗತಿಗಾಮಿ ಬದಲಾವಣೆಗಳಾಗಿ ಪ್ರತಿಭೆಗೆ ಹಾಗೂ ಪ್ರಯೋಗಶೀಲತೆಗೆ ಮನ್ನಣೆ ಸಿಕ್ಕ ಯುಗ. ಆಗ್ರ, ದೆಹಲಿ, ರೋಂ, ಲಂಡನ್ ಹಾಗೂ ಇನ್ನೂ ಅನೇಕ ಸ್ಥಳಗಳಲ್ಲಿ ನವಚೇತನದ ಗಾಳಿ ಬೀಸಿತು. ವಿಜಾಪುರವೂ ಅದಿಲ್ ಷಾಹಿಗಳ ಕಾಲದಲ್ಲಿ ಇದಕ್ಕೆ ಹೊರತಾಗಿರಲಿಲ್ಲ.

ಕೋಮು ಸೌಹಾರ್ದತೆಯಂತಹ ವಿಚಾರಗಳು ಆಗ ಚಾಲ್ತಿಯಲ್ಲಿರದಿದ್ದರೂ, ಅದಿಲ್‌ಷಾಹಿ ಸುಲ್ತಾನರಿಗೆ ತಮ್ಮ ರಾಜ್ಯದಲ್ಲಿ ಶಾಂತಿ ಹಾಗೂ ಸುವ್ಯವಸ್ಥೆ ನೆಲೆಸುವುದು ಮುಖ್ಯ ಗುರಿಯಾಗಿತ್ತು. ಯುದ್ಧಗಳ ಹೊಡೆತಗಳಿಂದ, ರಾಜಮನೆತನದ ಆಂತರಿಕ ಕಲಹಗಳಿಂದ ಕಂಗೆಟ್ಟಿದ್ದರೂ, ಜನರ ಆಶೋತ್ತರಗಳಿಗೆ ಸ್ಪಂದಿಸುತ್ತಿದ್ದರು.

ಹೀಗೆ, ಈ ಪ್ರಾಂತದಲ್ಲಿ ಸಮ್ಮಿಶ್ರ ಸಂಸ್ಕೃತಿ ಬೆಳೆಯಿತು. ಅದಿಲ್ ಷಾಹಿಗಳ ಭವ್ಯ ಪರಂಪರೆಯನ್ನು ಉಳಿಸಿ, ಬೆಳೆಸುವುದು ನಮ್ಮ ದೇಶದ ಪ್ರಗತಿಯ ಹಿತದೃಷ್ಟಿಯಿಂದ ತೀರಾ ಅವಶ್ಯಕ.

**ಆಕರ ಗ್ರಂಥ** : ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕರ್ನಾಟಕ ಚರಿತ್ರೆ ಪುಸ್ತಕ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೧೦೦, ೨ನೇ 'ಎ' ಕ್ರಾಸ್, ಗವೀಪುರಂ ಬಡಾವಣೆ
ಬೆಂಗಳೂರು-೫೬೦ ೦೧೯

## ಮೋಹಿನಿ

ಕಾವ್ಯವನ್ನು
ಪಿಶಾಚ ಎಂದವರುಂಟು!
ಆ ಅನಿಷ್ಟ ಶಬ್ದವೇಕೆ?
ಮೋಹಿನಿ ಎನ್ನೋಣ !
(ಅದೂ ಒಂದು ದೆವ್ವವೆ)

ಸಿ. ಪಿ. ಕೆ.
ಮೈಸೂರು-೧೨

# ‘ಜನಪ್ರಿಯ ಪಳೆಯುಳಿಕೆ’ಗಳಿಂದ ‘ವಿಶ್ವಪದ’ದವರೆಗೆ

ಎಸ್. ಎಂ. ಮುತ್ತಯ್ಯ

ಥಾಮ್ಸ್ ಎಂಬ ವಿದ್ವಾಂಸ ಜಾನಪದ ಎಂದು ಹೆಸರು ಕೊಡುವುದಕ್ಕಿಂತ ಮುಂಚೆ ಈ ಕ್ಷೇತ್ರ ಜನಪ್ರಿಯ ಪಳೆಯುಳಿಕೆಗಳು ಮತ್ತು ಜನಪ್ರಿಯ ಸಾಹಿತ್ಯ ಎಂಬ ಹೆಸರುಗಳಲ್ಲಿ ಕರೆಯಲ್ಪಡುತ್ತಿತ್ತು. ಥಾಮ್ಸ್ ಈ ಎರಡರ ಸಮಗ್ರ ವಿಷಯಗಳನ್ನು ಸೇರಿಸಿ ಜಾನಪದ ಎಂಬ ಹೆಸರನ್ನು ಕೊಟ್ಟ (೧೮೪೬). ಅಷ್ಟೇ ಅಲ್ಲದೆ ಈ ಸಂಪತ್ತು ಗ್ರಾಮೀಣ ಜನ ಜೀವನದಲ್ಲಿದ್ದು ಅವಸಾನದ ಅಂಚಿನಲ್ಲಿದೆ; ಅದನ್ನು ಆದಷ್ಟು ಬೇಗ ಸಂಗ್ರಹಿಸಿ ಅಧ್ಯಯನ ಮಾಡಬೇಕೆಂದು ಸೂಚಿಸಿದ. ಥಾಮ್ಸ್‌ನ ಈ ಪ್ರಯತ್ನ ಜಾನಪದ ಅಧ್ಯಯನದಲ್ಲಿ ಹೊಸ ಕ್ರಾಂತಿಗೆ ಹಾದಿಯಾಯಿತು. ಇಲ್ಲಿಂದ ಆ ಪದವನ್ನು ಜಗತ್ತಿನ ಜಾನಪದ ವಿದ್ವಾಂಸರೆಲ್ಲರೂ ಸಮ್ಮತಿಸಿದರು. ಅಷ್ಟೇ ಅಲ್ಲ ಆ ಪದವನ್ನು ತಮ್ಮ ತಮ್ಮ ಭಾಷೆಗಳಿಗೆ ಭಾಷಾಂತರಿಸಿದರು (೧೯೬೦ರಲ್ಲಿ ಹಾ.ಮಾ.ನಾ. ಅವರು ಫೋಕ್‌ಲೋರ್ ಅನ್ನು ಜಾನಪದ ಎಂದು ಕನ್ನಡೀಕರಿಸಿದ್ದನ್ನು ಇಲ್ಲಿ ಸ್ಮರಿಸಬಹುದು). ಪದವನ್ನು ಸಮ್ಮತಿಸಿದ ಅನಂತರ ಅದರ ಅರ್ಥವ್ಯಾಪ್ತಿಗಳ ಬಗ್ಗೆ ವ್ಯಾಖ್ಯಾನಗಳು ಪ್ರಾರಂಭವಾದವು. ಸಾಂಸ್ಕೃತಿಕ ಮಾನವಶಾಸ್ತ್ರದಲ್ಲಿ ಸೇರಿಕೊಂಡಿದ್ದ ಈ ಕ್ಷೇತ್ರವೂ ಸ್ವತಂತ್ರ ಶಾಸ್ತ್ರವಾಗಿ ಮಾರ್ಪಟ್ಟಿದ್ದು ಈ ಕಾಲದಲ್ಲಿಯೇ. ಅಂದಿನಿಂದ ಇಂದಿನವರೆಗೂ ಜಾನಪದದ ಬಗೆಗೆ ಅನೇಕಾನೇಕ ಮಾದರಿಯ ವ್ಯಾಖ್ಯಾನಗಳು ಬಂದಿವೆ. ಆದರೆ ಇವು ಯಾವುವೂ ಅಂತಿಮ ತೀರ್ಮಾನಗಳಾಗಿಲ್ಲ. ಇನ್ನು ಮುಂದೆಯೂ ಆಗಲಾರವು. ಕಾರಣ ಜಾನಪದ ಎನ್ನುವುದು ''ಕೇವಲ ಪ್ರಾಚೀನ ಸಂಸ್ಕೃತಿಗಳ ಪಳೆಯುಳಿಕೆಯಲ್ಲ, ಅದೊಂದು ಜೀವಂತ ಸಮಾಜದ ಸಾಂಸ್ಕೃತಿಕ ಕಾರ್ಯಾಗಾರ. ಅದರಲ್ಲಿ ಜಾನಪದ ನಿತ್ಯವೂ ಹುಟ್ಟುತ್ತದೆ, ನಿತ್ಯವೂ ಸಾಯುತ್ತದೆ'' (ಮೊಗಳ್ಳಿ ಗಣೇಶ್).

ಈವರೆಗೂ ಅನೇಕ ರೀತಿಯಲ್ಲಿ ಬಂದಿರುವ ‘ಜಾನಪದ’ದ ವ್ಯಾಖ್ಯಾನಗಳನ್ನು ಪ್ರಧಾನವಾದ ಮೂರು ಮುಖ್ಯ ನೆಲೆಗಳಲ್ಲಿ ಅರ್ಥೈಸಿಕೊಳ್ಳಬಹುದು.

೧. ಜಾನಪದವನ್ನು ಅರ್ಥೈಸಲು ಪ್ರಾರಂಭಿಸಿದ ಮೊದಲ ದಿನಗಳಲ್ಲಿ ''ಜನಜೀವನದಲ್ಲಿ ಇಂದಿಗೂ ಕಂಡುಬರುವ ಆದರೆ ಈ ಕಾಲದವಲ್ಲದ, ಸಮಾಜದ ಕೆಳಗಿನ ಸ್ತರದ ಐತಿಹ್ಯ, ಸಂಪ್ರದಾಯ, ನಂಬಿಕೆ ಮುಂತಾದವು ಗಳ ಮೊತ್ತವೇ ಜಾನಪದ'' (ಆಂಡ್ರೂ/ಲಾಂಗ್). ''ಜಾನಪದ ಆದಿವಾಸಿಗಳ ಹಾಗೂ ನಾಗರಿಕ ಸಮಾಜಗಳ ಸಾಂಪ್ರದಾಯಿಕ ಮೊತ್ತ'' (ಜೋನಾಸ್ ಬ್ಯಾಲೀಸ್) ಎಂಬ ವಾದಗಳಿದ್ದವು. ಹಾಗೆಯೇ ಗ್ರಾಮೀಣ ಜನರ ಸಂಪತ್ತಾದ ಇದು ನಶಿಸುವ ಹಂತದಲ್ಲಿದೆ, ಅದನ್ನು ರಕ್ಷಿಸ ಬೇಕು ಎನ್ನುವುದು ಈ ಕಾಲದ ಪ್ರಧಾನ ನಂಬಿಕೆಯಾಗಿತ್ತು.

೨. ನಂತರದ ದಿನಗಳಲ್ಲಿ ಜಾನಪದದ ವ್ಯಾಪ್ತಿ ಇನ್ನಷ್ಟು ಹೆಚ್ಚುತ್ತಾ ಹೋಯಿತು. ಆಗ ಸಹಜವಾಗಿ ಹಿಂದಿನ ವ್ಯಾಖ್ಯಾನಗಳಿಗಿಂತ ಸ್ವಲ್ಪ ಮುಂದುವರೆದ ಆಲೋಚನೆ ಆರಂಭವಾಯಿತು. ಈ ಕಾರಣದಿಂದಾಗಿಯೇ ಗ್ರಾಮೀಣ ಪ್ರದೇಶಗಳಲ್ಲಿ, ಆದಿವಾಸಿ ಗುಂಪುಗಳಲ್ಲಿ ಜಾನಪದ ದಟ್ಟವಾಗಿದ್ದರೂ ''ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿರುವ ಅದರ ಕುರುಹುಗಳು ನಾಗರಿಕತೆಯ ತುತ್ತತುದಿಯನ್ನು ಮುಟ್ಟಿದ ಜನಾಂಗದಲ್ಲಿ ಇರಲೂ ಸಾಧ್ಯ'' (ಲ ಪ್ಪಿನೋಸ) ಎಂಬಿತ್ಯಾದಿ ಆಲೋಚನೆಗಳು ಪ್ರಾರಂಭವಾದವು. ಈ ಕಾಲಘಟ್ಟದಲ್ಲಿ ನಾಗರಿಕತೆಯ ತುತ್ತ



ತುದಿಯಲ್ಲೂ ಜಾನಪದ ಇರಬಲ್ಲದು; ಇರುತ್ತದೆ. ಅಷ್ಟೇ ಅಲ್ಲದೆ, ಯಾವುದೇ ವಸ್ತುವಿನಲ್ಲಿ ಯಾವುದೇ ವ್ಯಕ್ತಿಯಲ್ಲಿ ಯಾವುದೇ ಸಮಯ ಮತ್ತು ಸ್ಥಳದಲ್ಲಿ ಕಾಣಿಸಿಕೊಳ್ಳಬಲ್ಲದು ಎಂದು ಕಂಡುಕೊಂಡಿದ್ದು ಹೊಸ ಬೆಳವಣಿಗೆಯಾಯಿತು. ಕೆಲವು ಜಾನಪದದ ಲಕ್ಷಣಗಳನ್ನು ಇವರೂ ಸ್ವೀಕರಿಸಿದರು.

೩. ಇಲ್ಲಿಂದ ಮುಂದುವರಿದ ಅಧ್ಯಯನ ಜಾನಪದಕ್ಕೆ ಹಿಂದಿಗಿಂತ ಭಿನ್ನವಾದ, ವಿನೂತನವಾದ, ಹೆಚ್ಚು ವ್ಯಾಪಕವಾದ ಪರಿಕಲ್ಪನೆಗಳು ದೊರೆತವು. ಜಾನಪದ ಅನಕ್ಷರಸ್ಥರ, ಹಳ್ಳಿಗರ, ಶಿಷ್ಟ ಸಂಸ್ಕೃತಿಗೆ ಹೊರತಾದವರಿಗೆ ಸಂಬಂಧಿಸಿದ ವಿಷಯವೆಂಬುದನ್ನು ತಿರಸ್ಕರಿಸಿ, ''ಜನಪದ ಎಂದರೆ ಒಂದು ಸಮಾನ ಧೋರಣೆಯನ್ನು ಹೊಂದಿರುವ ಜನರ ಗುಂಪು. ಸಮಾನ ವಿಷಯ ಯಾವುದುಬೇಕಾದರೂ ಆಗಿರಬಹುದು. ಅದು ವೃತ್ತಿ, ಭಾಷೆ, ಧರ್ಮ ಆಗಿರಬಹುದು. ಈ ಗುಂಪುಗಳ ಉತ್ಪತ್ತಿಯೇ ಜಾನಪದ'' (ಡಂಡಸ್) ಮತ್ತು ''ಜಾನಪದ ಭೂತಕಾಲದ ಪ್ರತಿಧ್ವನಿಯಾಗಿರುವಂತೆ ವರ್ತಮಾನದ ಕಸುವುಳ್ಳ ಧ್ವನಿಯೂ ಹೌದು'' (ರಿಚರ್ಡ್ ಎಂ. ಡಾರ್ಸನ್) ಎಂಬ ಅಭಿಪ್ರಾಯಗಳು ಬಂದವು. ಈ ರೀತಿಯಾದ ಆಲೋಚನಾ ಕ್ರಮವನ್ನು ಇಲ್ಲಿ ಬೆಳೆಸಲಾಯಿತು. ಪರಿಣಾಮವಾಗಿ ನಗರ ಜಾನಪದ, ಕಾಲೇಜು ಜಾನಪದ, ಕೈಗಾರಿಕಾ ಜಾನಪದ ಎಂಬಿತ್ಯಾದಿ ಹೊಸ ಅಧ್ಯಯನ ಕ್ರಮಗಳು ಪ್ರಾರಂಭವಾದವು (ಈ ಪರಿಕಲ್ಪನೆಗಳನ್ನು ತೃತೀಯ ಜಗತ್ತಿನ ಅನೇಕ ರಾಷ್ಟ್ರಗಳು ಸ್ವೀಕರಿಸುವಲ್ಲಿ ಯಶಸ್ವಿಯಾಗಿಲ್ಲ). ಇದೇ ಸಂದರ್ಭದಲ್ಲಿ ಜಾನಪದ ಎಂದರೆ ''ಜಾನಪದ ಎನ್ನುವುದು ಸಂಪ್ರದಾಯಗಳ ವಿಜ್ಞಾನ'', ''ಜಾನಪದವು ಸಾಂಪ್ರದಾಯಿಕ ವಿಷಯಗಳನ್ನು ಅಧ್ಯಯನ ಮಾಡುವ ವಿಜ್ಞಾನ'', ಎನ್ನುವ ವ್ಯಾಖ್ಯಾನಗಳಿಂದ ಜಾನಪದ ಎನ್ನುವುದು ಅಧ್ಯಯನ ಸಾಮಗ್ರಿಯೋ ಅಥವಾ ಅಧ್ಯಯನ ಶಿಸ್ತೋ ಎಂಬ ವಾಗ್ವಾದಗಳು ಪ್ರಾರಂಭವಾದವು (ಈ ವಾಗ್ವಾದದಲ್ಲಿ ಅಮೆರಿಕದ ವಿದ್ವಾಂಸರ ಪಾತ್ರ ಹಿರಿದು). ನಂತರ ಕಂಡುಕೊಂಡಿದ್ದೇನೆಂದರೆ ಅದು ಮಾನವನ ಕಲಾತ್ಮಕ ಅಭಿವ್ಯಕ್ತಿಗಳಾದ ಕಲೆ, ಸಾಹಿತ್ಯ, ಸಂಗೀತದಂತಹ ಪ್ರಕಾರಗಳಿಗಷ್ಟೇ ಸೀಮಿತವಾಗಿರುವುದರಿಂದ ಅದನ್ನು ಜನಪದ ಜೀವನ ಎಂದು ಕರೆದರೆ ಕಲಾತ್ಮಕ ಅಭಿವ್ಯಕ್ತಿಗಳೂ ಸೇರಿದಂತೆ ಇಡೀ ಜನಪದ ಜೀವನ ವಿಧಾನವೇ ಸೇರುತ್ತದೆ. ಈ ಜನಪದ ಜೀವನವನ್ನು ಅಧ್ಯಯನ ಮಾಡುವ ಶಾಸ್ತ್ರಕ್ಕೆ ಜನಪದ ವಿಜ್ಞಾನ ಎಂದು ಕರೆಯಲು ತೀರ್ಮಾನಿಸಲಾಯಿತು.

ಮೇಲಿನ ಅಧ್ಯಯನ ಕ್ರಮಗಳು, ಒಂದು ಮಾದರಿಯ ಸಾಮಗ್ರಿಯನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡುವ ಸಂದರ್ಭದಲ್ಲಿ ಜನಪದ ಜೀವನ ತನ್ನ ಪಾಡಿಗೆ ತಾನು ಅನೇಕ ಪರಿಷ್ಕಾರಗಳೊಂದಿಗೆ ಸಾಗುತ್ತಲೇ ಇತ್ತು. ಈಗ ಇಡೀ ಜಗತ್ತು ಜಾಗತೀಕರಣ, ಉದಾರೀಕರಣದಂತ ಪ್ರಕ್ರಿಯೆಗಳಿಗೆ ಮುಖಾ-ಮುಖಿಯಾಗುತ್ತಿದೆ. ಆ ಮೂಲಕ ತಾಂತ್ರೀಕೃತ, ಏಕೀಕೃತ ಜಗತ್ತಾಗುತ್ತಾ ಇದೆ. ಪರಿಣಾಮ ಈವರೆಗೂ ನಾವು ಕಂಡ ಜಾನಪದಕ್ಕಿಂತ ಭಿನ್ನವಾದ ಸ್ವರೂಪವನ್ನು ಪಡೆದ ಜಾನಪದ ಸೃಷ್ಟಿಯಾಗುತ್ತಿದೆ. ನಮ್ಮ ಅಧ್ಯಯನ ಕ್ರಮಗಳು ಕೂಡ ಆ ಕಡೆಯೇ ಮುಖಮಾಡಿ ನಿಂತಿವೆ. ಮೇಲೆ ವಿವರಿಸಿದ ಮೂರನೇ ಕಾಲಘಟ್ಟದ ಜಾನಪದವನ್ನೇ ಸ್ವೀಕರಿಸಲು ಕಷ್ಟವಾಗುತ್ತಿರುವ ಭಾರತದಂತಹ ತೃತೀಯ ಜಗತ್ತು ಅದರ ಮುಂದುವರಿದ ಭಾಗದಂತಿರುವ ಈ ಹೊತ್ತಿನ ಹೊಸ ಜಾನಪದವನ್ನು

ಗುರುತಿಸಿಕೊಳ್ಳಲಾಗದ ಗೊಂದಲಕ್ಕೆ ಬಿದ್ದಿದೆ. ಪ್ರಥಮ ಜಗತ್ತಿನಲ್ಲಿ ಈ ತರಹದ ಜಾನಪದ ಹೆಚ್ಚು ಹೆಚ್ಚು ಸೃಷ್ಟಿಯಾಗುತ್ತಿದ್ದು ತೃತೀಯ ಜಗತ್ತಿನಲ್ಲಿ ಇನ್ನೂ ಕಡಿಮೆ ಪ್ರಮಾಣದಲ್ಲಿ ಸೃಷ್ಟಿಯಾಗುತ್ತಿರುವ ಅಂಶವೂ ಕೂಡ ತೃತೀಯ ಜಗತ್ತಿನ ಗೊಂದಲಕ್ಕೆ ಇನ್ನಷ್ಟು ಸಂಕೀರ್ಣತೆಯ ರೂಪವನ್ನು ಕೊಟ್ಟಿದೆ.

ಜಾಗತೀಕರಣದ ಪರಿಣಾಮ ಇಂದು ಜಗತ್ತಿನಾದ್ಯಂತ ಸೃಷ್ಟಿಯಾಗುತ್ತಿರುವ ಜಾನಪದವನ್ನು ''ವಿಶ್ವಪದ'' ಎಂದು ಕರೆದುಕೊಳ್ಳಲಾಗಿದೆ. ಆ ಪದವನ್ನು ಕನ್ನಡಕ್ಕೆ ತಂದವರು ವಿದ್ವಾಂಸರಾದ ಮೊಗಳ್ಳಿ ಗಣೇಶ್. ಹಾಗೆಯೇ ಅದರ ಸ್ವರೂಪವನ್ನು ಭಾರತೀಯ ಪರಿಸರದ ಚೌಕಟ್ಟಿನೊಳಗೆ ಉತ್ತಮವಾಗಿ ಗುರುತಿಸಿಕೊಂಡಿದ್ದಾರೆ. ಇವರ ಈ ಪ್ರಯತ್ನಕ್ಕೆ ಒಂದು ಐತಿಹಾಸಿಕ ಮಹತ್ವವಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಇವರ ವಿಚಾರಗಳ ಆಧಾರದ ಮೇಲೆ ವಿಶ್ವಪದದ ಸ್ವರೂಪ ಮತ್ತು ಲಕ್ಷಣಗಳನ್ನು ಮುಂದಿನಂತೆ ಗುರುತಿಸಿಕೊಳ್ಳಬಹುದು.

'ವಿಶ್ವಪದ' ಹಳೆಯ ಕಾಲದ ಜಾನಪದಕ್ಕಿಂತ ಹೊರನೋಟಕ್ಕೆ ತೀರಾ ಭಿನ್ನ ಅನ್ನಿಸಿದರೂ ಆಳದಲ್ಲಿ ಒಂದೇ ಆಗಿರುವುದನ್ನು ಗುರುತಿಸಬಹುದಾಗಿದೆ. ಮೊಗಳ್ಳಿಯವರು ವಿಶ್ವಪದದ ಸ್ವರೂಪವನ್ನು ಮುಖ್ಯವಾದ ೮ ಶೀರ್ಷಿಕೆಗಳಲ್ಲಿ ಗುರುತಿಸಿಕೊಂಡಿದ್ದಾರೆ. ೧. ತಾಂತ್ರೀಕೃತ ಜಾನಪದ : ಆಧುನಿಕ ತಂತ್ರಜ್ಞಾನಕ್ಕೆ ಅಳವಡಗೊಂಡ ಸಮುದಾಯಗಳ ಪ್ರಕ್ರಿಯೆಗಳು. ೨. ಜಾಗತೀಕರಣದ ಪರಿಣಾಮ ಸಂಸ್ಕೃತಿಗಳಲ್ಲಿ ಬೆಳೆಯುವ ವಿಶ್ವಾತ್ಮಕ ಗುಣಗಳು ಹೆಚ್ಚುತ್ತಿದ್ದು ಇಂಥ ಜಾಗತಿಕ ಸಮಾನ ಪ್ರಕ್ರಿಯೆಗಳೇ ವಿಶ್ವಾತ್ಮಕ ಜಾನಪದ. ೩. ವಿದ್ಯುನ್ಮಾನ ಜಾನಪದ : ಇದೊಂದು ಆಧುನಿಕ ಸಂವೇದನೆಯ ತಾಂತ್ರೀಕೃತ ಪ್ರಜ್ಞೆ ಮತ್ತು ಪರಂಪರೆಯನ್ನು ತಂತ್ರಜ್ಞಾನಗಳ ವಿಶಿಷ್ಟಗಳ ಜೊತೆಗೆ ದಾಖಲಿಸುತ್ತಾ ಹೊಸಲೋಕದ ಬಾಗಿಲು ತೆರೆಯುವುದು. ೪. ತೃತೀಯ ಜಗತ್ತಿನ ಒಳಗೇ ಇರುವ ಅಲ್ಪಸಂಖ್ಯಾತರು ಆದಿವಾಸಿಗಳು, ಬುಡಕಟ್ಟುಗಳು, ಜಾತಿಗಳು, ಅಲೆಮಾರಿಗಳು ನಾಲ್ಕನೇ ಆಯಾಮಗಳೆನಿಸಿಕೊಳ್ಳುತ್ತಿವೆ. ಇವುಗಳ ಬಿಡುಗಡೆಯ, ಶಾಂತಿಯ, ವಿಶ್ವ ಭ್ರಾತೃತ್ವದ, ಮಾನವೀಕರಣದ ರಾಷ್ಟ್ರೀಯತೆಯ ಜಾನಪದದ ಭಾವಲೋಕ ಇವತ್ತು ವಿಶ್ವದ ಉದ್ದಕ್ಕೂ ಸೂಕ್ಷ್ಮವಾಗಿ ಕಾಣಿಸಿಕೊಳ್ಳುತ್ತಿದೆ. ಇದೇ ರಾಷ್ಟ್ರೀಯ ಜಾನಪದ. ೫. ಸಮಾಜದ ಪ್ರತಿಷ್ಠಿತ ವರ್ಗಗಳ ಒಂದು ಆಯಾಮವಾಗಿ, ಒಂದು ರೀತಿ ನಗರ ಜಾನಪದದ ಮುಂದುವರೆದ ಹಂತವಾಗಿಯೂ ನೋಡಬಹುದಾದುದು ಪ್ರತಿಷ್ಠಿತ ಜಾನಪದ. ೬. ಸಮೂಹ ಮಾಧ್ಯಮ ಜಾನಪದ : ಹಿಂದೆ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ಜನಪದ ಪ್ರಕಾರಗಳು ವಾಹಕ ಶಕ್ತಿಗಳಾಗಿದ್ದವು. ಇಂದು ಈ ಪ್ರಕಾರಗಳ ಸ್ಥಾನವನ್ನು ಸಮೂಹ ಮಾಧ್ಯಮಗಳು ಪಡೆದುಕೊಂಡಿವೆ. ೭. ಅನುಭೋಗಿ ಜಾನಪದ : ಉದಾರೀಕರಣದಿಂದಾಗಿ ಮಾರುಕಟ್ಟೆ ಜಾಲ ವಿಚಿತ್ರವಾದ ಪರಿಸ್ಥಿತಿಗಳನ್ನು ಸೃಷ್ಟಿಸಿದ್ದು; ಈ ಪ್ರಕ್ರಿಯೆಯಲ್ಲಿ ವಿವಿಧ ಭಾಷೆ, ಜನಾಂಗ, ಸಂಸ್ಕೃತಿಯ ವಿಶೇಷತೆಗಳು ಅನುಭೋಗಿ ಪ್ರವೃತ್ತಿಗೆ ಒಳಗಾಗುತ್ತಿವೆ. ಈ ಹಿನ್ನೆಲೆಯಲ್ಲಿ ಅನುಭೋಗಿ ಜಾನಪದವನ್ನು ಗಮನಿಸಬೇಕಾಗಿದೆ. ೮. ಜಾನಪದವನ್ನು ವಿಜ್ಞಾನ ಪೂರ್ವಯುಗದ ವಿಜ್ಞಾನ ಎಂದು ಕರೆಯಲಾಗುತ್ತಿತ್ತು. ಆದರೆ ಇಂದು ಜಾನಪದ - ವಿಜ್ಞಾನಗಳ ಮಧ್ಯೆ ನಿಖರವಾದ ವ್ಯತ್ಯಾಸಗಳು ಕಡಿಮೆಯಾಗುತ್ತಿವೆ. ಇಂಥ ಸಂದರ್ಭದಲ್ಲಿ ವಿಜ್ಞಾನ ಜಾನಪದ ವನ್ನು ಕಂಡುಕೊಳ್ಳಬಹುದಾಗಿದೆ.



*ತೊಗಲು ಗೊಂಬೆ*

ಇಂತಹ ಸ್ವರೂಪವನ್ನು ಹೊಂದಿರುವ ವಿಶ್ವಪದವು ತನ್ನದೇ ಆದ ಕೆಲವು ಲಕ್ಷಣಗಳನ್ನು ಹೊಂದಿದೆ. ಅನಾಮಧೇಯತೆ, ಪುನರ್‌ಸೃಷ್ಟಿ, ಸಮೂಹ ಸೃಷ್ಟಿ, ರೂಪಾಂತರ ಕ್ರಿಯೆ, ಸಂಪ್ರದಾಯ, ಸಂಯೋಗ ಪ್ರತಿಭೆ, ಗ್ರಾಹಕ ಪ್ರಕ್ರಿಯೆ, ತಾಂತ್ರಿಕತೆ, ವ್ಯಕ್ತಿ ವಿಶಿಷ್ಟತೆ, ಲಿಖಿತತೆ, ಇವು ವಿಶ್ವಪದದ ಕೆಲವು ಲಕ್ಷಣಗಳು. ಇವು ಮೊದಲ ನೋಟಕ್ಕೆ ಹಳೆಯ ಜಾನಪದದ ಲಕ್ಷಣಗಳಂತೆ ಕಾಣುತ್ತಿವೆ. ಆದರೂ ಸ್ವರೂಪಗಳಲ್ಲಿ ಮಾತ್ರ ಭಿನ್ನತೆಯನ್ನು ಹೊಂದಿವೆ.

ಹೊಸ ಜಗತ್ತಿನ ಜಾನಪದವಾದ ವಿಶ್ವಪದಕ್ಕೂ ಹಳೆಯ ಕಾಲದ ಜಾನಪದಕ್ಕೂ ಆಳವಾದ ಸಂಬಂಧಗಳಿವೆ. ಇವೆರಡರಲ್ಲೂ ಹರಿಯುವ ಅಂತರ್‌ವಾಹಿನಿ ಒಂದೇ ಆಗಿದೆ. ಆದರೂ ಕೆಲವು ಮುಖ್ಯ ವ್ಯತ್ಯಾಸಗಳನ್ನು ಹೊಂದಿ ಅವುಗಳನ್ನು ಈ ಮುಂದಿನಂತೆ ಗುರುತಿಸಬಹುದು. ಹಳೆಯ ಕಾಲದ ಜಾನಪದ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಹೆಚ್ಚು ಇದ್ದು, ಪ್ರಾದೇಶಿಕ ಹಾಗೂ ಜನಾಂಗ ಬದ್ಧತೆಯನ್ನು ಬಲವಾಗಿ ಆಶ್ರಯಿಸಿರುತ್ತದೆ ಮತ್ತು ತನ್ನ ಪ್ರಾದೇಶಿಕ ಮೂಲದಿಂದಲೇ ವಿಶ್ವವನ್ನು ಗ್ರಹಿಸುವ ಪ್ರಯತ್ನ ಮಾಡುತ್ತಿರುತ್ತದೆ. ವಿಶ್ವಪದವಾದರೂ ಪ್ರಥಮ ಜಗತ್ತಿನ ರಾಷ್ಟ್ರಗಳಲ್ಲಿ (ಸಮುದ್ರ ಮಾರ್ಗಗಳು ಕಂಡುಕೊಂಡ ಅನಂತರದಲ್ಲಿ ಉದಯಿಸಿದ ಮಿಶ್ರತಳಿ ಜನಾಂಗಗಳು ವಾಸಿಸುವ ರಾಷ್ಟ್ರಗಳು) ಹೆಚ್ಚು ಸೃಷ್ಟಿಯಾಗುತ್ತಿದ್ದು, ಜಗತ್ತಿನ ಬಹು ಆಕಾರಗಳನ್ನು ಸಂವೇದನೆಯನ್ನು ಧರಿಸಿಕೊಂಡು ರಾಷ್ಟ್ರೀಯ ಅಂತರರಾಷ್ಟ್ರೀಯ ಮಾದರಿಗಳಲ್ಲಿ ಜಾಗತಿಕವಾಗಿ ವ್ಯಾಪಿಸಿಕೊಂಡಿರುತ್ತದೆ ಮತ್ತು ವಿಶ್ವದ ವಿಸ್ತಾರ ಮಾದರಿಗಳಿಂದ ವಿವಿಧ ಪ್ರಾದೇಶಿಕ ರೂಪಗಳನ್ನು ಅರಿಯುತ್ತಿರುತ್ತದೆ.

ಒಟ್ಟಾರೆ ಇಷ್ಟೆಲ್ಲಾ ರೂಪಾಂತರ ಹೊಂದಿ ಚಾಲ್ತಿಯಲ್ಲಿರುವ ಜಾನಪದ ಈ ಹೊತ್ತು ''ಅದೊಂದು ಸಂವೇದನೆ ಹಾಗೇ ಅದೊಂದು ಕ್ರಿಯಾಶೀಲ ಮನಸ್ಸಿನ ಪ್ರತಿಬಿಂಬ ವಾಗಿದೆ'' (ಮೊಗಳ್ಳಿ ಗಣೇಶ). ಹಾಗೆಯೇ ಜಗತ್ತು ಇಡೀ ಒಂದು 'ಸಮಾಜ'ವಾದ ಹಾಗೆ ವಿಶ್ವಪದವೂ ಕೂಡ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಒಂದೇ ಆಗುತ್ತಿದೆ. ಇದಕ್ಕೆ ವಿರುದ್ಧವಾದ (ಜಾನಪದ ಶಿಷ್ಟವಿದ್ದಂತೆ) ಯಾವ ಜೀವನಕ್ರಮವೂ ಇಲ್ಲವಾಗುತ್ತಿದೆ. ಇಂತಹ ವಿಶ್ವವ್ಯಾಪ್ತಿಯುಳ್ಳ ಜಾನಪದವನ್ನು ಎಚ್ಚರಿಕೆಯಿಂದ ಗುರುತಿಸಿ ವಿಶ್ಲೇಷಿಸಿಕೊಳ್ಳಬೇಕಿದೆ. ಹಳೆಯ ಜಗತ್ತಿನ ಜಾನಪದದ ನಂಬಿಕೆಗಳಿಂದ ವಿಶ್ವಪದವನ್ನು ಅಳೆದರೂ ತುಂಬಾ ಗೊಂದಲಗಳಾಗುತ್ತವೆ. ಅಷ್ಟೇ ಏಕೆ, ವಿಶ್ವಪದವನ್ನು ಗುರುತಿಸಿಕೊಳ್ಳುವಲ್ಲಿಯೇ ಸೋತುಹೋಗುತ್ತೇವೆ. ಇದಕ್ಕೆ ನಿದರ್ಶನವನ್ನಾಗಿ ಕನ್ನಡ ಜಾನಪದ ಅಧ್ಯಯನದ ತವಕ, ತಲ್ಲಣ ಮತ್ತು ಗೊಂದಲಗಳ ಪರಿಸ್ಥಿತಿಯನ್ನೇ ನೋಡಬಹುದಾಗಿದೆ.

ಕರ್ನಾಟಕದಲ್ಲಿ ಸಮೃದ್ಧವಾದ ಹಳೆಯ ಯುಗದ ಜಾನಪದ ಸಂಪತ್ತು ಇದೆ. ಇಂಥ ಜಾನಪದವನ್ನು ಅಧ್ಯಯನ ಮಾಡುತ್ತಿರುವ ವಿದ್ವಾಂಸರನೇಕರು ಜಾನಪದ ಈ ಹೊತ್ತು ಸೃಷ್ಟಿಯಾಗುತ್ತಿದೆಯೇ ಯಾವುದು ಜಾನಪದ – ಯಾವುದು ಜಾನಪದ ಅಲ್ಲ, ಇವೊತ್ತಿನ ಜಾನಪದವನ್ನು ಹಾಗೇ ಉಳಿಸಿಕೊಳ್ಳಬೇಕೆ ಅಥವಾ ಬದಲಾವಣೆ ಮಾಡಿಕೊಳ್ಳಬೇಕೇ ಉಳಿಸಿಕೊಳ್ಳಬೇಕು ಎಂದರೆ ಜಾನಪದವು ಜಾತಿ ಮತ್ತು ವೃತ್ತಿಯಾಧಾರಿತವಾದ್ದರಿಂದ ಅದನ್ನು ಜೀವನವಾಗಿಸಿಕೊಂಡವರಿಂದ ನಾಗರಿಕ ಬದುಕಿನ ಹಕ್ಕನ್ನು ಕಿತ್ತುಕೊಂಡಂತಾಗುವುದಿಲ್ಲವೆ, ಬದಲಾವಣೆ ಮಾಡಿಕೊಳ್ಳಬೇಕೆಂದರೆ ತಮ್ಮತನಗಳನ್ನು ಕಳೆದುಕೊಂಡಂತಾಗುವುದಿಲ್ಲವೆ, ಪ್ರಾದೇಶಿಕ ಬದ್ಧತೆಯಿಂದ ಕೂಡಿದ ನಮ್ಮ ಜಾನಪದಕ್ಕೆ ವಿದೇಶಿ ಸಿದ್ಧಾಂತಗಳೆಷ್ಟು ಉಪಯುಕ್ತ – ಹೀಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದಾರೆ. ವಿದ್ವಾಂಸರ, ಆಸಕ್ತರ, ವಿದ್ಯಾರ್ಥಿಗಳ ಈ ತಲ್ಲಣಗಳಿಗೆ ಪ್ರಧಾನವಾದ ಎರಡು ಕಾರಣಗಳನ್ನು ಗುರುತಿಸಬಹುದೇನೋ : ಅ) ಹಳೆಯ ಜಾನಪದವನ್ನೇ ಕಂಡಿರುವ ನಾವು ಹೊಸ ಯುಗದ ಜಾನಪದವನ್ನು (ವಿಶ್ವಪದ) ನಿಜವಾದ ಜಾನಪದ ಎಂದು ನಂಬಲಾರದ ಸ್ಥಿತಿ. ಆ) ಪಾಶ್ಚಾತ್ಯರ ಪರಿಕಲ್ಪನೆಗಳನ್ನು ಅನನ್ಯತೆಯ ನೆಪದಲ್ಲಿ ತಿರಸ್ಕರಿಸುವ ಅಪ್ಪಟ ದೇಶಿತನದ ಮನೋಭಾವ. ಇಂಥಲ್ಲಿ ನಾವು ಗಮನಿಸಬೇಕಾದ ಅಂಶಗಳೇನೆಂದರೆ ''ಒಂದು ಕಡೆ ಸಾಮಾಜಿಕವಾಗಿ ಹೋರಾಡುತ್ತಲೇ ತಮ್ಮ ಜಾನಪದದ ಬಗೆಗೂ ಕಠಿಣ ನಿಲುವನ್ನು ತಳೆಯಬೇಕಾಗುತ್ತದೆ. ಸಾಂಸ್ಕೃತಿಕವಾಗಿ ಒಪ್ಪಿಕೊಳ್ಳುವುದನ್ನೇ ಆರ್ಥಿಕ, ರಾಜಕೀಯ



([illegible] ಪುಟಕ್ಕೆ)

# ಮಾಧ್ಯಮ ಬಳಕೆಯ ಹಲವು ಮುಖಗಳು

**ಡಾ॥ ನಿರಂಜನ ವಾನಳ್ಳಿ**

ನವದೆಹಲಿಯ 'ಭಾರತ ಜನಸಂಖ್ಯಾ ಯೋಜನೆ'ಯು ಆಕಾಶವಾಣಿಗಾಗಿ ಸಿದ್ಧಪಡಿಸಿದ ಕಾರ್ಯಕ್ರಮ 'ಕುಸುಮಾಲೆ' ಹಿಂದಿನ ವರ್ಷ ೫೨ ಕಂತುಗಳಲ್ಲಿ ಮೈಸೂರು ಆಕಾಶವಾಣಿಯಿಂದ ಪ್ರಸಾರಗೊಂಡಿತು. ಈ ಕಾರ್ಯಕ್ರಮಕ್ಕೆ ಶ್ರೋತೃಗಳ ಪ್ರತಿಕ್ರಿಯೆಯನ್ನು ಅಳೆಯುವ ಸಲುವಾಗಿ ಮೈಸೂರು ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಹರಡಿರುವ ಆಯ್ದ ನಲವತ್ತು ಹಳ್ಳಿಗಳನ್ನು ಸಂದರ್ಶಿಸುವ ಸಂದರ್ಭ ಈಚೆಗೆ ಒದಗಿಬಂತು. ಈ ಅವಕಾಶ, ಭಾರತದಲ್ಲಿ ಮಾಧ್ಯಮ ಬಳಕೆಯ ಕುರಿತು ನಗರ ಮೂಲದ ಮಾಧ್ಯಮ ತಜ್ಞರುಗಳು ಗಮನಿಸದ ಅನೇಕ ಸಂಗತಿಗಳನ್ನು ಪರಿಚಯ ಮಾಡಿಸಿತು. ಈ ದೇಶದ ಸಮೂಹ ಮಾಧ್ಯಮಗಳ ಪ್ರಸ್ತುತ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಈ ಅನುಭವ ಸಹಕಾರಿ.

ಬೆಂಗಳೂರಿನಲ್ಲಿ 'ರೇಡಿಯೋ ಸಿಟಿ' ಎಂಬ ಎಫ್. ಎಂ. ಕೇಂದ್ರ ಆರಂಭವಾದಾಗಿನಿಂದ ಬಾನುಲಿಗೆ ಮರುಜೀವ ಬಂದಿದೆ ಎಂಬ ಮಾತಿದೆ. ದೂರದರ್ಶನ(ಟಿವಿ)ದಿಂದಾಗಿ ರೇಡಿಯೋಕ್ಕೆ ಕಳೆದು ಹೋಗಿದ್ದ ಸ್ಥಾನಮಾನ ಈಗ ಮರಳಿ ಬರುತ್ತಿದೆಯೆಂದು ಬಾನುಲಿಯ ಬೆಂಬಲಿಗರು ಸಂಭ್ರಮಿಸುತ್ತಿದ್ದಾರೆ. ನಗರವಾಸಿ, ಶ್ರೀಮಂತ ಹಾಗೂ ಮಧ್ಯಮವರ್ಗ, ಮಾಧ್ಯಮ ಬಳಕೆಯ ಹಾದಿಯಲ್ಲಿ ಟಿವಿಯ ರುಚಿ ನೋಡಿ ರೇಡಿಯೋಕ್ಕೆ ವಾಪಸ್ಸಾಗುತ್ತಿರುವಂತಿದೆ. ಆದರೆ ಇದೇ ವೇಳೆಗೆ ಭಾರತದ ಹಳ್ಳಿಗಳಿನ್ನೂ ಟಿವಿಗೆ ತೆರೆದುಕೊಳ್ಳುತ್ತಿವೆ, ಹೊಸದಾಗಿ ದೃಶ್ಯ-ಶ್ರವ್ಯಮಾಧ್ಯಮದ ಗುಂಗಿಗೆ ಒಳಗಾಗುತ್ತಿವೆ ಎಂಬುದು ಗಮನಾರ್ಹ. ಈಚಿನ ವರ್ಷಗಳಲ್ಲಿ ನಿಧಾನವಾಗಿ ಹಳ್ಳಿಗಳಿಗೆ ಕೇಬಲ್ ಟಿವಿಯೂ ಧಾವಿಸುತ್ತಿರುವ ಪರಿಣಾಮ – ರೇಡಿಯೋ ಮೂಲೆ ಸೇರುತ್ತಿದೆ. ಒಂದೆಡೆ ಗ್ರಹಣ ಆರಂಭವಾಗಿದ್ದರೆ, ಇನ್ನೊಂದೆಡೆ ಗ್ರಹಣ ಬಿಡುತ್ತಿದೆ. ಇದು ನಮ್ಮ ನಗರ ಮತ್ತು ಹಳ್ಳಿಗಳ ನಡುವಿನ ಅಗಾಧ ಅಂತರವನ್ನೂ ಸಾಬೀತುಮಾಡುತ್ತದೆ.

ಇನ್ನೂ ಟಿವಿ ಎಂಬ ಮಾಯೆ ಮುಸುಕದ ಹಳ್ಳಿಗಳಲ್ಲಿ 'ಡೆಕ್' ಸರ್ವಾಂತರ್ಯಾಮಿಯಾಗಿರುವುದು ವಿಶೇಷವಾಗಿ ಕಂಡುಬಂತು. ಕುಗ್ರಾಮಗಳ ಬಡವರ ಮನರಂಜನೆಯ ಮಾಧ್ಯಮವಾಗಿ ರೇಡಿಯೋಗಿಂತ 'ಡೆಕ್' ಎಲ್ಲೆಲ್ಲೂ ವಿಜೃಂಭಿಸುತ್ತಿದೆ. ಹೊಸ ಸಿನಿಮಾ ಬಿಡುಗಡೆಯಾಗುವ ಮುನ್ನವೇ ಆಡಿಯೋ ಕ್ಯಾಸೆಟ್ಟುಗಳ ರೂಪದಲ್ಲಿ ಗ್ರಮಗಳ ಮನೆ-ಮನಗಳನ್ನು ಹೊಕ್ಕಿರುತ್ತದೆ. ಒಂದೊಂದು ಚಲನಚಿತ್ರದ ಪ್ರತಿಯೊಂದು ಹಾಡೂ ಅಕ್ಷರಶಃ ಬಾಯಿ ಪಾಠವಾಗಿರುತ್ತದೆ. ಟಿವಿಯಿಲ್ಲದ ಯಾವ ಮನೆ ಹೊಕ್ಕರೂ 'ಡೆಕ್' ಪ್ರತ್ಯಕ್ಷ. ಕೆಲವರಿಗೆ ರೇಡಿಯೋ ಎಂದರೆ ಅದೇ. ಹಳ್ಳಿಗರ ಭಾಷೆಯಲ್ಲಿ 'ಕೈರೇಡೋ' ಎಂದರೆ ಮಾತ್ರ ರೇಡಿಯೋ ಎಂಬ ಅರ್ಥ ಪಡೆದುಕೊಳ್ಳುತ್ತದೆ.

ಟಿ. ನರಸೀಪುರ ತಾಲ್ಲೂಕಿನ ಗರ್ಗೇಶ್ವರಿ ಎಂಬ ಊರಿನಲ್ಲಿ ರೇಡಿಯೋ ಸೆಟ್ಟುಗಳಿರುವ ಮನೆಗಳನ್ನು ಹುಡುಕುವುದೇ ದುಸ್ತರವಾಯ್ತು. ಯಾರನ್ನು ಕೇಳಿದರೂ ''ಟಿವಿ ಬಂದ ಮೇಲೆ ಈಗೆಲ್ಲಿ ಸಾರ್ ಲೇಡಿಯೋ'' ಎನ್ನುವವರೇ.



ಏಳೆಂಟು ವರ್ಷದ ಒಬ್ಬ ಹುಡುಗ ಸಿಕ್ಕಿದ. ನಿಮ್ಮಲ್ಲಿ ರೇಡಿಯೋ ಇದೆಯೇನೋ ಎಂದೆ, 'ಐತೆ ಸಾರ್. ಬನ್ನಿ ಹೋಗವಾ' ಎಂದ- ಅವನ ಅಚ್ಚ ದೇಸೀ ಭಾಷೆಯಲ್ಲಿ. ಅವನು ಪುಟಾಣಿ ಸೈಕಲ್ ಏರಿ ಹೊರಟಿದ್ದ. ನಾನು ಅವನ ಪಕ್ಕದಲ್ಲಿ ನಡೆಯುತ್ತಿದ್ದೆ. ಅವನ ಮನೆಗಾಗಿ ಉರಿಬಿಸಿಲಿನಲ್ಲಿ ಒಂದು ಕಿಲೋಮೀಟರ್ ನಡೆಸಿದ. ಮನೆಯೆದುರು ಬಂದವನೇ ಸೈಕಲ್ಲನ್ನು ನೆಲಕ್ಕೆ ತಳ್ಳಿ 'ಯವ್ವೆ ರೇಡೋ ಐತಲ್ಲ ಬೇಕಂತೆ ಕೊಡು' ಎನ್ನುತ್ತ ಒಳನುಗ್ಗಿದ. ಅವನಮ್ಮ ಹೆದರುತ್ತ ಹೊರಬಂದು 'ನಮ್ಮಲ್ಲಿ ಕೈರೇಡೋ ಇಲ್ಲ. ಇರದು ಟೇಪ್‌ರಿಕಾಡು, ಮಾತ್ರ,' ಎಂದು ಕೈಯಲ್ಲಿ ಹಿಡಿದು ತೋರಿಸಿದಳು. ಆ ಹುಡುಗ – ಹಾಗೂ ಅವನ ಜೊತೆ ನಾನೂ ಪೆಚ್ಚಾಗಿ ನಿಂತೆ.

ನಮ್ಮ ಸಮೀಕ್ಷೆಗಾಗಿ ನಾವು ರೇಡಿಯೋ ಇರುವ ಮನೆಗಳನ್ನೇ ಹುಡುಕಿ ಹೋಗಬೇಕಿತ್ತು. ಬರೇ ಇದ್ದರೆ ಸಾಲದು, ಅವರು 'ಕುಸುಮಾಲೆ' ಕಾರ್ಯಕ್ರಮವನ್ನು ಕೇಳಿರಬೇಕು. ಈ ಹುಡುಕಾಟದಲ್ಲಿ ನಮಗೆ ಸ್ಪಷ್ಟವಾಗಿ ಹೊಳೆದ ಸಂಗತಿಗಳು ಇಂತಿವೆ: ನಗರದ ಪ್ರಭಾವಕ್ಕೆ ಒಳಗಾದ ಅಥವಾ ಸೆಮಿ ಅರ್ಬನ್ ಎನ್ನಬಹುದಾದ ಹಳ್ಳಿಗಳಲ್ಲಿ ಬಾನುಲಿಗೆ ಶ್ರೋತೃಗಳು ಬಹಳ ಕಡಿಮೆ. ಸಾಮಾನ್ಯ ಹಳ್ಳಿಗಳಲ್ಲೂ ಸ್ಥಿತಿವಂತರ ಹಾಗೂ ಸಾಮಾನ್ಯವಾಗಿ ಮೇಲ್ವರ್ಗದವರ ಮನೆಗಳಲ್ಲೂ ರೇಡಿಯೋಗೆ ಸ್ಥಾನವಿಲ್ಲ. ಹೆಚ್ಚಾಗಿ ಇನ್ನೂ ರೇಡಿಯೋಗಳು ಇರುವ ಸ್ಥಾನವೆಂದರೆ ಪರಿಶಿಷ್ಟರ ಕಾಲೋನಿಗಳು. ಪಿರಿಯಾಪಟ್ಟಣ ತಾಲ್ಲೂಕಿನ ಬೆಟ್ಟದಪುರದಲ್ಲಿ ನೇರವಾಗಿ ಪರಿಶಿಷ್ಟರ ಕಾಲೋನಿಯನ್ನೇ ಹುಡುಕಿ ಹೋದೆವು. ನಮ್ಮ ತಂತ್ರ ಫಲಿಸಿತು. 'ಕುಸುಮಾಲೆ' ಕಾರ್ಯಕ್ರಮವನ್ನು ಕೇಳಿದ್ದ ಐವರು ನಮಗೆ ಈ ಕಾಲೋನಿಯಲ್ಲೇ ಸಿಕ್ಕರು. ಅದ ಬಿಟ್ಟರೆ ಇಡೀ ಊರಲ್ಲಿ ತಿರುಗಿದರೂ ಬೇರೆ ವರ್ಗದ ಮನೆಗಳಲ್ಲಿ 'ಕುಸುಮಾಲೆ' ಕಾರ್ಯಕ್ರಮವನ್ನು ಕೇಳಿದವರಿರಲಿಲ್ಲ.



ಈಗ ರೇಡಿಯೋಕ್ಕೆ ಗ್ರಾಮೀಣ ಭಾಗದಲ್ಲಿ ಗಂಭೀರ ಶ್ರೋತೃಗಳಾರು? ನಮ್ಮ ಸಮೀಕ್ಷೆಯ ವೇಳೆ ಸ್ಪಷ್ಟವಾದ ಇನ್ನೊಂದು ಅಂಶವೆಂದರೆ ಎಸ್. ಎಸ್. ಎಲ್. ಸಿ. ಅಥವಾ ಪಿಯುಸಿ ಓದಿ, ಮನೆಯಲ್ಲೇ ಕುಳಿತ ಮಕ್ಕಳು ಮುಖ್ಯವಾಗಿ ಹೆಣ್ಣು ಮಕ್ಕಳು, ಆಕಾಶವಾಣಿಯ ನಿಯತ ಕೇಳುಗರು. 'ಕುಸುಮಾಲೆ' ಕಾರ್ಯಕ್ರಮವನ್ನು ೪೦-೫೦ ವಾರ ಬಿಡದೇ ಕೇಳಿದ ಹೆಣ್ಣುಮಕ್ಕಳೂ ಸಿಕ್ಕರು. ಯಾವ ಊರಿಗೆ ಹೋದರೂ ಅಪ್ಪ-ಅಮ್ಮ-ಅಜ್ಜರನ್ನೋ, ಮನೆಯ ಗಂಡಸರನ್ನೋ ಮಾತನಾಡಿಸಿದರೆ ಪ್ರಯೋಜನವಿರಲಿಲ್ಲ. ಹದಿಹರಯದ ಹುಡುಗಿಯರಿದ್ದ ಕಡೆ ಮಾತ್ರ ಕುಸುಮಾಲೆಯ ಬಗ್ಗೆ ತೀವ್ರ ಸ್ಪಂದನಗಳಿದ್ದವು. ಇದು ನಮಗೆ ಎಷ್ಟು ರೂಢಿಯಾಯಿತೆಂದರೆ ಹಳ್ಳಿ ಹಳ್ಳಿಗೆ ಹೋಗಿ ಮನೆಯೆದುರು ನಿಂತು ರೇಡಿಯೋ ಇದೆಯಾ ಎಂಬ ಪುರಾಣ ಆರಂಭಿಸುವ ಬದಲು ನಿಮ್ಮನೆಯಲ್ಲಿ ರೇಡಿಯೋ ಕೇಳುವ ಹುಡುಗಿಯರಿದ್ದಾರಾ ಎಂದು ಕೇಳುವುದೇ ಸಮಂಜಸವೆಂಬುದು ನಮ್ಮ ಸಮೀಕ್ಷಾ ತಂಡದ ಅಭಿಪ್ರಾಯವಾಗಿತ್ತು!

ಈಗ ಹಳ್ಳಿಗೆ ಪ್ಯಾಂಟುಧಾರಿ ಅಪರಿಚಿತರು ಬಂದರೆ ಸಾಲ ಕೊಡಿಸಲಿಕ್ಕೋ, ಕುರಿ ಕೊಡಿಸಲಿಕ್ಕೋ, ಮನೆ ಕೊಡಿಸಲಿಕ್ಕೋ ಬಂದವರು ಎಂಬ ಸಂದೇಹಗಳೇಳುತ್ತವೆ. ನಾವು ಏನನ್ನೂ ಕೊಡಿಸಲಿಕ್ಕೆ ಬಂದವರಲ್ಲ ಒಯ್ಯಲಿಕ್ಕೂ ಬಂದವರಲ್ಲ ಎಂದರೆ ಯಾರೂ ನಂಬುವುದೇ ಇಲ್ಲ. 'ನಿಮ್ಮನೆಯಲ್ಲಿ ರೇಡಿಯೋ ಇದೆಯಾ' ಎಂಬ ನಮ್ಮ ಮೊದಲ ಪ್ರಶ್ನೆಯಿಂದ ಹಳ್ಳಿಜನಗಳು ಮೂರು ರೀತಿಯ ನಿರ್ಣಯಕ್ಕೆ ಬರುತ್ತಿದ್ದರೆಂದು ತೋರುತ್ತಿದೆ. ಮೊದಲಿನದು ಇವರು ರೇಡಿಯೋ ಹಂಚಲು ಬಂದವರು. ಎರಡನೇದು ಇವರು ರೇಡಿಯೋ ಕಂಪನಿಯವರು. ಮೂರನೆಯ ನಿರ್ಣಯ ಇವರು ರೇಡಿಯೋ ರಿಪೇರಿಯವರಿರಬೇಕು ಎಂಬುದು. ಆದಕ್ಕೇ ಅನೇಕ ಮನೆಗಳಲ್ಲಿ ಕೆಟ್ಟು ಹೋಗಿರುವ ರೇಡಿಯೋವನ್ನು ನಮ್ಮೆದುರು ತಂದು

ಕುಕ್ಕಿದರು. ಕೆಲ ಮನೆಗಳಲ್ಲಿ 'ನೀವು ರೇಡಿಯೋ ಕೊಡದೂ ಬ್ಯಾಡಾ ನಾವು ಕೇಳದೂ ಬ್ಯಾಡ' ಎಂಬ ನಿರಪೇಕ್ಷ ಉತ್ತರಗಳು ದೊರೆತವು. ಅನೇಕ ಮನೆಗಳಲ್ಲಿ ನಾವು ಬಾಯಿಬಿಡುವ ಮೊದಲೇ 'ಏನಿಲ್ಲ, ಏನಿಲ್ಲ ಹೋಗಿ' ಎಂದು ಅಸಹನೆಯಿಂದ ಅಟ್ಟಿಬಿಡುವ ಹುನ್ನಾರವೂ ಕಂಡುಬಂತು. ಇದು ಬದಲಾಗುತ್ತಿರುವ ಸಂಸ್ಕೃತಿಯ ದ್ಯೋತಕ. ಒಂದು ಮನೆಯಲ್ಲಿ ಮಾತ್ರ ಹೆಂಗಸೊಬ್ಬಳು ಕಣ್ಣೀರು ಹಾಕುತ್ತ ಊಟ ಮಾಡುತ್ತಿದ್ದಳು. ಅವಳ ಬಳಿ ರೇಡಿಯೋ ಬಗ್ಗೆ ಕೇಳಲು ನಾಲಿಗೆ ಹೊರಳಲಿಲ್ಲ.



ನಾವು ಜಾಗತಿಕ ಹಳ್ಳಿಯ ಬಗ್ಗೆ ಮಾತನಾಡುತ್ತೇವೆ. ಆದರೆ ಭಾರತದ ಹಳ್ಳಿಗಳಲ್ಲಿ ರೇಡಿಯೋ ಒಂದು ಕೆಟ್ಟುಹೋದರೆ ದುರಸ್ತಿಯಾಗುವುದು ವರ್ಷಾನು ಗಟ್ಟಲೆ ಕಾಯಬೇಕಾದ ಕಾಯಕ ಎಂಬುದು ಗೊತ್ತೆ? ಅನೇಕ ಮಹಿಳೆಯರು 'ಕುಸುಮಾಲೆ'ಯನ್ನು ಅರ್ಧದಲ್ಲೇ ಕೈಬಿಡಲು ಕಾರಣ – 'ರೇಡಿಯೋ ಕೆಟ್ಟು ಹೋದ್ದು'. ಮನೆಯವರು ದುರಸ್ತಿ ಮಾಡಿಸಿಕೊಡಲಿಲ್ಲ ಎಂಬುದು ಸಾಮಾನ್ಯ ದೂರು. ಹಳ್ಳಿಗಳಲ್ಲಿ ಕರೆಂಟು ಆಗಾಗ ಕೈಕೊಡುವುದೂ ಮಾಧ್ಯಮಗಳನ್ನು ಜನರಿಂದ ಮಾರುದೂರ ನಿಲ್ಲಿಸಲು ಒಂದು ಕಾರಣ. ಕೇಳುವ ಹೊತ್ತಿಗೆ ಕರೆಂಟಿರಲ್ಲ ಸ್ವಾಮಿ ಏನು ಮಾಡೋದು ಎಂಬುದು ಬಹುಜನರ ಕಂಪ್ಲೇಂಟು. 'ಹೊಸ ಸೆಲ್ಲು ತರಲು ವರ್ಷ ಬೇಕಾಯ್ತು, ಆ ಹೊತ್ತಿಗೆ ಕುಸುಮಾಲೆ ಮುಗಿದಿತ್ತು' ಎಂಬುದು ಇನ್ನೊಂದು ಉತ್ತರ. ಇವೆಲ್ಲ ಭಾರತದಲ್ಲಿ ಮಾಧ್ಯಮ ಬಳಕೆಯ ಮನೋಭಾವದ ವಿಭಿನ್ನ ಮುಖಗಳ ಮೇಲೆ ಬೆಳಕು ಚೆಲ್ಲಿದ ಅನುಭವಗಳು.

ಹುಣಸೂರು ತಾಲ್ಲೂಕಿನ ಸೋಮನಹಳ್ಳಿಯ ಒಂದು ಮನೆ ಮುಂದೆ ನಿಂತಿದ್ದೆ. ಮನೆಯೊಳಗೆ ಮೂವರು ವಯಸ್ಸಿಗೆ ಬಂದ ಹುಡುಗಿಯರು. ನಮ್ಮ ಸಂಭಾಷಣೆ ಹೀಗಿತ್ತು.

'ನಿಮ್ಮಲ್ಲಿ ರೇಡಿಯೋ ಇದೆಯಾ?'

'ಇಲ್ಲ.'

'ಟಿವಿ ಇದೆಯಾ?'

'ಇಲ್ಲ.'

'ಹಾಗಾದ್ರೆ ಮನೆಗೆ ಪೇಪರು ಬರುತ್ತಾ?'

'ಇಲ್ಲ.'

'ಅಂದರೆ ನಿಮಗೆ ಹೊರಜಗತ್ತಿನ ಸಮಾಚಾರ ಹೇಗೆ ತಿಳಿಯುತ್ತೆ?' ಅಕ್ಕ ತಟ್ಟನೆ ಕೇಳಿದಳು. 'ಯಾಕೆ ತಿಳೀಬೇಕು?' ಉತ್ತರ ಹೇಳಲು ನಾನು ಮಿಣುಕಾಡುವಾಗ ತಂಗಿ ಸಮಾಜಾಯಿಷಿ ನೀಡಿದಳು 'ಅಕ್ಕಪಕ್ಕದವರಿಂದ ತಿಳಿಯುತ್ತೆ ಬಿಡಿ.'

ಒಂದೆಡೆ ಈ ಸ್ಥಿತಿಯಾದರೆ ಅದಕ್ಕೆ ತದ್ವಿರುದ್ಧ ಇನ್ನೂ ಅನೇಕ ಕಡೆ. 'ರೇಡಿಯೋ ಬಗ್ಗೆ ಯಾಕೆ ಕೇಳ್ತೀರಾ ಸಾರ್. ಟಿವಿ ಬಗ್ಗೆ ಕೇಳಿ. ಧಾರವಾಹಿ ಬಗ್ಗೆ ಕೇಳಿ. ಎಸ್. ನಾರಾಯಣ್ ಬಗ್ಗೆ ಕೇಳಿ ಎಷ್ಟು ಬೇಕಾದ್ರೂ ಹೇಳ್ತೀವಿ' – ಎಂಬ ಉತ್ತರಗಳು ದಂಗು ಬಡಿಸಿದವು. ಇದು ಭಾರತ! ಇಲ್ಲಿನ ಮಾಧ್ಯಮ ಬಳಕೆಯ ಕುರಿತು ಸರ್ಕಾರಿ ವರದಿಗಳು ಏನೇ ಹೇಳಲಿ, ಹತ್ತಾರು ಹಳ್ಳಿಗಳಲ್ಲಿ ಸುತ್ತಾಡಿ ಕಂಡುಂಡ ಸತ್ಯ – ಇದು.

ಡಾ|| ನಿರಂಜನ ವಾನಳ್ಳಿ
ಎಲ್. ೪೪, ೯ನೇ ಕ್ರಾಸ್, ಮಾನಸ ಗಂಗೋತ್ರಿ, ಮೈಸೂರು-೬

---

*(53ನೇ ಪುಟದಿಂದ)*

ಸಂದರ್ಭದಲ್ಲಿ ಕೆಳಜಾತಿಗಳು ಒಪ್ಪಿಕೊಳ್ಳಲಾಗದು. ಇಲ್ಲಿ ಸಾಂಸ್ಕೃತಿಕ ಅನುಭವಗಳು ಎಚ್ಚರ ವಹಿಸಲು ಸೂಕ್ತವಾಗುತ್ತವೆಯೇ ಹೊರತು, ಆಧುನಿಕ ಯುಗದ ರಾಜಕೀಯ ಶಕ್ತಿಗಳಿಗೆ ಹೊಸ ದಾರಿಗಳನ್ನು ಸೂಚಿಸಲಾರವು. ಹಾಗಾಗಿಯೇ ಶೈಕ್ಷಣಿಕವಾಗಿ ಜಾನಪದವನ್ನು ವೈಭವೀಕರಿಸ ಬಹುದಾದರೂ ಸದ್ಯದ ಆಧುನಿಕ ಜಗತ್ತಿನ ಮುಖಾಮುಖಿಗೆ ದೊಡ್ಡ ಶಕ್ತಿಯಾಗಿ ಇಡಲಾಗದು (ಮೊಗಳ್ಳಿ ಗಣೇಶ್). ಇಲ್ಲಿ ಮತ್ತೊಂದು ಮಾತನ್ನು ಹೇಳುವುದಾದರೆ ಜಾನಪದ ಎನ್ನುವುದು ಒಂದು ಗುಂಪಿನ ಜೀವನಕ್ರಮವೂ ಆಗಿರುವುದರಿಂದ ವಿದ್ವಾಂಸರ, ಸಂಶೋಧಕರ ಅಧ್ಯಯನಗಳ ಫಲಿತಾಂಶಗಳನ್ನೇ ಆ ಗುಂಪು ಕಾಯುತ್ತಾ ಕುಳಿತಿರುವುದಿಲ್ಲ. ಬದಲಿಗೆ ತನಗೆ ಅನುಕೂಲವಾಗುವಂತೆ ತನ್ನ ಜೀವನಕ್ರಮವನ್ನು ಬದಲಾವಣೆ ಮಾಡಿಕೊಳ್ಳುತ್ತಾ ಸಾಗುತ್ತದೆ. ಈ ಕಾರಣದಿಂದಾಗಿಯೇ ಜಾನಪದದ ಯಥಾಸ್ಥಿತಿ – ಬದಲಾವಣೆ ಪ್ರಕ್ರಿಯೆಗಳಿಗೆ ವಿದ್ವಾಂಸರಿಗಿಂತ ವಿಭಿನ್ನವಾದ ಅಭಿಪ್ರಾಯಗಳನ್ನೂ ಜಾನಪದಗಳು ಹೊಂದಿವೆ. ಇಂಥ ಪರಿಸ್ಥಿತಿಯಲ್ಲಿ ''ಜಾನಪದ ಎನ್ನುವುದು ಸುಲಭವಾಗಿ ಸಾವನ್ನಪ್ಪುವುದಿಲ್ಲ; ತನ್ನ ಉಳಿವಿಗಾಗಿ ನಿರಂತರವಾಗಿ ಹೋರಾಡುತ್ತದೆ. ಒಂದುಕಡೆ ಕಣ್ಮರೆಯಾದರೆ ಮತ್ತೊಂದು ಕಡೆ ತಲೆ ಎತ್ತಿಕೊಳ್ಳುತ್ತದೆ. ಅದರ ಯಾವುದೋ ಪ್ರಕಾರ ತನ್ನ ಪ್ರಖರತೆಯನ್ನು ಕಳೆದುಕೊಂಡರೆ ಇನ್ನೊಂದು ಪ್ರಕಾರ ಹೊಸರೂಪಿನಲ್ಲಿ ಜನಜೀವನವನ್ನು ತಬ್ಬುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಅಣುಯುಗದಲ್ಲೂ ಜಾನಪದ ಸಂಪೂರ್ಣವಾಗಿ ನಾಶ ಪಡೆಯಿತು ಎನ್ನುವುದಕ್ಕೆ ಸಾಧ್ಯವಾಗುವುದಿಲ್ಲ. ಅದರ ಅನೇಕ ಪ್ರಕಾರಗಳು ಜನಜೀವನದಲ್ಲಿ ಆಳವಾಗಿ ಬೇರುಬಿಟ್ಟು ಶಾಶ್ವತವಾಗಿ ಉಳಿದುಹೋಗುತ್ತದೆ'' ಎನ್ನುವ ಫಾಟರ್ ಎಂಬ ವಿದ್ವಾಂಸನ ಮಾತುಗಳು ಉಲ್ಲೇಖಾರ್ಹ. ಪಾಶ್ಚಾತ್ಯ ವಿಚಾರಗಳನ್ನು ತಿರಸ್ಕರಿಸುವ ಭರದಲ್ಲಿ ಫಾಟರ್ ಅಂಥವರ ಸಾರ್ವಕಾಲಿಕ ಸತ್ಯಗಳನ್ನು ಹೊತ್ತ ಮಾತುಗಳು ನಮ್ಮ ವಿದ್ವಾಂಸರ ಗಮನಕ್ಕೆ ಬರದೇ ಇರುವುದು ಒಂದು ವಿಪರ್ಯಾಸ. ಜಾನಪದ ಬದಲಾವಣೆಗೊಳ್ಳಬೇಕು ಎಂದು ಒಪ್ಪುವ ವಿದ್ವಾಂಸರು, ಒಂದು ಮಹಾಕಾವ್ಯವನ್ನು ತಂಬೂರಿ ಹಿಡಿಯದೇ ಆಧುನಿಕ ಮಾಧ್ಯಮದ ಮುಂದೆ ನಿಂತು ಹಾಡುವುದನ್ನೋ ಅಥವಾ ತೊಗಲುಗೊಂಬೆ ಯಾಟಗಳ ಸ್ಥಾನವನ್ನು ತುಂಬಬಲ್ಲ ಅನಿಮೇಷನ್ ಚಿತ್ರಗಳನ್ನೋ ನಿಜವಾದ ಜಾನಪದ ಎಂದು ಒಪ್ಪಿಕೊಳ್ಳಲಾರರು; ಇದು ಕೂಡ ನಮ್ಮ ವಿದ್ವಾಂಸರ ಮನಸ್ಸಿನ ಗೊಂದಲವನ್ನು ತಿಳಿಸುತ್ತದೆ. ಈ ಗೊಂದಲ ಮನಸ್ಥಿತಿಯಿಂದ ಬಿಡುಗಡೆಗೊಂಡಾಗ ಮಾತ್ರ ವಿಶ್ವಪದದ ಸ್ವರೂಪವನ್ನು ಗುರುತಿಸಿಕೊಳ್ಳಲು ಸಾಧ್ಯ ಹಾಗೂ ಹಳೆಯ ಕಾಲದ ಜಾನಪದವನ್ನು ವಿಶ್ಲೇಷಿಸಲು ಪಾಶ್ಚಾತ್ಯರ ಸಿದ್ಧಾಂತಗಳನ್ನು ಬಳಸಿಕೊಳ್ಳಲು ನಿರಾಕರಿಸಿದ ಕನ್ನಡದ ದೇಶೀ ವಿದ್ವಾಂಸರು ಒಂದು ದೇಶೀ ಮನೋಧರ್ಮದ ಸಿದ್ಧಾಂತವನ್ನಾದರೂ ಸೃಷ್ಟಿಸಿ ಕೊಂಡಿಲ್ಲದಿರುವುದು ನಮ್ಮ ಬೌದ್ಧಿಕ ಬಡತನವನ್ನು ಸೂಚಿಸುತ್ತಿದೆ. ಇತ್ತೀಚೆಗೆ ಈ ಎಲ್ಲಾ ಸಿಕ್ಕುಗಳಿಂದ ತಮ್ಮನ್ನು ಬಿಡಿಸಿಕೊಂಡು ಉತ್ತಮ ಆಲೋಚನಾ ಕ್ರಮಗಳ ಕಡೆಗೆ ಕೆಲವು ವಿದ್ವಾಂಸರು ಮುಖ ಮಾಡಿರುವುದು ಆಶಾದಾಯಕ.

ಹಳೆಯ ಜಗತ್ತಿನ ಜಾನಪದದ ನಂಬಿಕೆಗಳಿಂದ ಹೊಸಯುಗದ ಜಾನಪದ (ವಿಶ್ವಪದ)ವನ್ನು ವಿಶ್ಲೇಷಿಸಲು ಹೊರಟಾಗ ಅನೇಕ ತೊಡಕುಗಳು, ಗೊಂದಲಗಳು ಸೃಷ್ಟಿಯಾಗುತ್ತವೆ. ಆದ್ದರಿಂದ ಇವುಗಳ ಪ್ರತ್ಯೇಕ ಅಸ್ತಿತ್ವಗಳ, ಅನನ್ಯತೆಗಳ ಅರಿವು ಇರಬೇಕಾಗುತ್ತದೆ. ಅಂದರೆ ಹೊಸಜಗತ್ತಿನ ವಿಶ್ವಪದದ ಅಧ್ಯಯನ ಕ್ರಮಗಳು ಬೇರೆಯೇ ಆಗಿರಬೇಕಾಗುತ್ತದೆ. ಇಂತಹ ಅಧ್ಯಯನ ಕ್ರಮಗಳು ಯಾವುವು, ಅವು ಹೇಗಿರಬೇಕು, ಎಂಬುದನ್ನು ಕಂಡುಕೊಳ್ಳಲು ಜಗತ್ತಿನ ಜಾನಪದ ವಿದ್ವಾಂಸರು ತಡಕಾಡುತ್ತಿದ್ದಾರೆ. ಇವರಲ್ಲೂ ಅನೇಕ ಗೊಂದಲಗಳಿವೆಯಂತೆ. ಜಗತ್ತಿನ ಜಾನಪದದ ಅಧಿಕೃತ ವಕ್ತಾರನೆನಿಸಿದ್ದ ಅಲನ್ ಡಂಡಸ್ ಕೂಡ ಭವಿಷ್ಯದ ಜಾನಪದದ ಹೊಸ ಅಧ್ಯಯನ ಕ್ರಮಗಳ ಬಗ್ಗೆ ನಿಖರವಾಗಿ ಏನನ್ನೂ ಹೇಳದವನಾಗಿದ್ದಾನೆ. ಅಷ್ಟೇ ಅಲ್ಲದೇ, ಜಾನಪದ ಶಾಸ್ತ್ರಕ್ಕೆ ಭವಿಷ್ಯವಿಲ್ಲ ಎಂದು ಭಾವಿಸಿ ವಿವಿಧ ಶಾಸ್ತ್ರಗಳಲ್ಲಿ ಜಾನಪದ ಅಧ್ಯಯನವನ್ನೂ ವಿಲೀನ ಕೂಡ ಮಾಡಲಾರಂಭಿಸಿದ್ದಾರಂತೆ. ಇಂಥ ಸಂದರ್ಭದಲ್ಲಿ ಪ್ರಸ್ತುತ ಜಾಗತಿಕ ಮತ್ತು ದೇಶೀ ನೆಲೆಗಳಲ್ಲಿ ಆಗುವ ಪ್ರಕ್ರಿಯೆಗಳನ್ನು ಸರಿಯಾದ ಕ್ರಮದಲ್ಲಿ ಗ್ರಹಿಸಿ ಜಾನಪದ ಅಧ್ಯಯನವನ್ನು ಉಳಿಸಿ ಬೆಳೆಸುವ ಭಾರ ಜಗತ್ತಿನ (ದೇಶಿ ವಿದ್ವಾಂಸರೂ ಸೇರಿದಂತೆ) ವಿದ್ವಾಂಸರ ಮೇಲಿದೆ. ಮುಂದಿನ ಬೆಳವಣಿಗೆ ತುಂಬಾ ಕುತೂಹಲಕರವಾಗಿದ್ದು, ಯಾವುದಕ್ಕೂ ಕಾದು ನೋಡಬೇಕಿದೆ.

*(ಚಿತ್ರಕೃಪೆ : ಕರ್ನಾಟಕ ಜನಪದ ಕಲೆಗಳ ಕೋಶ)*

ಎಸ್. ಎಂ. ಮುತ್ತಯ್ಯ
ಸಂಶೋಧಕರು, ಕನ್ನಡಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರ ಘಟ್ಟ - ೫೭೭ ೪೫೧, ಶಿವಮೊಗ್ಗ ಜಿಲ್ಲೆ

# ಗ್ರಹಗಳ ವಿದಾಯ



ಕಳೆದ ಕೆಲವು ತಿಂಗಳುಗಳಿಂದ ನಡೆಯುತ್ತಿದ್ದ ಗ್ರಹಗಳ ಓಟ ಈಗ ಕುತೂಹಲಕಾರಿ ಘಟ್ಟವನ್ನು ತಲುಪಿದೆ. ಈ ಓಟದ ಸ್ಪರ್ಧೆಯಲ್ಲಿ ಯಾರಿಗೂ ಬಹುಮಾನ ಇಲ್ಲ; ಅಲ್ಲದೆ ಮುಕ್ತಾಯವನ್ನು ಸೂಚಿಸುವ ಗೆರೆಯೂ ಇಲ್ಲ. ಆದ್ದರಿಂದ ಪರಸ್ಪರ ಹಸ್ತಲಾಘವ ಮುಗಿಸಿದ ಗ್ರಹಗಳು ತಂತಮ್ಮ ಗತಿಯಲ್ಲೇ ಮುಂದುವರೆಯುತ್ತವೆ. ಸಂಜೆಯ ಆಕಾಶಕ್ಕೆ ವಿದಾಯ ಹೇಳಿ ''ರಜಾ'' ತೆಗೆದುಕೊಳ್ಳುತ್ತವೆ. (ಅಂದರೆ ಸೂರ್ಯನೊಟ್ಟಿಗೆ ಉದಯಿಸಿ, ಕಂತುತ್ತವೆ). ಆಮೇಲೆ ಬೆಳಗಿನ ಝೂವ ಕಾಣಿಸಿಕೊಳ್ಳುತ್ತವೆ.

ಮೇ ತಿಂಗಳ ಮೊದಲ ವಾರದಲ್ಲಿ ಸಂಜೆಯ ಆಕಾಶದಲ್ಲಿ ಸೂರ್ಯಾಸ್ತವಾಗುತ್ತಿದ್ದ ಹಾಗೆಯೇ ಪಶ್ಚಿಮದ ಅಂಚಿನಲ್ಲಿ ಪ್ರಕಾಶಮಾನವಾದ ಶುಕ್ರ, ಅದರ ಆಸುಪಾಸಿನಲ್ಲೇ ಶನಿ, ಮಂಗಳ ಮತ್ತು ಬುಧ ಕಾಣುತ್ತವೆ. ದಿನ ದಿನಕ್ಕೆ ಇನ್ನೂ ಅಂಚಿಗೆ ಸರಿಯುವ ಇವನ್ನು ಸಂಧ್ಯಾ ಪ್ರಕಾಶದಲ್ಲಿ ಹುಡುಕುವುದೇ ಕಷ್ಟವಾಗುವುದು ತಿಂಗಳ ಮಧ್ಯಕ್ಕೆ. ತಿಂಗಳ ಕೊನೆಯ ಹೊತ್ತಿಗೆ ಸಂಜೆಯಲ್ಲಿ ಕಾಣಸಿಗುವ ಗ್ರಹ ಗುರು ಒಂದೇ.

ಗ್ರಹಗಳನ್ನು ಗುರುತಿಸುವಲ್ಲಿ ಈ ತಿಂಗಳು ಚಂದ್ರನ ಸಹಾಯ ಪಡೆಯುವಂತಿಲ್ಲ. ಏಕೆಂದರೆ ಬಾಲಚಂದ್ರ ಶುಕ್ರದ ಹೊರತಾಗಿ ಉಳಿದವುಗಳ ಪಕ್ಕ ಇರುವುದನ್ನು ಕಾಣುವಂತಿಲ್ಲ. ಮೇ ೧೨ ರಂದು ಅಮಾವಾಸ್ಯೆ - ಮಧ್ಯಾಹ್ನ. ೪:೧೫ ಕ್ಕೆ ಆದ್ದರಿಂದ ೧೩ ರಂದೂ ಬಾಲಚಂದ್ರನನ್ನು ಕಾಣುವ ಸಾಧ್ಯತೆಯೇ ಇಲ್ಲ. ೧೪ ರಂದು ಸಂಜೆ ಸಂಧ್ಯಾಪ್ರಕಾಶದ ಹೊಂಬಣ್ಣದಲ್ಲಿ ಚಂದ್ರ ಮತ್ತು ಶುಕ್ರ ಎರಡನ್ನು ಮಾತ್ರ ಗುರುತಿಸಲು ಸಾಧ್ಯವಾಗುವುದು. ಉಳಿದ ಮೂರು ಗ್ರಹಗಳು ಹೊಂಬಣ್ಣದಲ್ಲಿ ಕರಗಿ ಹೋಗಿಬಿಡುತ್ತವೆ. ೧೫ ರಂದು ಗುರುಗ್ರಹದ ಸಮೀಪ ಕಾಣುವ ಚಂದ್ರ, ೧೬ ಕ್ಕೆ ಅದನ್ನು ದಾಟಿ ಮುಂದೆ ಸರಿದಿರುವುದನ್ನು ಗಮನಿಸಬಹುದು.

೨೬ ರಂದು ಹುಣ್ಣಿಮೆ. ಇದಕ್ಕೆ ಬುದ್ಧ ಪೂರ್ಣಿಮೆ, ವೈಶಾಖ ಪೂರ್ಣಿಮೆ ಎಂದೆಲ್ಲಾ ಹೆಸರುಗಳಿವೆ. ಆದಿನ ಚಂದ್ರನ ಪಕ್ಕ ಕಾಣುವ ಕ್ಷೀಣ ನಕ್ಷತ್ರಗಳಲ್ಲೊಂದು ವಿಶಾಖಾ.

ಕಳೆದ ಮೂರ್ನಾಲ್ಕು ತಿಂಗಳಿಂದ ಸಂಜೆಯ ಹೊತ್ತು ಕಂಗೊಳಿಸುತ್ತಿದ್ದ ಮಹಾವ್ಯಾಧ (ಒರೈಯನ್) ಈಗ ಪಶ್ಚಿಮದ ಅಂಚಿಗೆ ಸರಿದಿದೆ. ಸೂರ್ಯಾಸ್ತವಾದ ಒಂದು ಗಂಟೆಯೊಳಗಾಗಿ ಮುಳುಗಿಹೋಗುತ್ತದೆ. ಗ್ರೀಕರ ಪುರಾಣಗಳಲ್ಲಿ ಒರೈಯನ್ ಮಹಾ ಪರಾಕ್ರಮಿ. ''ತನ್ನನ್ನು ಮೀರಿಸುವವರ್‍ಯಾರೂ ಜಗತ್ತಿನಲ್ಲಿಲ್ಲ'' ಎಂದು ಬಡಾಯಿಯನ್ನು ಕೊಚ್ಚಿಕೊಂಡಿದ್ದ. ಅವನಿಗೆ ಬುದ್ಧಿ ಕಲಿಸುವುದಕ್ಕಾಗಿಯೇ ಬಂದದ್ದು ಚೇಳು-ವೃಶ್ಚಿಕ. ಅದು ಅವನನ್ನು ಕೊಂದಿತು. ಪೂರ್ವದಂಚಿನಲ್ಲಿ ವೃಶ್ಚಿಕ ರಾಶಿಯ ದಯವಾಗುವಾಗ ಪಶ್ಚಿಮ ದಿಗಂತದ ಕೆಳಗೆ ಒರೈಯನ್ ಕಂತು ಬಿಟ್ಟಿರುತ್ತದೆ. ಇದೇ ಕಥೆಯ ಸಾರ.




*ಇಲ್ಲಿ ಕೊಟ್ಟಿರುವ ನಕ್ಷೆ ಮೇ ೬ಕ್ಕೆ ಅನ್ವಯವಾಗುವುದಾದರೂ ತಿಂಗಳುದ್ದಕ್ಕೂ ಬಳಸಬಹುದು. ಪಶ್ಚಿಮದ ಅಂಚಿನ ನಾಲ್ಕೂ ಗ್ರಹಗಳ ಭಾಗ ತಿಂಗಳ ಕೊನೆಯಲ್ಲಿ ನೋಡಲು ಸಿಗುವುದಿಲ್ಲ*

ಒರೈಯನ್‌ನೊಡನೆ ಆಕಾಶದ ಎಲ್ಲ ಪ್ರಕಾಶಮಾನ ನಕ್ಷತ್ರಗಳೂ ಮಾಯವಾದುವೇನೋ ಎಂಬ ಭ್ರಮೆ ಉಂಟಾಗುವುದು ಸಹಜ. ಪೂರ್ವದಲ್ಲಿ ಕೆಂಪು ಬಣ್ಣದ ಸ್ವಾತಿ ನಕ್ಷತ್ರ; ಇದು ಬೂಟಿಸ್ ಎಂಬ ಪುಂಜಕ್ಕೆ ಸೇರಿದೆ. ನೀಲಿ ಬಣ್ಣದ ಚಿತ್ತಾ ನಕ್ಷತ್ರ; ಇದು ಕನ್ಯಾ ರಾಶಿಗೆ ಸೇರಿದೆ. ಇವು ಏಕಾಂಗಿಗಳಾಗಿ ಕಾಣುತ್ತವೆ. ಹಸ್ತ ಎಂಬುದೊಂದು ಪುಂಜವನ್ನು ಸುಲಭವಾಗಿ ಗುರುತಿಸಬಹುದು. ನೆತ್ತಿಯಲ್ಲಿ ಸಿಂಹರಾಶಿ, ಉತ್ತರದಲ್ಲಿ ಸಪ್ತರ್ಷಿ ಮಂಡಲ, ಸಪ್ತರ್ಷಿ ಮಂಡಲದ ಆರನೆಯ ನಕ್ಷತ್ರವೇ ವಶಿಷ್ಠ - ಇದರೊಡನೆ ಅರುಂಧತಿಯನ್ನೂ ಕಾಣಲು ಸಾಧ್ಯವಾದರೆ ಆಕಾಶ ಶುಭ್ರವಾಗಿದೆ ಎಂದರ್ಥ. ದಕ್ಷಿಣಕ್ಕೆ ಕಣ್ಣು ಹಾಯಿಸಿ. ಅಲ್ಲಿ ಕಾಣುವ ತ್ರಿಶಂಕು (ದಕ್ಷಿಣ ಶಿಲುಬೆ, ಅಥವಾ ಕ್ರಕ್ಸ್) ಪುಂಜವನ್ನು ಗಮನಿಸಿದಿರಾದರೆ, ಆಕಾಶ ಗಂಗೆಯ ಇನ್ನೊಂದು ಭಾಗದ ಸೌಂದರ್ಯ ನಿಮಗೆ ಪರಿಚಯವಾಗುತ್ತದೆ. ಅಲ್ಲಿ ಹರಡಿರುವ ನೆಬ್ಯುಲಗಳು, ನಕ್ಷತ್ರ ಗುಚ್ಛಗಳು ಆಕರ್ಷಕವಾಗಿವೆ.

ಮೇ ತಿಂಗಳಲ್ಲಿ ಉಲ್ಕಾವೃಷ್ಟಿಯ ವೀಕ್ಷಣೆಗೂ ಅವಕಾಶವಿದೆ. ಹ್ಯಾಲೀ ಧೂಮಕೇತುವಿನ ತುಣುಕುಗಳನ್ನು ಭೂಮಿ ಸಮೀಪಿಸಿದಾಗ ಅವು ಉಲ್ಕೆಗಳಾಗಿ ಬೀಳುವುವು. ಗಂಟೆಗೆ ೧೫-೨೦ ಕಾಣಬಹುದು. ಮೇ ತಿಂಗಳ ಮೊದಲ ವಾರದಲ್ಲಿ ವೃಷ್ಟಿಯ ಗರಿಷ್ಠ ಚಟುವಟಿಕೆ-ಬೆಳಗಿನ ಝೂವ. ಕುಂಭರಾಶಿಯಿಂದ ಹೊರಟಂತೆ ಕಾಣುವುದರಿಂದ ಈ ವೃಷ್ಟಿಗೆ ಈಟಾ ಅಕ್ವಾರಿಡ್ಸ್ ಎಂಬ ಹೆಸರಿದೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು-೧

## ಒಳ್ಳೆಯ ಓದು



### ಬಸವ ಪ್ರಜ್ಞೆ
*ರಂಜಾನ್ ದರ್ಗಾ*

**ಪುಟ : 56** **ಬೆಲೆ : ರೂ. 15**

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ-583103

*ಜಡ ಸಂಸ್ಕೃತಿಯನ್ನು ನಿರಾಕರಿಸಿ ಚೈತನ್ಯದ ಚಿಲುಮೆ ಚಿಮ್ಮಿಸಿದ ಜಗಜ್ಯೋತಿ ಬಸವೇಶ್ವರ ಪ್ರತಿಪಾದಿಸಿದ ದಯೆಯೇ ಧರ್ಮದ ಮೂಲವೆಂಬ ಆಚರಣೆ ಇಂದು ಸಾರ್ವತ್ರಿಕವಾಗಿ ನಡೆಯ ಬೇಕಾದ್ದು ಬಹು ಮುಖ್ಯ. ಮಾರ್ಕ್ಸ್‌ವಾದದ ಸಮಾನತೆ ಹಾಗೂ ಕಾಯಕದ ಮಹತ್ವವನ್ನು ಎಂಟು ಶತಮಾನಗಳ ಹಿಂದೆಯೇ ಕ್ರಾಂತಿಯ ಕಹಳೆ ಊದಿ ಜನ ಜಾಗೃತಿ ಮೂಡಿಸಿದ ಬಸವಣ್ಣನ ಅಂತರಂಗದ ಪ್ರಜ್ಞೆ ಇಂದು ಕೆಲಸ ಮಾಡಬೇಕಾಗಿದೆ. ಸಮಾಜದ ಸಂಪತ್ತನ್ನು ಸಮಾಜಕ್ಕೆ ವಿನಿಯೋಗಿಸುವ ಅರ್ಥಶಾಸ್ತ್ರದ ತಿರುಳೂ ಈ ಲೇಖನಗಳಲ್ಲಿದೆ.*

### ಬಹುಜನ ಕಾವ್ಯ
*ಸಂ : ಡಾ|| ವಿ. ಮುನಿವೆಂಕಟಪ್ಪ*

**ಪುಟ : 160** **ಬೆಲೆ : ರೂ. 100**

**ವಿಚಾರವಾದಿ ಪ್ರಕಾಶನ**, 1240, 3ನೇ ಕ್ರಾಸ್, ಕುವೆಂಪುನಗರ ಮೈಸೂರು-570 023

*ದಲಿತ ಬಂಡಾಯದ ನಂತರ ಮೂಡಿದ ಸಮಾನತೆಯ ಪ್ರಜ್ಞೆಯ ಸಂಕೇತವಾಗಿ ಬಹಳಷ್ಟು ಕ್ರಾಂತಿಕಾರಿ ಸಾಹಿತ್ಯ ಸಮಾಜದ ಕೆಳವರ್ಗದ ಎಚ್ಚೆತ್ತ ದನಿಯಾಗಿ ನಮ್ಮ ಮುಂದಿದೆ. ಇಲ್ಲಿ ಶತಮಾನಗಳಿಂದ ಧ್ವನಿ ಕಳೆದುಕೊಂಡವರು ಮಾತನಾಡತೊಡಗಿದಾಗ ಒಂದು ಸಮಾಜದ ಮುಚ್ಚಿಟ್ಟ - ಅದುಮಿದ ಭಾವನೆಗಳೇನೆಂದು ನಮಗೆ ಮನಗಾಣಿಸುವ ಪ್ರಯತ್ನವಾಗಿ ಶೋಷಣೆಯ ಮುಖಗಳನ್ನು ಕವನ-ಕಾವ್ಯಗಳ ಮೂಲಕ ನೀಡಲಾಗಿದೆ.*



### ವಿಶ್ವನಾಥ ಕಾರ್ನಾಡರ ಆಯ್ದ ಕತೆಗಳು
*ವಿಶ್ವನಾಥ ಕಾರ್ನಾಡ*

**ಪುಟ : 236** **ಬೆಲೆ : ರೂ. 80**

**ಪಲ್ಲವಿ ಪ್ರಕಾಶನ**, 508, ಭಕ್ತಿ, ಓಂನಗರ ಅಂಧೇರಿ (ಪೂ) ಮುಂಬಯಿ- 400 099

*ಇದು ಇಪ್ಪತ್ತೈದು ಕಥೆಗಳ ಸಂಕಲನ. ಪ್ರತಿ ಕ್ಷಣ ಕ್ಷಣಗಳಲ್ಲಿ ನಡೆಯುವ ಘಟನೆಗಳೂ ಕಥೆಗೆ ವಸ್ತುಗಳೇ ಆಗಬಲ್ಲವು. ಚಲನಶೀಲ ಬದುಕನ್ನು ಹಿಡಿದು ನಿಲ್ಲಿಸಲಾಗದೆ ನಿರಂತರ ವಾಹಿನಿಗಳಾಗಿ ಕಥೆಗಳು ಮುಂದುವರಿಯುತ್ತವೆ. ಮನುಷ್ಯ ಸಂಬಂಧಗಳಲ್ಲಿ ಏನೆಲ್ಲ ಇದ್ದರೂ ಏನೂ ಇಲ್ಲದೆ ಸೊನ್ನೆಗಳಾಗಿ ಬದುಕು ಸವೆಸುವ, ಪ್ರಾಮಾಣಿಕರಾಗಿರ ಬೇಕಾದ ಹಂಬಲ ಇದ್ದಷ್ಟೂ ಅದರಿಂದ ವಿಮುಖರಾಗಬೇಕಾದ ಅನಿವಾರ್ಯತೆ - ಇವೆಲ್ಲ ಇಲ್ಲಿನ ಕಥಾವಸ್ತುಗಳು.*



### ಅನಂತಮೂರ್ತಿಯವರ ಸಾಹಿತ್ಯದ ಒಲವು - ನಿಲುವುಗಳು
(ವಿಮರ್ಶೆ) *ಮಾಧವ ಕುಲಕರ್ಣಿ*

**ಪುಟ : 120** **ಬೆಲೆ : ರೂ. 45**

**ತನುಮನು ಪ್ರಕಾಶನ**, 42, 'ಜ' ಬ್ಲಾಕ್, 3ನೇ ತಿರುವು ರಾಮಕೃಷ್ಣನಗರ, ಮೈಸೂರು-570 023

*ತಮ್ಮ ವಿಮರ್ಶೆಗಳಿಗೆ ಜ್ಞಾನಪೀಠ ಪ್ರಶಸ್ತಿ ವಿಜೇತರನ್ನೇ ಆಯ್ಕೆ ಮಾಡಿಕೊಳ್ಳುವ ಶ್ರೀ ಮಾಧವಕುಲಕರ್ಣಿ ಕಾರಂತ-ಕಾರ್ನಾಡರ ಸಾಹಿತ್ಯವನ್ನು ಈಗಾಗಲೇ ವಿಮರ್ಶಿಸಿ ಮುಂದಿನದು ಬೇಂದ್ರೆ ಕಾವ್ಯವೆಂದು ತಿಳಿಸಿದ್ದಾರೆ. ಒಟ್ಟಿನಲ್ಲಿ ಉತ್ತಮ ವಿಮರ್ಶೆಗಳ ಮಹಾಪೂರವೇ ಓದುಗರೆಡೆಗೆ ಹರಿದು ಬಂದಿದೆಯೆಂದರೆ ಅತಿಶಯೋಕ್ತಿಯೇನಲ್ಲ. ತೂಕ-ಮೌಲ್ಯ-ಗುಣಮಟ್ಟ ಅಳೆಯುವಲ್ಲಿ ವಿಮರ್ಶಕರು ದಾಕ್ಷಿಣ್ಯ ತೋರದೆ ನಿಖರತೆಯತ್ತ ಸಾಗಿದ್ದಾರೆ.*



### ಬದುಕು ಬಂದೀಖಾನೆ
*ನೀಲಾ ಕೆ.*

**ಪುಟ : 64** **ಬೆಲೆ : ರೂ. 45**

**ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ**, 2ನೇ ಮಹಡಿ, ಸಂಖ್ಯೆ 12, 18ನೇ ಮುಖ್ಯರಸ್ತೆ, ಸಂಪಂಗಿರಾಮ ನಗರ, ಬೆಂಗಳೂರು-560 027

*ಹೋರಾಟದ ದಾರಿಯುದ್ದಕ್ಕೂ ಚುಚ್ಚುವ ಮುಳ್ಳುಗಳಲ್ಲದೆ ಹೂವುಗಳಿರುತ್ತವೆಯೆ? ನೊಂದವರಿಗೆ ನ್ಯಾಯ ದೊರಕಿಸಿ ಕೊಡುವ ಹೋರಾಟದ ಮುಂಚೂಣಿಯಲ್ಲಿರುವ ಸೋದರಿ ನೀಲಾ ಬಡವರ ನೋವಿನ ಆಳವನ್ನು ರೈತರ ಬಾಳಿನ ಗೋಳನ್ನು ಮಹಿಳೆಯರ ಸಮಸ್ಯೆಗಳನ್ನು ನಮಗೆ ತಿಳಿಸುತ್ತಾರೆ. ಮಾತ್ರವಲ್ಲ ಅವುಗಳ ಮೂಲವನ್ನೂ ಶೋಧಿಸಿ ಬೊಟ್ಟುಮಾಡಿ ತೋರಿಸುತ್ತಾರೆ. ನಮ್ಮ ದೇಶದ ನ್ಯಾಯ ವ್ಯವಸ್ಥೆ ಬಡವರ ಕಣ್ಣೀರನ್ನು ಒರೆಸುವ ಬದಲು ಅದನ್ನು ಇಮ್ಮಡಿಗೊಳಿಸುತ್ತ ಹೋಗುವ ವ್ಯಂಗ್ಯವನ್ನಿಲ್ಲಿ ಕಾಣಬಹುದು.*



### ಕಣ್ಮುಚ್ಚಿ ಕಂಡವರು (ಕವನ ಸಂಗ್ರಹ)
*ಶಂಕರ ಪಾಟೀಲ*

**ಪುಟ : 60** **ಬೆಲೆ : ರೂ. 35**

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ-583 103

*ಬೆಳಕಿಗಾಗಿ ಹಂಬಲಿಸುವ ಕವಿ ಶಂಕರ ಪಾಟೀಲರು ಚಿತ್ರಕಲಾವಿದರೂ ಹೌದು. ಕವನದಲ್ಲಿ ಹೇಳಲಾಗದ್ದನ್ನು ಚಿತ್ರಕಲೆಯಲ್ಲೂ, ಚಿತ್ರಗಳಲ್ಲಿ ಬಿಂಬಿಸಲಾರದ್ದನ್ನು ಕವಿತೆಗಳಲ್ಲೂ ಅವರು ಸಮರ್ಥವಾಗಿ ಹೇಳಿ ಮುಗಿಸಿದ್ದಾರೆ. ಕಣ್ಣಿನ ಬೆಳಕನ್ನು ಸೂರ್ಯನ ಬೆಳಕಿನೊಂದಿಗೆ ಅಳೆದು ನೋಡಿದ್ದಾರೆ. ಬಾಳಿನ ಮಗ್ಗಲುಗಳಲ್ಲೆಲ್ಲ ಬಣ್ಣದ ಬದುಕನ್ನು ಹುಡುಕುವ ಕವಿಗೆ ಕಣ್ತೆರೆದರೂ ಬೆಳಕು, ಕಣ್ಮುಚ್ಚಿದರೂ ಅಂತರಂಗದಲ್ಲಿ ಬಣ್ಣದ ಬೆಳಕು! ಕವಿತೆಗಳ ಉದ್ದಕ್ಕೂ ಅವರು ಬೆಳಕು ಚೆಲ್ಲಿದುದು ಸತ್ಯದ ಕಡೆಗೆ ಮಾತ್ರ !*



### ಹರಿದ ಸ್ಕರ್ಟಿನ ಹುಡುಗಿ (ಕವನ ಸಂಕಲನ)
*ಮಾಧವಿ ಭಂಡಾರಿ*

**ಪುಟ : 70** **ಬೆಲೆ : ರೂ. 40**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರ ಕೊಡ್ಲ, ಅಂಕೋಲಾ-581314

*ರವಿ ಕಾಣದ್ದನ್ನು ಕವಿ ಕಂಡ ಎನ್ನುವಂತೆ ಅಡಗಿ ಕುಳಿತ ಈ ಲೋಕದ ಸಂವೇದನೆಗಳನ್ನು ಪ್ರಯತ್ನ ಪಟ್ಟು ಹುಡುಕಿ ತೆಗೆದು ಜನರಿಗೆ ನಿವೇದಿಸುವ ಆತುರ ಕವನ ಬರೆಯುವವರಿಗೆ. ಇಲ್ಲೂ ಬದುಕಿನಂಗಳದಿಂದ ಆಯ್ದ ಅನೇಕ ಅನುಭವಗಳು ಸಾಲಾಗಿ ಜೋಡಿಸಲ್ಪಟ್ಟು ಹಾಡುಗಳಾಗಿ ನಮ್ಮನ್ನು ಕ್ಷಣಕಾಲ ಮೈಮರೆಸುತ್ತವೆ. ಈ ಜಡ್ಡುಗಟ್ಟಿದ ಸಮಾಜದಲ್ಲಿ ಪರಿವರ್ತನೆಯ ಗಾಳಿ ಬೀಸಿದರೂ ಕೆಲವಂಶಗಳು ಹಾಗೇ ಉಳಿದು ಬಿಡುವ ಬಗ್ಗೆ ಆತಂಕ ವ್ಯಕ್ತ ಪಡಿಸುವ ಕವಯತ್ರಿಯೊಂದಿಗೆ ನಮ್ಮ ಅನಿಸಿಕೆಗಳೂ ಬೆರೆಯುತ್ತವೆ.*



### ಬಿಸಿಲ ಬಯಲಲ್ಲಿ (ಲೇಖನಗಳು)
*ಸಿರಿಗೇರಿ ಯರಿಸ್ವಾಮಿ*

**ಪುಟ : 75** **ಬೆಲೆ : ರೂ. 55**

**ಅನ್ನಪೂರ್ಣ ಪ್ರಕಾಶನ**, ಸಿರಿಗೇರಿ-583 120, ಸಿರಗುಪ್ಪ ತಾ|| ಬಳ್ಳಾರಿ ಜಿ||

*ಈಗಾಗಲೇ ಪ್ರತಿಷ್ಠಿತ ದಿನಪತ್ರಿಕೆ ಪ್ರಜಾವಾಣಿಯಲ್ಲಿ ಬೆಳಕು ಕಂಡ ಚಿಕ್ಕ-ಚೊಕ್ಕ ಲೇಖನಗಳ ಸಂಕಲನ ರೂಪ. ಅನೇಕ ಮಾಹಿತಿಗಳನ್ನು ಓದುಗರಿಗೆ ನೀಡುವಲ್ಲಿ ಹಾಗೂ ಹತ್ತು ಹಲವು ವಿಷಯಗಳನ್ನು ಎಲ್ಲೂ ಮುಖ್ಯ ವಿಷಯಗಳು ಬಿಟ್ಟು ಹೋಗದಂತೆ ಜತನದಿಂದ ಬರೆಯಬಲ್ಲವರು ಶ್ರೀ ಯರಿಸ್ವಾಮಿ. ಬರವಣಿಗೆಯಲ್ಲಿ ಲಾಲಿತ್ಯವನ್ನು ಸಾಧಿಸಿದ್ದರಿಂದ ಎಲ್ಲೂ ಓದುಗರಿಗೆ ಬೇಸರ ಬರುವ ಪ್ರಶ್ನೆಯೇ ಇಲ್ಲ. ವಿಷಯ ವೈವಿಧ್ಯತೆಗೆ [illegible]*

- [illegible]

# ವೀರಗಲ್ಲುಗಳಲ್ಲಿ ಸ್ನೇಹ ಸಂಬಂಧಗಳು

ವೀರಗಲ್ಲುಗಳು ವೀರನ ಸಾವಿನ ಜೊತೆಗೆ ಅವನು ತನ್ನ ಬಂಧು-ಬಾಂಧವರೊಡನೆ ಹೊಂದಿದ್ದ ಸಂಬಂಧಗಳನ್ನೂ ದಾಖಲಿಸಿ ಆಯಾ ಕಾಲದ ಸಾಮಾಜಿಕ ಬದುಕನ್ನು ಪರಿಚಯ ಮಾಡಿಕೊಡುತ್ತವೆ. ವೀರನೊಬ್ಬ ಯಾವುದೇ ಒಳ್ಳೆಯ ಕಾರಣಕ್ಕೆ ಪ್ರಾಣತ್ಯಾಗ ಮಾಡಿ, ಬದುಕಿಗೆ ಮಾದರಿಯಾಗಿ ಉಳಿದದ್ದು ಒಂದು ಮುಖ್ಯ ವಿಚಾರ. ಅಂತಹ ವೀರನ ಬದುಕು ದಾಖಲೆಯಾಗಿ ಉಳಿದು, ಮುಂದಿನ ಜನರಿಗೆ ಮಾರ್ಗದರ್ಶನ ದೊರೆಯಬೇಕು. ಆಳುವ ವರ್ಗದ ''ಮನೆಮಕ್ಕ''ಳಾಗಿ, ಆಳುವ ಜನರಿಗೆ ''ಗರುಡ''ರ್‍ಆಗಿ, ಒಡೆಯರು ಸತ್ತಾಗ ''ಕೀಟಿಸ್ಗಂಟೆ''ಯಾಗಿ ಸತ್ತವರ ಸ್ಮಾರಕಗಳಿಗೆ ಕರ್ನಾಟಕದಲ್ಲಿ ಕೊರತೆಯಿಲ್ಲ. ಹೀಗೆ ಸತ್ತು, ನೆನಪಾಗಿ ಉಳಿದಿರುವ ವೀರರ ಕೌಟುಂಬಿಕ ಬದುಕಿನ ಬಗ್ಗೆ, ಕೆಲವು ಶಾಸನಗಳಾದರೂ ತಿಳಿಸುತ್ತವೆ.

ವೀರ ಮತ್ತು ಅವನ ಹೆಂಡತಿಯ ಸಂಬಂಧದ ಬಗ್ಗೆ ಪ್ರತ್ಯೇಕವಾಗಿಯೇ ಹೇಳಬೇಕಾಗುತ್ತದೆ. ಬಹುತೇಕ ಮಾಸ್ತಿಕಲ್ಲುಗಳು ಈ ಸಂಬಂಧದ ಕುರುಹಾಗಿಯೇ ಉಳಿದಿವೆ. ಸ್ವಇಚ್ಛೆಯಿಂದಲೋ, ಬಲವಂತವಾಗಿಯೋ, ಸಂಪ್ರದಾಯದ ಹೆಸರಿನಲ್ಲೋ ಸತಿ ಹೋಗುತ್ತಿದ್ದ ಬಗ್ಗೆ ಶಾಸನಗಳು ಮತ್ತು ಮಾಸ್ತಿಗಲ್ಲುಗಳು ತಿಳಿಸಿವೆ. ಗಂಡ-ಹೆಂಡಿರ ಸಂಬಂಧವಲ್ಲದೆ ಅಣ್ಣ, ತಮ್ಮ ಹಾಗೂ ಸ್ನೇಹಿತರ ಪ್ರೀತಿ ಮತ್ತು ವಿಶ್ವಾಸಗಳನ್ನು ತಿಳಿಸುವ ಶಾಸನಸ್ಥ ದಾಖಲೆಗಳ ಬಗ್ಗೆಯೂ ತಿಳಿಯುವುದು ಅವಶ್ಯಕ ಎನಿಸುತ್ತದೆ.

ಅಣ್ಣ-ತಮ್ಮಂದಿರು ಹೋರಾಟದಲ್ಲಿ ಒಟ್ಟಿಗೇ ಸತ್ತಾಗ ಅಥವಾ ಸಹೋದರರಲ್ಲಿ ಒಬ್ಬರು ಅಥವಾ ಇಬ್ಬರು ಸತ್ತು, ಉಳಿದವರು ಸತ್ತ ಸಹೋದರರನ್ನು ನೆನಪು ಮಾಡಿಕೊಂಡು, ಅವರ ಸ್ಮಾರಕವಾಗಿ ನೆಡಿಸುತ್ತಿದ್ದ ವೀರಗಲ್ಲುಗಳು ಮತ್ತು ಆ ಸಂದರ್ಭದಲ್ಲಿ ನೀಡುತ್ತಿದ್ದ ದಾನ-ದತ್ತಿಗಳು ಬೆರಗುಗೊಳಿಸುತ್ತವೆ. ಸೊರಬ ತಾಲ್ಲೂಕಿನ ಕೊರಕೋಡು ಗ್ರಾಮದಲ್ಲಿ ದಾಖಲಾಗಿರುವ ಐದು ವೀರಗಲ್ಲುಗಳಲ್ಲಿ ಎರಡು ಇಂತಹ ಬಹು ಮುಖ್ಯ ವಿಷಯವನ್ನು ತಿಳಿಸಿವೆ. ಕಾಳರಸ ಎನ್ನುವವನು ಕೊರಕೋಡಿನ ಮೇಲೆ ಧಾಳಿ ಮಾಡಿ ''ತುಱುವಂ ಕೊಂಡು'' ಹೆಣ್ಣು ಮಕ್ಕಳ ''ಉಡೆಯುಚ್ಚಿ'' ಹೋಗುವಾಗ, ಆ ಊರಿನ ಬಾವಗಾವುಂಡನ ಮಕ್ಕಳಾದ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬುವವರು ಊರ ಹೆಬ್ಬಾಗಿಲಿನಲ್ಲಿ ಅಡ್ಡವಾಗಿ ನಿಂತು ''ಕಾರಮಳೆ ಕರೆದಂತೆ'' ಮತ್ತು ''ಕಡಂದುಱಹುಟ್ಟಿಯ ಕೆಣಕಿದಂತೆ'',''ಕಾಲಬಾಯೊಳಂ ಜವನೊಕ್ಕಲಿಕ್ಕಿದಂತೆ'' ಶತ್ರುಗಳನ್ನು ಎದುರಿಸುತ್ತಿದ್ದಾಗ ಸಾವನ್ನಪ್ಪುತ್ತಾರೆ. ''ಅವರಿಬ್ಬರ್ರ ಪೆಣನಂ ಮೆಟ್ಟಿ ತುಱು ಪರಿಯಲು', ಅವರ ತಮ್ಮ ಬೊಪ್ಪಗಾವುಂಡನು, ಅಣ್ಣಂದಿರ ಕಳೇಬರವನ್ನು ಕಂಡು ಸೈರಿಸಲಾರದೆ ತುಱುಗಳನ್ನು ಹಿಂಬಾಲಿಸಿ, ಪುದ್ದರೆಯ ಮಂಡಳಿಕ ಯೆಕ್ಕಲರಸನ ಆಳು ಮತ್ತು ಕುದುರೆಯ ಸಹಾಯದಿಂದ ತುಱುಗಳನ್ನು ಹಿಂದಕ್ಕೆ ಮರಳಿಸಿ, ನಂತರ ಅಣ್ಣಂದಿರ ಕಳೇಬರಗಳಿಗೆ ಸಂಸ್ಕಾರ ಮಾಡಿ ಜಳದಾನ ಕ್ರಿಯೆಯನ್ನು ಮಾಡಿ, ಪರೋಕ್ಷ



ವಿನಯವಾಗಿ ಕಲ್ಲನ್ನು ನೆಡಿಸುತ್ತಾನೆ. ಇದೇ ರೀತಿಯ ಮತ್ತೊಂದು ವಿಷಯವನ್ನು ಅಲ್ಲಿಯದೇ ಮತ್ತೊಂದು ಶಾಸನವು ದಾಖಲಿಸಿದೆ. ಬಹುತೇಕ ಅದೇ ದಿನ ನಡೆದ ತುಱುಗಾಳಗದಲ್ಲಿ ವೀರಗಾವುಂಡ ಮತ್ತು ಮಲ್ಲಿಗಾವುಂಡ ಎಂಬ ಸೋದರರು ಶತ್ರುಗಳನ್ನು ಎದುರಿಸಿ ಹೋರಾಡಿ ಸತ್ತರು. ಅದನ್ನು ನೋಡಿದ ಅವರ ತಮ್ಮ ಚೋದಗಾವುಂಡನು ಮೊದಲು ತುಱುಗಳನ್ನು ಮರಳಿಸಿ, ನಂತರ ಅಣ್ಣಂದಿರ ಕಳೇಬರಗಳಿಗೆ ಸಂಸ್ಕಾರ ಮಾಡಿ ಪರೋಕ್ಷವಿನಯ ಸಲ್ಲಿಸಿದ.

ಒಡಹುಟ್ಟಿದವರಿಗೆ ಪರೋಕ್ಷವಿನಯ ಸಲ್ಲಿಕೆ ಸಹಜ ಹಾಗೂ ಕೆಲವು ಸಂದರ್ಭಗಳಲ್ಲಿ ಕರ್ತವ್ಯವೂ ಆಗಬಹುದು. ಆದ್ದರಿಂದ ಅಂತಹ ವಿಚಾರಗಳ ದಾಖಲೆಯು ಪ್ರಮುಖ ಎನಿಸದೆಯೂ ಇರಬಹುದು. ಆದರೆ ಸ್ನೇಹಿತರು ಒಟ್ಟಾಗಿ ಸಾವನ್ನು ಸ್ವಾಗತಿಸುವುದು ಅಪರೂಪ ಹಾಗೂ ಇಂತಹ ವಿಚಾರಗಳು ವಿಶೇಷ ಗಮನ ಸೆಳೆಯುತ್ತವೆ. ಅಂತಹ ವಿಶೇಷ ವಿಚಾರವನ್ನು ಹೂಲಿಯ ಒಂದು ಶಾಸನವು ದಾಖಲಿಸಿದೆ.

ಡಾ|| ಫ್ಲೀಟ್ ಅವರು ಮೊದಲು ಗಮನಿಸಿ, ನಂತರ ಎಲ್. ಡಿ. ಬಾರ್ನೆಟ್ ಪ್ರಕಟಿಸಿದ ಈ ವೀರಗಲ್ಲು ಶಾಸನವು ಗೆಳೆಯರಿಬ್ಬರ ಅವ್ಯಾಜ ಸ್ನೇಹವನ್ನು ದಾಖಲಿಸಿದೆ.

ಚಾಳುಕ್ಯ ವಿಕ್ರಮ ವರ್ಷ ೩೨ ಅಂದರೆ ಕ್ರಿ. ಶ. ೧೧೦೭ (ಸರ್ವ್ವಜಿತ್ ಸಂವತ್ಸರದ ಶ್ರಾವಣ ಬಹುಳ ೫ ವಡ್ಡವಾರ) ಪೂಲಿಯ ತುರುಗಳನ್ನು ತೊರಪರ ಬೂತಯ್ಯ ಎನ್ನುವವನು ಅಪಹರಿಸಿದಾಗ, ಪೂಲಿಯ (ಈಗಿನ ಹೂಲಿ) ಗಂಗರ ಬೋಸಿ ಮತ್ತು ಪೆರುವ ಮಲ್ಲಿ ಎನ್ನುವ ವೀರರು ತುರುಗಳಿಗೆ ಅಡ್ಡ ಬಂದು ಶತ್ರುಗಳನ್ನು ಎದುರಿಸಿ, ಮೇಲಾಳುಗಳನ್ನೂ, ಕುದುರೆಗಳನ್ನೂ ಇರಿದು ಹಲವರನ್ನು ಕೊಂದು, ಸೂರ್ಯಮಂಡಲವನ್ನು ಸೇರಿದರು. ತೊರಪರು ಪೂಲಿಯ ತುರುಗಳನ್ನು ಅಪಹರಿಸಿದಾಗ ಬೋಸಿಗ ಶತ್ರುಗಳನ್ನು ಎದುರಿಸಿ, ಹೋರಾಡಿ ವೀರಮರಣವನ್ನು ಸಾಧಿಸಿ, ದೇವಲೋಕದಲ್ಲಿ ಸ್ಥಾನ ಪಡೆದ. ಅದನ್ನು ಕಂಡ ಅವನ ''ಒಡನುಂಡ ಕೆಳೆಯ''ನೂ, ''ಸಂಗಡದಾಳೂ'' ಆದ ಗೆಳೆಯ ಮಲ್ಲಿಗ ಎಂಬುವವನು ತನ್ನ ಗುಂಪಿನವನನ್ನು (ಮೇಳದ ಆಳು) ಯಾವಾಗಲೂ ಬಿಟ್ಟಿರಲಾಗದು ಎಂದು ತಾನೂ ವೀರತನದಿಂದ ಬೋಸಿಗನ ಜೊತೆಗೇ ಮರಣವನ್ನಪ್ಪಿದ. ಶಾಸನವು ತಿಳಿಸುವ ವಿಷಯ ಇಷ್ಟೇ ಆದರೂ ಇದರ ಹಿಂದಿರುವ ಸ್ನೇಹದ ಬೆಲೆಯು ಅತ್ಯಂತ ಮೌಲಿಕ ಮಾತ್ರವಲ್ಲದೆ ಸದಾ ಕಾಲ ನೆನಪಿನಲ್ಲಿ ಉಳಿಸಿಕೊಳ್ಳಬೇಕಾದದ್ದು.

ತೊರಪರು ಎಂಬ ಗುಂಪಿನವರು ಬಹುತೇಕ ಪುಂಡರು ಮತ್ತು ತುರುಗಳನ್ನು ಆಪಹರಿಸುವುದೇ ಅವರ ವೃತ್ತಿಯಾಗಿತ್ತು ಎಂದು ತಿಳಿಯಬಹುದು. ಇವರ ಪುಂಡುತನವನ್ನು ತಡೆಯಲು ಪೂಲಿಯ ಗಂಗರ ಕುಲದ ಬೋಸಿಗ ಮತ್ತು ಪೆರುವ ಕುಲದ ಮಲ್ಲಿಗನಿಗೆ ಸಾಧ್ಯವಾಯಿತು. ಇದಕ್ಕಿಂತ ಮುಖ್ಯವಾದ ವಿಚಾರವೆಂದರೆ ಬೋಸಿಗ ಮತ್ತು ಮಲ್ಲಿಗರ ಸ್ನೇಹ. ಬೋಸಿಗ ಸತ್ತಾಗ ಅವನ ಕೆಳೆಯ ಮಲ್ಲಿಗನು ತನ್ನ ಒಡನುಂಡ ಕೆಳೆಯ ಮತ್ತು ತಮ್ಮ ಗುಂಪಿನ ಜೊತೆಯ ಆಳನ್ನು ಬಿಟ್ಟಿರಲಾಗದು ಎಂದು ಮಾಡಿದ ತೀರ್ಮಾನ. ಮಲ್ಲಿಗನಂತಹ ಸ್ನೇಹಿತನನ್ನು ಪಡೆದ ಬೋಸಿಗ ಧನ್ಯನಾಗಿದ್ದಾನೆ. ಇತಿಹಾಸದಲ್ಲಿ ದಾಖಲಾಗಿರುವ ಇಂತಹ ಉದಾಹರಣೆಗಳು ಆಗಾಗ ನಮಗೆ ನೆನಪಾಗುತ್ತಿದ್ದರೆ ನಾವು ನಡೆಯುವ ದಾರಿಯನ್ನು ಸರಿ ಮಾಡಿಕೊಳ್ಳಬಹುದು ಎಂಬ ಆಶಾಭಾವನೆ ಮೂಡುತ್ತದೆ.

ಶಾಸನವು ಬೋಸಿಗ ಮತ್ತು ಮಲ್ಲಿಗ ಸೂರ್ಯಮಂಡಲವನ್ನು ಭೋಜಿಸಿದರು ಎಂದು ತಿಳಿಸಿದೆ. ಸೂರ್ಯಮಂಡಲವನ್ನು ಭೇದಿಸಲು ಯೋಗಸಾಧನೆ ಮಾಡಿದ ಪರಿವ್ರಾಜಕ ಮತ್ತು ರಣರಂಗದಲ್ಲಿ ವೀರತನದಿಂದ ಹೋರಾಡಿ ಮಡಿದ ವೀರ ಇಬ್ಬರಿಗೆ ಮಾತ್ರ ಸಾಧ್ಯ ಎಂದು ಅನೇಕ ವೀರಗಲ್ಲುಗಳಲ್ಲಿ

ಡಾ|| ಎಚ್. ಎಸ್. ಗೋಪಾಲರಾವ್

# ಎಲ್ಲರಂತವನಲ್ಲ ಈ ಪೋರ !



**ಚಿ**ತ್ರದಲ್ಲಿರುವ ಪೋರ ಪವನ ಕುಮಾರ. ಏಳು ವರ್ಷದ ಈತ ಎರಡನೇ ತರಗತಿಯಲ್ಲಿ ಕಲಿಯುತ್ತಿದ್ದಾನೆ. ಮನೆಯವರು ಮುದ್ದಿನಿಂದ ಕರೆಯುವ ಹೆಸರು ಚಿನ್ನಿ. ಆ ಪ್ರಾಯಕ್ಕೆ ಸ್ವಲ್ಪ ಹೆಚ್ಚೇ ಎನ್ನುವಷ್ಟು ತುಂಟತನ. ಅದೇ ವೇಳೆ 'ಶಾಣ್ಯಾ' ತನಕ್ಕೇನೂ ಕಡಮೆಯಿಲ್ಲ !

ಬೆಂಗಳೂರಿನ ರಾಜಾಜಿನಗರದ ಒಂದು ವಠಾರದ ಮನೆಯಲ್ಲಿ ವಾಸ. ತಂದೆ ತಾಯಿ ಇಬ್ಬರೂ ಕೆಲಸಕ್ಕೆ ಹೋಗುತ್ತಾರೆ. ಯಾವಾಗಲಾದರೂ ಊರಿನಿಂದ ಬಂದು ಕೆಲವು ದಿನವಿದ್ದು ಹೋಗುವ ಬಂಧುಗಳಲ್ಲದೆ ಮನೆಯಲ್ಲಿ ಇತರ ಹಿರಿಯರಿಲ್ಲ. ತಂದೆ ಈತನನ್ನು ಬೆಳಗ್ಗೆ ಶಾಲೆಯಲ್ಲಿ ಬಿಟ್ಟು ಹೋಗುತ್ತಾರೆ. ಚೀಲದಲ್ಲಿ ಊಟದ ಡಬ್ಬಿ. ಸಂಜೆ ನಾಲ್ಕು-ನಾಲ್ಕೂವರೆಗೆಲ್ಲ ಶಾಲೆ ಮುಗಿದು ಮನೆಗೆ ಬರುತ್ತಾನೆ. ಒಂಟಿಯಾಗಿ ಕಾಲ ಕಳೆಯುವುದು ಈತನಿಗೆ ಫಜೀತಿಯಾಗುತ್ತದೆ. ತಂದೆ-ತಾಯಿ ಹಿಂದಿರುಗುವಾಗ ಏಳು-ಏಳೂವರೆಯಾಗುತ್ತದೆ. ಅಲ್ಲಿಯವರೆಗೆ ಮನೆ ನಿಭಾಯಿಸುವ ಜವಾಬ್ದಾರಿ ಈತನದು !

ವಠಾರದ ಇತರ ಓರಗೆಯವರೊಂದಿಗೆ ಸ್ವಲ್ಪ ಹೊತ್ತು ಆಡಬಹುದಷ್ಟೆ. ಅನೇಕರು ಮನೆಪಾಠಗಳಿಗೆ ಓಡುತ್ತಾರೆ. ಈತ ಬೀಗ ತೆಗೆದು ಮನೆಯೊಳಗೆ ಸೇರಿ ಚಿಲಕ ಹಾಕಿಕೊಳ್ಳುತ್ತಾನೆ. ಅಪರಿಚಿತರು ಬಾಗಿಲು ಬಡಿದರೆ ಬಿಲ್‌ಕುಲ್ ತೆಗೆಯುವಂತಿಲ್ಲ. ಟಿ. ವಿ. ಕಾರ್ಟೂನ್ ಚಿತ್ರಗಳು ಈತನಿಗಾಗಿ ಕಾಯುತ್ತಿರುತ್ತವೆ. ಕುರುಕು ತಿಂಡಿಯ ಡಬ್ಬಿಗಳೆಲ್ಲ ಈತನ ಕೈಗೆಟುಕುವಂತೆಯೇ ಇರುತ್ತವೆ. ಆದರೂ ಸ್ವಲ್ಪ ಹೊತ್ತಿಗೆಲ್ಲ ಬೋರಾಗ ತೊಡಗುತ್ತದೆ. ಅಪ್ಪನಿಗೋ, ಅಮ್ಮನಿಗೋ ಫೋನು ಮಾಡುತ್ತಾನೆ. ಅವರೂ ಕೆಲಸದ ಗಡಿಬಿಡಿಯಲ್ಲಿರುತ್ತಾರೆ. ಈತ ಪದೇಪದೇ ಫೋನು ಮಾಡಿದಾಗ ಉಪದ್ರವ ಎನ್ನಿಸುತ್ತದೆ. ಮೊದಲು ಕುರುಕು ತಿಂಡಿಯ ನೆನಪು ಮಾಡಿ ಪೂಸಿ ಮಾಡುತ್ತಾರೆ. ಆನಂತರ ಸಾಕಪ್ಪ ಇವನ ಕಿರುಕುಳ ಎಂದುಕೊಂಡು ಫೋನಿನಲ್ಲೇ ಜೋರು ಮಾಡಿ ಸುಮ್ಮನಿರಿಸುತ್ತಾರೆ. ಆಗ ತಾನು ಒಂಟಿ ಎಂಬ ಭಾವನೆಯಿಂದ ಅಳುವೇ ಒತ್ತರಿಸಿ ಬರುತ್ತದೆ. ಇಂಥ ಸಂದರ್ಭದಲ್ಲಿ ಬಾಗಲಕೋಟೆಯ ಸಮೀಪದ ಕೆರೂರಿನಲ್ಲಿರುವ ಅಜ್ಜ ಮನೆ ನೆನಪಿಗೆ ಬರುತ್ತದೆ. ಅಲ್ಲಿ ಅಜ್ಜ, ಅಜ್ಜಿ, ಚಿಕ್ಕಮ್ಮಂದಿರು, ಮಾವ – ಎಲ್ಲರೂ ಇರುತ್ತಾರೆ. ಬೋರಾಗುವ ಚಾನ್ಸೇ ಇರುವುದಿಲ್ಲ.

ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವ ಪವನ್ ತರಗತಿಯಲ್ಲಿ ಫಸ್ಟ್ ಬರುತ್ತಾನೆ. ಶಾಲೆಯಲ್ಲಿ ಕನ್ನಡ ಮಾತಾಡುವಂತಿಲ್ಲ. ಕನ್ನಡ ಮಾತಾಡಿದರೆ ದಂಡ ತೆರಬೇಕು ! ಹಾಗಾಗಿ ಮನೆಯಲ್ಲಿ ಸಣ್ಣಪುಟ್ಟ ವಿಷಯಗಳನ್ನೆಲ್ಲ ಇಂಗ್ಲಿಷಿನಲ್ಲೇ ಹೇಳಹೊರಟು ತಂದೆ ತಾಯಿಗಳನ್ನೇ ಪೇಚಿಗೆ ಬೀಳಿಸುತ್ತಾನೆ. ಚಿತ್ರ ರಚನೆಯಲ್ಲಿ ಆಸಕ್ತಿಯಿಲ್ಲ. ಸಂಗೀತದಲ್ಲಿ ಆಸಕ್ತಿಯಿದೆ. ದೇವರ ನಾಮ ಹಾಡುವಾಗ ಹಿರಿಯರೊಂದಿಗೆ ಸೇರಿಕೊಳ್ಳುತ್ತಾನೆ.

ಈ ಮಹರಾಯ ಇನ್ನೂ ಎಲ್‌ಕೆಜಿಯಲ್ಲಿದ್ದಾಗಲೇ ಬೆಂಚಿನ ಮೇಲಿನಿಂದ ಬಿದ್ದು ಹಲ್ಲು ಮುರಿದುಕೊಂಡ. ತಂದೆ ತಾಯಿಗಳಿಗೆ ಗಾಬರಿಯೋ ಗಾಬರಿ ! ಹಲ್ಲು ಬಿದ್ದು ಹೊಸ ಹಲ್ಲು ಹುಟ್ಟುವ ಪ್ರಾಯಕ್ಕೆ ಖಂಡಿತ ಹಲ್ಲು ಮೂಡುತ್ತದೆ ಎಂದು ಡಾಕ್ಟರೇನೋ ಭರವಸೆ ನೀಡಿದ್ದಾರೆ !

ಬೇಸಿಗೆ ರಜೆ ಬಂತೆಂದರೆ ಅಜ್ಜನ ಮನೆಗೆ ಹೋಗಲು ತಯಾರು. ತಂದೆ ತಾಯಿಗಳಿಗೆ ರಜೆ ಸಿಗಬೇಕಷ್ಟೆ. ಈತನನ್ನು ಅಜ್ಜನ ಮನೆಗೆ ಬಿಟ್ಟು ಬರಲು ಹೋಗುತ್ತ ಬರುತ್ತ ಒಬ್ಬರಿಗೆ ಕನಿಷ್ಠ ಐದುನೂರು ರೂ. ಬೇಕು. ಇದೇನು ಹುಡುಗಾಟಿಕೆಯೇ ? ನೀವು ಯಾಕೆ ಐದುನೂರು ದಂಡ ಮಾಡುತ್ತೀರಿ ? ನಾನೇ ಹೋಗಲಾರೆನೇ ಎನ್ನುತ್ತಾನೆ ಪವನ್ !

ಬೆಂಗಳೂರಿನಿಂದ ಬಾಗಲಕೋಟೆಗೆ ರಾತ್ರಿ ಬಸ್ಸಿನಲ್ಲಿ ತಂದೆ ತಾಯಿಗಳ ಸಹಾಯವಿಲ್ಲದೆ ಒಬ್ಬನೇ ಪಯಣಿಸುವುದೆಂದರೆ ಈತನಿಗೆ ಎಲ್ಲಿಲ್ಲದ ಖುಷಿ ! ಉದ್ಯೋಗದಲ್ಲಿರುವ ತಂದೆ ತಾಯಿಗಳು ಮನೆಗೆ ಬರುವವರೆಗೆ ಒಂಟಿಯಾಗಿ ಕಾಲಕಳೆಯುವುದಕ್ಕಿಂತ ಅಷ್ಟು ದೂರದ ಪಯಣದಿಂದ ಅಷ್ಟು ಬೇಜಾರಾಗುವುದಿಲ್ಲ. ಎಲ್‌ಕೆಜಿಯಲ್ಲಿದ್ದಾಗಲೇ ಬಸ್ಸಿನ ಚಾಲಕರು ಈ ಪೋರನನ್ನು ಅಜ್ಜನ ಮನೆಗೆ ತಲುಪಿಸಿದ್ದರು. ಆನಂತರ ರಜೆಯ ದಿನಗಳಲ್ಲೆಲ್ಲಾ ಈತನೇ ಹೋಗಿ ಬರುತ್ತಾನೆ ! ತಂದೆ ತಾಯಿ ಬೆಂಗಳೂರಿನಲ್ಲಿ ರಾತ್ರಿ ಬಸ್ಸು ಹತ್ತಿಸಿ ಟಾಟಾ ಹೇಳುತ್ತಾರೆ. ಮುಂಜಾನೆ ಬಾಗಲಕೋಟೆಯಲ್ಲಿ ಹೇಗೂ ಮಾಮ ಈತನಿಗಾಗಿ ಕಾಯುತ್ತಿರುತ್ತಾನೆ. ಅಲ್ಲಿಂದ ಕೆರೂರಿಗೆ ಮತ್ತೆ ಬಸ್ಸಿನಲ್ಲಿ. ವಠಾರದವರೆಲ್ಲ ಎಲಾ ಇವನ ಧೈರ್ಯವೇ ಎಂದುಕೊಳ್ಳುತ್ತಾರೆ !

**- ಕೆ. ಪಿ. ಸ್ವಾಮಿ**

---

ದಾಖಲಾಗಿದೆ. ಹೀಗೆಯೇ ಶಾಸನಗಳು ದಾಖಲಿಸಿರುವ ಮತ್ತೊಂದು ಮುಖ್ಯ ವಿಷಯವೆಂದರೆ,

*ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ*
*ಸುರಾಂಗನಾ*
*ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತಾ*
*ಮರಣೇ ರಣೇ*

ಎಂದರೆ, ಹೋರಾಟದಲ್ಲಿ ಜಯಶಾಲಿಯಾದವನಿಗೆ ಲಕ್ಷ್ಮಿ ಒಲಿಯುತ್ತಾಳೆ. ಗೆಲುವು ಲಭಿಸದಿದ್ದರೂ ಹೋರಾಟದಲ್ಲಿ ವೀರತನವನ್ನು ಮೆರೆದವನಿಗೆ ಸತ್ತ ನಂತರ ಸುರಾಂಗನೆಯರ ಸಹವಾಸ ಲಭಿಸುತ್ತದೆ. ಕ್ಷಣಿಕವಾದ ದೇಹಕ್ಕಾಗಿ ಚಿಂತಿಸುವುದರ ಬದಲು ರಣಾಂಗಣದಲ್ಲಿ ಹೋರಾಡಿ ಮಡಿಯುವುದು ವೀರರ ಗುಣ ಎಂಬುದು ಹಿಂದಿನ ಜನರ ನಂಬಿಕೆಯಾಗಿತ್ತು. ನಂಬಿಕೆಗೆ ತಕ್ಕಂತೆ ನಡೆದು ಇತಿಹಾಸದಲ್ಲಿ ದಾಖಲಾಗಿರುವ ಬೋಸಿಗ ಮತ್ತು ಅವನ ಕೆಳೆಯ ಮಲ್ಲಿಗನಂತಹವರಿಂದ ನಾವು ವೀರತನ ಮತ್ತು ಸ್ನೇಹಗಳ ಬಗ್ಗೆ ತಿಳಿಯಬಹುದು.

ವೀರತನದಿಂದ ಹೋರಾಡಿ ಮಡಿದು ಅಮರರಾಗಿರುವ ವೀರರ ಬಗ್ಗೆ ತಿಳಿದಾಗ ನಮಗೆ ಕೆಲವು ಶಾಸನಗಳ ಮತ್ತು ಕೆಲವು ಕಾವ್ಯಗಳ ಕೆಲವು ಮಾತುಗಳು ನೆನಪಾಗುತ್ತವೆ. ವೀರಮೌಲ್ಯಗಳನ್ನು ದಾಖಲಿಸುವ ಅಂತಹ ಮಾತುಗಳು ಎಲ್ಲಾ ಕಾಲದ ಎಲ್ಲಾ ವೀರರಿಗೂ ಅನ್ವಯಿಸುತ್ತವೆ. ಅವುಗಳಲ್ಲಿ ತಕ್ಷಣವೇ ನೆನಪಿಗೆ ಬರುವ ಸಾಲೆಂದರೆ,

*ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಣ್ಡನಮ್*
*ಮೃತ್ಯುಸ್ತತ್ ಕ್ಷಣಕೋ ದುಃಖಮ್ಮಾನಭಂಗಂ ದಿನೇ ದಿನೇ*

ಬಹುತೇಕ ಇದೇ ಮಾತುಗಳನ್ನು ಕನ್ನಡದ ಆದಿಕವಿ ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಹೀಗೆ ವಿವರಿಸಿದ್ದಾನೆ.

*ಒಡಲುಂ ಪ್ರಾಣಮುಮೆಂಬಿವು*
*ಕಿಡಲಾದವು ಜಸಮದೊಂದೆ ಕಿಡದದನಾಂ ಬ*
*ಲ್ವಿಡಿವಿಡಿದು ನೆಗಟ್ದೆನುಟ್ವಿದಟ*
*ಪಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿದೈ*

ಕವಿ ರನ್ನ ಇದೇ ಮಾತುಗಳನ್ನು ಹೀಗೆ ವಿವರಿಸಿದ್ದಾನೆ.

*ಗೆಲಲಾರ್ಪೊಡಿರ್ದು ಗೆಲ್ವುದು*
*ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ*
*ಗೆಲಲುಂ ಸಾಯಲುಮಾಱದೆ*
*ತೊಲಗಿದೊಡೆ ನೆಗಟ್ತೆ ತೊಲಗದಿರ್ಕುಮಮೆಯ್ನಂ*

ಇದು ಪ್ರಾಚೀನ ಕರ್ನಾಟಕದ ವೀರಮೌಲ್ಯ.

ಡಾ|| ಎಚ್. ಎಸ್. ಗೋಪಾಲರಾವ್
'ಸ್ವಸ್ತಿ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - [illegible]



**ಹಂ**ಪಿಯ ಕನ್ನಡ ವಿಶ್ವವಿದ್ಯಾಲಯದ ದಲಿತ ಸಂಸ್ಕೃತಿ ಅಧ್ಯಯನ ಪೀಠದ ಮೂಲಕ ಪ್ರಕಟವಾಗಿರುವ ''ವೇದಗಳಲ್ಲಿ ಜನಸಾಮಾನ್ಯರು'' ವೈಚಾರಿಕ ಬರಹಗಾರರೆಂದು ಈಗಾಗಲೇ ಪ್ರಖ್ಯಾತರಾಗಿರುವ ದಾವಣಗೆರೆಯ ಪ್ರೊ॥ ಬಿ. ವಿ. ವೀರಭದ್ರಪ್ಪನವರ ಇತ್ತೀಚಿನ ಕೃತಿಯಾಗಿದೆ. ಇದರ ಮೂಲಕ ''ನಮ್ಮ ದೇಶದ ತಳಸಮುದಾಯಗಳನ್ನು ಮತ್ತು ಅವುಗಳ ಸಾಂಸ್ಕೃತಿಕ ಚರಿತ್ರೆಯನ್ನು ಸಮಕಾಲೀನ ಅನುಭವಗಳಿಂದ ಕಟ್ಟಿಕೊಳ್ಳಬೇಕೆಂಬ'' ತಮ್ಮ ಆಶಯವನ್ನು ಈ ಪೀಠದವರು ಮುಂದುವರಿಸಿದಂತಾಗಿದೆ.

*ವೇದಾಂತ ರೆಜಿಮೆಂಟ್ಸ್ ಮತ್ತು ಇತರ ಲೇಖನಗಳು, ಧರ್ಮ ಮತ್ತು ವೈಚಾರಿಕತೆ, ಭಗವದ್ಗೀತೆ - ಒಂದು ವೈಚಾರಿಕ ಒಳನೋಟ, ವಾಸ್ತು ಎಷ್ಟು ವಾಸ್ತವ?*– ಇವೇ ಮುಂತಾದ ಪ್ರಕಟಿತ ಕೃತಿಗಳಲ್ಲಿ ಮತ್ತು ಲಂಕೇಶ ಪತ್ರಿಕೆ, ಜನತಾವಾಣಿ, ಹೊಸತು ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾದ ಬಿಡಿಲೇಖನಗಳಲ್ಲಿ 'ನಮ್ಮ ಪ್ರಾಚೀನರ ಅನುಭವ ಅನಿಸಿಕೆಗಳನ್ನು ಅರ್ವಾಚೀನ ದೃಷ್ಟಿಕೋನದಿಂದ ವಿಶ್ಲೇಷಿಸಿ ವಿಮರ್ಶಿಸುವ' ಅಪರೂಪದ ವಿಚಾರಧಾರೆ ಮತ್ತು ಲೇಖನ ಕಲೆಯನ್ನು ಮೈಗೂಡಿಸಿಕೊಂಡಿರುವ ಪ್ರೊ॥ ಬಿ. ವಿ. ವೀ. ಯವರು ನಮ್ಮ ನಾಡಿನ ಅತ್ಯಂತ ಪ್ರಾಚೀನವಾದ ವೇದ ಸಾಹಿತ್ಯವನ್ನು ಅಭ್ಯಾಸಮಾಡಿ ಅದರಲ್ಲಿ ಕಂಡುಬರುವ ಜನ ಸಾಮಾನ್ಯರ ಜೀವನ ವೈವಿಧ್ಯವನ್ನು ಇಂದಿನ ಜನಸಾಮಾನ್ಯರಿಗೆ ಮತ್ತು ಇತರರಿಗೆ ಯಥಾರ್ಥವಾಗಿ ಪರಿಚಯಿಸುವ ಪ್ರಯತ್ನದಲ್ಲಿ ಹಿಂದಿನದೆಲ್ಲಾ ಶ್ರೇಷ್ಠ ಮತ್ತು ಈಚಿನದೆಲ್ಲಾ ಕನಿಷ್ಠ ಎಂಬ ಪೂರ್ವಗ್ರಹ-ದುರಾಗ್ರಹಗಳೆರಡರಿಂದಲೂ ಮುಕ್ತವಾಗಿ ವಸ್ತುನಿಷ್ಠವಾದ ಮಾರ್ಗವನ್ನು ಅನುಸರಿಸಿದ್ದಾರೆ.

ಭಾರತೀಯರ, ತತ್ರಾಪಿ ಹಿಂದೂಗಳ, ಪರಂಪರಾನುಗತ ನಂಬುಗೆಯಲ್ಲಿ ವೇದಗಳು ಅತ್ಯಂತ ಪವಿತ್ರ ಗ್ರಂಥಗಳು. ಅವು ಅಪೌರುಷೇಯ ಮತ್ತು ಸಾರ್ವಕಾಲಿಕ. ಅವು ದೇವ ಭಾಷೆ ಎಂದು ಭಾವಿಸಲ್ಪಟ್ಟಿರುವ ಸಂಸ್ಕೃತದಲ್ಲಿ ಇದ್ದುದರಿಂದಲೂ ಮತ್ತು ಅವುಗಳಲ್ಲಿನ ವಿಚಾರಗಳು ಆಧ್ಯಾತ್ಮಿಕ ಚಿಂತಕರಿಗೆ ಮತ್ತು ಪಾರಲೌಕಿಕ ಆಕಾಂಕ್ಷಿಗಳಿಗೆ ಮಾತ್ರ ಹಿಡಿಸುವಂತಹವು, ಓದು-ಬರಹವನ್ನೇ ಅರಿಯದಿದ್ದ ಜನಸಾಮಾನ್ಯರಿಗೂ ಅವುಗಳಿಗೂ ಏನೇನೂ ಸಂಬಂಧವಿಲ್ಲವೆಂದೇ ಪ್ರತೀತಿ ಬಹುಕಾಲದವರೆಗೆ ಇತ್ತು. ಇದೆಲ್ಲಾ ಹಿಂದಿನ ಕಾಲದ ಮಾತಾಯಿತು; ಪ್ರತಿಯೊಂದನ್ನೂ ಏಕೆ, ಹೇಗೆ? ಎಂದು ಪ್ರಶ್ನಿಸುವ ಇಂದಿನ ಕಾಲದಲ್ಲಿ ಜೀವಂತ ಸಂಸ್ಕೃತಿಯಾದ ಜಾನಪದ ಮಾರ್ಗದ ಮೂಲಕ ಅಂದಿನ (ವೇದಗಳ) ಕಾಲದ ಸಂಸ್ಕೃತಿಯನ್ನು ಯಥಾರ್ಥವಾಗಿ ಅರ್ಥೈಸಲು ಸಾಧ್ಯವಿದೆ ಎಂದು ಪ್ರೊ॥ ಬಿ. ವಿ. ವೀ. ಅಭಿಪ್ರಾಯಪಡುತ್ತಾರೆ. ಆ ದಿಸೆಯಲ್ಲಿ ಅವರು ನಡೆಸಿದ ಅಧ್ಯಯನ - ವಿಶ್ಲೇಷಣಗಳ ಫಲವೇ ಈ ಕೃತಿ.

'ವಿದ್' ಎಂಬ ಧಾತುವಿನಿಂದ ನಿಷ್ಪನ್ನವಾದ 'ವೇದ' ಶಬ್ದಕ್ಕೆ ಜ್ಞಾನ ಅಥವಾ ತಿಳುವಳಿಕೆ ಎಂಬ



*ಪುಟ : ೧೩೫* *ಬೆಲೆ : ರೂ. ೬೦*

ಅರ್ಥವಿರುವುದು ಸರಿಯಷ್ಟೇ. ವೇದ ಎಂದರೆ ಸಂಸಾರವೆಂಬ, ಜನನ-ಮರಣಗಳ ಚಕ್ರದಿಂದ ಬಿಡುಗಡೆ ಹೊಂದಲು ಸಹಾಯಕವಾದ ಶಾಸ್ತ್ರ ಎಂಬ ಮಾಧವಾದಿ ಆಚಾರ್ಯರ ಆಧ್ಯಾತ್ಮಿಕ ಅರ್ಥವೂ ಪ್ರಚಲಿತವಿದೆ. ವೇದಗಳಲ್ಲಿ ಶೈಶವಾವಸ್ಥೆಯಲ್ಲಿ ಆರಂಭವಾಗಿ ಸಹಸ್ರಾರು ವರ್ಷಗಳ ಕಾಲಾವಧಿಯಲ್ಲಿ ಪರಿವರ್ತನೆಗೊಳ್ಳುತ್ತಾ ಅಂತಿಮದಲ್ಲಿ ಉಪನಿಷತ್ತುಗಳಲ್ಲಿ ಭಾವಾನುವಾದ ಪಡೆದ ಪರಿಯನ್ನೂ ಈ ಕೃತಿಯಲ್ಲಿ ಪರಿಚಯಿಸಲಾಗಿದೆ.

ಅಕ್ಷರಜ್ಞಾನವನ್ನೇ ಹೊಂದಲು ಅವಕಾಶವಿಲ್ಲದಿದ್ದ ವೇದಕಾಲದ ಜನಸಾಮಾನ್ಯರು ಅವುಗಳಲ್ಲಿನ ಅಪಾರ ಜ್ಞಾನವನ್ನು ಅರಿಯಲು ಸಾಧ್ಯವಿರಲಿಲ್ಲ. ಅಂದ ಮಾತ್ರಕ್ಕೆ ವೇದಗಳಲ್ಲಿ ಅಂದಿನ ಸಾಮಾನ್ಯ ಜನರ ಪ್ರಸ್ತಾಪವೇ ಇರಲಿಲ್ಲವೆಂದಲ್ಲ. ಹಾಗೆ ನೋಡಿದರೆ ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ, ಜನಸಾಮಾನ್ಯರು ಅಥವಾ ಜಾನಪದರ ಪಾತ್ರವಿಲ್ಲದೆ ಆಯಾ ದೇಶಗಳ ಇತಿಹಾಸ, ಸಾಹಿತ್ಯ, ಶಾಸ್ತ್ರ-ಪುರಾಣಗಳು ನಿರ್ಮಾಣವಾಗುವುದು ಸಾಧ್ಯವೇ ಇಲ್ಲ. ಈ ಹಿನ್ನೆಲೆಯಲ್ಲಿ, ನಮ್ಮ ದೇಶದ ಸಂದರ್ಭದಲ್ಲಿ ಭಾರತೀಯ ಸಂಸ್ಕೃತಿಯ ಪರಿಚಯ ನೀಡುವ ಮಹತ್ವದ ಸಾಹಿತ್ಯವೆನಿಸಿದ ವೇದಗಳಲ್ಲಿ ಅಂದಿನ ಜನಸಾಮಾನ್ಯರ ಧಾರ್ಮಿಕ-ಸಾಮಾಜಿಕ-ಆರ್ಥಿಕ ಆಚಾರ-ವಿಚಾರಗಳು ಹೇಗಿದ್ದವೆಂಬುದನ್ನು ವೇದಗಳಲ್ಲಿ ಬರುವ ಶ್ಲೋಕಗಳು - ಆಖ್ಯಾಯಿಕೆಗಳು ಮತ್ತು ಕಥೆಗಳ ಮೂಲಕವೇ ಚಿತ್ರಿಸುವ ಪ್ರಯತ್ನವನ್ನು ಈ ಗ್ರಂಥದಲ್ಲಿ ಮಾಡಿರುವುದನ್ನು ಕಾಣಬಹುದು. ಅಷ್ಟೇ ಅಲ್ಲ; ಇಂದಿನ ಜಾನಪದರ ನಂಬುಗೆಗಳು ಮತ್ತು ಆಚರಣೆಗಳು ಅಂದಿನ ಶಿಷ್ಟ ಜನರ ವೈದಿಕ ಸಂಸ್ಕೃತಿಯ ಮೇಲೂ ಹೇಗೆ ಹೊಸ ಬೆಳಕು ಚೆಲ್ಲಬಹುದೆಂಬುದನ್ನು ಅನೇಕ ಆಧಾರಗಳ ಮೂಲಕ ವಿವರಿಸುವ ಪ್ರಯತ್ನ ಇಲ್ಲಿ ನಡೆದಿದೆ. ಉದಾಹರಣೆಗೆ ವೇದಪೂರ್ವದ ಬುಡಕಟ್ಟು ಜನಾಂಗದವರು ಅನುಸರಿಸುತ್ತಿದ್ದರೆನ್ನಲಾದ ಪ್ರಾರ್ಥನೆಯೂ ಅಲ್ಲದ, ಪ್ರಾಯಶ್ಚಿತ್ತವೂ ಅಲ್ಲದ ''ವ್ರತಗಳು'' ಹಾಗೂ ''ಮಾಟ-ಮದ್ದುಗಳು'' ಎಂಬ ಕ್ರಿಯೆಗಳೇ ಮುಂದೆ ಸುಧಾರಣೆಗೊಂಡು ಶಿಷ್ಟವರ್ಗವಾದ ವೈದಿಕ ಜನರ ಕೈಗೆ ಸಿಕ್ಕು ಅವರ ಯಜ್ಞ-ಯಾಗಾದಿ ಕ್ರಿಯೆಗಳಲ್ಲಿ 'ಮಂತ್ರ'ಗಳೆಂಬ ರೂಪ ತಳೆದಿರಬಹುದೆಂದು ಪ್ರೊ॥ ಬಿ. ವಿ. ವೀ.ಯವರು ತರ್ಕಿಸಿದ್ದಾರೆ. ಇದಕ್ಕೆ ಅಬನೀಂದ್ರ ಟಾಗೂರ್ ಮುಂತಾದವರ ಅಭಿಪ್ರಾಯದ ಆಧಾರವನ್ನೂ ಕೊಟ್ಟಿದ್ದಾರೆ.

ನಮ್ಮ ದೇಶಕ್ಕೆ ವಾಯವ್ಯ ಮೂಲೆಗಳಾದ ಖೈಬರ್-ಬೋಲಾನ್ ಕಣಿವೆಗಳ ಮೂಲಕ ಪ್ರವೇಶಿಸಿ ತಮ್ಮ ಪಶು ಸಂಪತ್ತಿನ ಪಾಲನೆ-ಪೋಷಣೆಗಾಗಿ ವಿಶಾಲವಾದ ಹುಲ್ಲು ಮೈದಾನಗಳು, ನೀರು-ನೆರಳಿನ ವಸತಿಗಳನ್ನು ಅರಸುತ್ತಾ ಸಿಂಧೂ ಕಣಿವೆಯನ್ನು ದಾಟಿ ಪೂರ್ವ-ಪಶ್ಚಿಮವಾಗಿ (ಪಂಜಾಬ್‌ನಿಂದ ಬಂಗಾಳದವರೆಗೆ) ಪ್ರಸರಿಸಿಕೊಂಡ ''ಆರ್ಯ''ರೆಂಬ ವಲಸೆಗಾರ ಜನಾಂಗದವರು ನಮ್ಮ ನಾಡಿನ ನೆಲ-ಜಲಗಳನ್ನು ಆಕ್ರಮಿಸುವ ಪೂರ್ವದಲ್ಲಿಯೇ ಈ ದೇಶದಲ್ಲಿ ಉತ್ಕೃಷ್ಟವಾದ ನಾಗರಿಕತೆಯೊಂದು ನೆಲೆಸಿತ್ತು ಎಂಬುದು ಮೊಹೆಂಜದಾರೋ-ಹರಪ್ಪ ಮುಂತಾದ ಕಡೆ ನಡೆದಿರುವ ಉತ್ಖನನ ಅಧ್ಯಯನಗಳಿಂದ ಕಂಡುಬಂದಿದೆ. ಆದರೆ, ಆಗಮಿಸಿದ ಆರ್ಯರು ವೇದಸಂಸ್ಕೃತಿ ಅರ್ಥಾತ್ ಚಾತುರ್ವರ್ಣ್ಯ-ಚತುರಾಶ್ರಮ ಮತ್ತು ಹುಟ್ಟಿನ ಶ್ರೇಷ್ಠತೆಯ ಪರಂಪರೆಗೆ ತಾವೇ ಅಧ್ವರ್ಯುಗಳೆಂದು ಹೇಳುತ್ತಾ ಈ ನೆಲದ ಮೂಲ ನಿವಾಸಿಗಳನ್ನು ನಿಕೃಷ್ಟರೆಂದೂ ಅನಾಗರಿಕರೆಂದೂ ಹೀಯಾಳಿಸುತ್ತಾ ಬಂದರು. ಅನೇಕ ಬಾರಿ ಯುದ್ಧಗಳನ್ನು ಮಾಡಿ ಅವರನ್ನೇ ಸೆರೆಹಿಡಿದು ತಮ್ಮ ಸೇವಕರನ್ನಾಗಿ ದುಡಿಸಿಕೊಳ್ಳಹತ್ತಿದರು. ಅನಾರ್ಯರಾದ ಅವರನ್ನು ಶೂದ್ರರೆಂದು ಪರಿಗಣಿಸಿ ವರ್ಗ-ವರ್ಣಭೇದಕ್ಕೆ ಕಾರಣರಾದರು. ಇದಕ್ಕೆ ಭಗವಂತನ ಶಿರದಿಂದ ಜನಿಸಿದ ಬ್ರಾಹ್ಮಣರು, ಭುಜಗಳಿಂದ ಹುಟ್ಟಿದ ಕ್ಷತ್ರಿಯರು ಮತ್ತು ತೊಡೆಯಿಂದ ಹುಟ್ಟಿದ ವೈಶ್ಯರು ಶ್ರೇಷ್ಠರು ಮತ್ತು ಸ್ಪೃಶ್ಯರೆಂತಲೂ, ಭಗವಂತನ ಪಾದಗಳಲ್ಲಿ ಹುಟ್ಟಿದ ಶೂದ್ರರು ಕನಿಷ್ಠರೆಂತಲೂ ಅವರ್ಣೀಯರು ಮತ್ತು ಅಸ್ಪೃಶ್ಯರು ಎಂಬ ಧಾರ್ಮಿಕ ಕಲ್ಪನೆಯ ಮುದ್ರೆಯನ್ನೂ ಇದಕ್ಕೆ ಒತ್ತಲಾಯಿತು. ಮುಂದೆ ನಡೆದ ಆರ್ಯ-ಅನಾರ್ಯರ ಹೋರಾಟ ಮತ್ತು ಇಂದೂ ನಡೆದಿರುವ ಸಂಘರ್ಷ ಇದಕ್ಕೆ ನಿದರ್ಶನವಾಗಿದೆ. ಈ ಘಟನಾವಳಿಗಳ ಸಂಕ್ಷಿಪ್ತ ಸಿಂಹಾವಲೋಕನವೂ ಈ ಕೃತಿಯಲ್ಲಿದೆ.

ವೇದಕಾಲೀನ ಜನಪದರ ಸಮಗ್ರ ಚಿತ್ರಣದ ದಾಖಲೆ ಮಾಡುವುದಕ್ಕಾಗಿ ಈ ಗ್ರಂಥವನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಭಾಗ-೧ರಲ್ಲಿ ಅಂದಿನ ಜನಸಾಮಾನ್ಯರ ಕಸುಬುಗಳು, ವಿನೋದಗಳು, ಮೂಢ ನಂಬಿಕೆಗಳು ಮತ್ತು ಅನೈತಿಕ ವರ್ತನೆಗಳನ್ನು ಕುರಿತ ಸುದೀರ್ಘ ವಿವರಣೆಗಳನ್ನು ಋಗ್ವೇದಾದಿ ವೇದಗಳ ಶ್ಲೋಕಗಳ ಆಧಾರದಿಂದಲೇ ಲೇಖಕರು ವಿವರಿಸಿದ್ದಾರೆ. ಭಾಗ-೨ರಲ್ಲಿ ವೈದಿಕ ಋಷಿಗಳ ಲೌಕಿಕ ಬಯಕೆಗಳು,

**ಎ. ಜಿ. ವಿರೂಪಾಕ್ಷಪ್ಪ**

ಮಾನವ ದೇವರುಗಳು, ನಿತ್ಯೋಪಯೋಗಿ ದೇವರುಗಳು, ಮಹಿಳೆಯರ ಸ್ಥಿತಿ-ಗತಿಗಳು, ಪುರುಷಸೂಕ್ತ ಮತ್ತು ಶೂದ್ರರು, ವೇದಗಳಲ್ಲಿ ವಿಜ್ಞಾನ, ಎಂಬ ವಿಭಾಗಗಳಲ್ಲಿ ಅಭ್ಯಾಸಪೂರ್ಣವಾಗಿ ದಾಖಲಿಸಿದ್ದಾರೆ.

ವೈದಿಕ ಜನರು ಕೇವಲ ಪಾರಮಾರ್ಥಿಕ ಜೀವನದಲ್ಲೇ ತಲ್ಲೀನರಾದ ಪರಮ ಪುರುಷರೇನೂ ಆಗಿರಲಿಲ್ಲ. ಅವರೂ ತಮ್ಮ ಬುದ್ಧಿವಂತಿಕೆಯ ಜೊತೆಗೆ ಮಾನವ ಸಹಜ ದೌರ್ಬಲ್ಯಗಳ ದಾಸರೂ ಆಗಿದ್ದರೆಂಬತ್ತ ಗಮನ ಸೆಳೆದಿರುವ ಲೇಖಕರು ಅಂದಿನ ಸಮಾಜದಲ್ಲಿ ಪ್ರಚಲಿತವಿದ್ದ ಜೂಜುಗಾರಿಕೆ-ಸೂಳೆಗಾರಿಕೆಗಳಂತಹ ಅನಿಷ್ಟಗಳನ್ನು ವೇದ ಸಾಹಿತ್ಯದ ಆಧಾರದಿಂದಲೇ ಎತ್ತಿ ತೋರಿಸಿದ್ದಾರೆ. ಆಗಿನ ಕಾಲದ ಮೇಲು ಸ್ತರದವರೆನಿಸಿಕೊಂಡವರಲ್ಲೂ ಅನೈತಿಕರೂ, ಅಪ್ರಾಮಾಣಿಕರೂ ಇದ್ದರೆಂಬುದಕ್ಕೆ ಅನೇಕ ನಿದರ್ಶನಗಳನ್ನು ನೀಡಿದ್ದಾರೆ. ಇದಕ್ಕೆ ಋಗ್ವೇದದ ಅಕ್ಷಸೂತ್ರ ಮುಂತಾದ ಪ್ರಕರಣಗಳನ್ನು ಉದಾಹರಿಸಿದ್ದಾರೆ. ಅಥರ್ವವೇದದ ಕಾಲದಲ್ಲಿ ಅವಿವಾಹಿತ ಹದಿಹರೆಯದ ಹುಡುಗಿಯರು ಮಕ್ಕಳ ತಾಯಂದಿರಾದದ್ದು, ಅಕ್ರಮವಾಗಿ ಗರ್ಭವತಿಯರಾಗಿ ಭ್ರೂಣ ಹತ್ಯೆಯಂತಹ ಹೀನಕಾರ್ಯದಲ್ಲಿ ತೊಡಗಿದ್ದು, ಪ್ರಾಣಿವಧೆ, ಮಾಂಸಭಕ್ಷಣೆ, ಸುರಾಪಾನಗಳಲ್ಲಿ ತಲ್ಲೀನರಾಗಿದ್ದು ಇವೇ ಮುಂತಾದ ದೃಷ್ಟಾಂತಗಳನ್ನು ಪ್ರೊ॥ ಬಿ. ವಿ. ವೀ. ಎತ್ತಿ ತೋರಿಸಿದ್ದಾರೆ. ತನ್ಮೂಲಕ ಋಗ್ವೇದಾದಿಗಳು ಏನೆಲ್ಲಾ ವಿಷಯಗಳನ್ನು ಒಳಗೊಂಡಿದ್ದರೂ ನೀತಿಬೋಧೆಯ ಪಠ್ಯ ಪುಸ್ತಕಗಳಂತೂ ಖಂಡಿತ ಅಲ್ಲ ಎಂಬ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದಾರೆ.

ಈ ಗ್ರಂಥದ ಎರಡನೇ ಭಾಗದಲ್ಲಿ ವೇದಗಳನ್ನು ಬಲ್ಲ ಋಷಿ-ಮುನಿಗಳು ತಮ್ಮ ಐಹಿಕ ಅವಶ್ಯಕತೆಗಳಾದ ಮಳೆ-ಬೆಳೆ, ಪುತ್ರ ಸಂತಾನ, ಸಂಪತ್ ಸಮೃದ್ಧಿಗಳಿಗಾಗಿ ಇಂದ್ರ, ಅಗ್ನಿ, ವರುಣ ಮುಂತಾದ ದೇವತೆಗಳನ್ನು ಪ್ರಾರ್ಥಿಸುತ್ತಾ ಅವರ ಪ್ರೀತ್ಯರ್ಥ ಯಜ್ಞ-ಯಾಗಾದಿಗಳನ್ನು ಮಾಡುತ್ತಿದ್ದುದನ್ನು ವಿವರಿಸುತ್ತಾ ಅವಿದ್ಯಾವಂತರೂ ಅಪ್ರಬುದ್ಧರೂ ಆದ ಮೂಲ ನಿವಾಸಿಗಳಾದ ಬುಡಕಟ್ಟು ಜನಾಂಗದವರು ಅದೇ ಬೇಡಿಕೆಗಳಿಗಾಗಿ ಅನುಸರಿಸುತ್ತಿದ್ದ ವಿಧಾನಗಳನ್ನು ವಿವರಿಸಲಾಗಿದೆ. ಉದಾಹರಣೆಗೆ ತಮಗೆ ಮಳೆ ಬೇಕೆನಿಸಿದಾಗ ಕುಂಭವೊಂದರಲ್ಲಿ ನೀರನ್ನು ತುಂಬಿ, ಅದರ ಸುತ್ತ ಸ್ತ್ರೀ-ಪುರುಷರು ಕುಣಿಯುತ್ತಾ ಒಂದು ಮಡಕೆಯ ಬುಡಕ್ಕೆ ಒಂದು ರಂಧ್ರವನ್ನು ಒಡೆಯುತ್ತಿದ್ದರು. ಆಗ ಕುಂಭದಿಂದ ನೀರು ಸುರಿಯುತ್ತಿತ್ತು. ಮತ್ತು ಧಾರಾಕಾರವಾಗಿ ಮಳೆಯೂ ಬರುತ್ತಿತ್ತು. ಇನ್ನು ಕೆಲವು ಸಂದರ್ಭಗಳಲ್ಲಿ ತಮ್ಮ ಕಲ್ಪನೆಯ ದೇವ-ದೇವತೆಗಳನ್ನು (ಚೌಡಿ, ದುರ್ಗಿ, ಭೂತ... ಇತ್ಯಾದಿ) ಮುಂದಿಟ್ಟುಕೊಂಡು ಬಾಯಲ್ಲಿ ಏನೇನೋ ವಟಗುಟ್ಟುತ್ತಾ ''ನಿವಾಳಿ'' ತೆಗೆಯುತ್ತಿದ್ದರು. ಆಗ ರೋಗ-ರುಜಿನಗಳು ನಿವಾರಣೆಯಾಗುತ್ತಿದ್ದವು ಹಾಗೂ ತಮ್ಮ ಎದುರಾಳಿಗಳನ್ನು ಶಿಕ್ಷಿಸುವುದಕ್ಕಾಗಿ ''ಮಾಟ-ಮದ್ದು''ಗಳನ್ನು ಮಾಡುತ್ತಿದ್ದರು. ಇದಾವುದಕ್ಕೂ ನಿರ್ದಿಷ್ಟ ರೀತಿ-ನೀತಿಗಳಾಗಲಿ, ಶಿಷ್ಟ ಭಾಷೆಯಾಗಲಿ ಇರಲಿಲ್ಲ. ವೇದ ಬಲ್ಲ ಪಂಡಿತರ ಮಾತುಗಳು ''ಮಂತ್ರಗಳೋ'' ವಾಣಿಗಳೋ ಎನಿಸಿದರೆ ಸಾಮಾನ್ಯಜನರ ತೊದಲ್ನುಡಿಗಳು ಅಷ್ಟೇ ಪ್ರಭಾವ - ಪರಿಣಾಮ ನೀಡಿದರೂ ಅಸಂಬದ್ಧ (ಕೆಲವೊಮ್ಮೆ ಅಶ್ಲೀಲ) ಅನಿಸಿಕೊಳ್ಳುತ್ತಿದ್ದವು. ಅಂತೆಯೇ 'ಗಾದೆ'ಗಳು ವೇದಕ್ಕೆ ಸಮಾನ ಎಂಬ ಮಾತು ಈಗಲೂ ಪ್ರಚಲಿತವಿದೆ.

ಈ ಭಾಗದಲ್ಲಿ ವೇದಮೂರ್ತಿಗಳ ಮತ್ತು ಅವರ ದೇವಾನುದೇವತೆಗಳ ಲೌಕಿಕ ಬಯಕೆಗಳನ್ನೂ, ಅವರ ಶಕ್ತಿ-ಸಾಮರ್ಥ್ಯದ ಜೊತೆಗೆ ದೌರ್ಬಲ್ಯಗಳನ್ನೂ, ಆಗಿನ ಕಾಲದ ಮಹಿಳೆಯರ ಮತ್ತು ಶೂದ್ರವರ್ಗದ ಸ್ಥಿತಿಗತಿಗಳನ್ನೂ ಅರ್ಥಪೂರ್ಣವಾಗಿ ವಿವರಿಸಿದ್ದಾರೆ. ಕೊನೆಯದಾದ 'ಸಮಾರೋಪ' ಎಂಬ ಅಧ್ಯಾಯದಲ್ಲಿ ಸಹಸ್ರಾರು ವರ್ಷಗಳ ಹಿಂದಿನ ಕಾಲದ ಶಿಷ್ಟರೂ-ಅಶಿಷ್ಟರೂ ಸೇರಿದ ಜಾನಪದರ ಇತಿಹಾಸವನ್ನು ವಿಮರ್ಶಿಸುವಲ್ಲಿ ತಾವು ಎದುರಿಸಬೇಕಾಗಿ ಬಂದ ಸಮಸ್ಯೆಗಳ ಬಗ್ಗೆ ಹೇಳಿರುವ ಬಿ.ವಿ.ವೀ. ಯವರು ಪೂರ್ವಗ್ರಹಿಕೆಯಿಂದ ಮುಕ್ತರಾಗದೆ ಇತಿಹಾಸದ ಸ್ವಚ್ಛ ಗ್ರಹಿಕೆ ಅಸಾಧ್ಯ ಎಂದಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ವೈದಿಕ ಸಾಹಿತ್ಯದ ನಿಷ್ಠಾವಂತ ಅಭಿಮಾನಿಗಳು, ಆ ಬಗ್ಗೆ ಒಂದು ತೆರನಾದ ''ಅಲರ್ಜಿ'' ಹೊಂದಿರುವವರು, ಈ ಎರಡೂ ವರ್ಗದ ಜನ ಅಗತ್ಯವಾಗಿ ಓದಬೇಕಾದ ಕೃತಿ ಇದಾಗಿದೆ.

ಎ. ಜಿ. ವಿರೂಪಾಕ್ಷಪ್ಪ
೯೧, 'ಎ' ವಿಭಾಗ, ೨ನೇ ಅಡ್ಡರಸ್ತೆ
ದೇವರಾಜ ಅರಸ್ ಬಡಾವಣೆ, ದಾವಣಗೆರೆ-೫೭೭೦೦೬.

# ಅಮ್ಮನ ಬದುಕೇ ಚಂದ

ಬದುಕ ಬಯಲಿಗೆ ಬಂದು ಕಣ್ಬಿಟ್ಟಾಗ
ಕಂಡದ್ದು, ಉರಿವ ಒಲೆ ಮುಂದೆ
ಕೂತು ಬೇಯುತ್ತಿದ್ದ ಅಮ್ಮ.

ಹೆತ್ತು ಹೆತ್ತು ಬೇಸತ್ತ ಅಮ್ಮನಿಗೆ
ಹಿರಿ ಮಕ್ಕಳಿಂದಲೇ ಬಾಣಂತಿಯಾರೈಕೆ.

ಸಂಜೆಗತ್ತಲಲ್ಲಿ ಮೈಲು ದೂರದಿಂದಲೇ
ಭೂಮಿ ನಡುಗುತ್ತಿತ್ತು.
ತಂಗಾಳಿ ಹೇಳುತ್ತಿತ್ತು , ಅಪ್ಪನಾಗಮನವನ್ನು
ಗುಡುಗು, ಮಿಂಚು, ಮಳೆ.

ಮನೆಗೆ ಬರುತ್ತಿದ್ದಂತೆ ಹುಲಿಯಾಗುತ್ತಿದ್ದ
ಅಪ್ಪನಿಗೆ, ಮೊದಲ ಆಹಾರ ಅಮ್ಮ.
ಮುಗ್ಧತೆಯ ಸಾಕಾರಮೂರ್ತಿ.
ಅನಕ್ಷರ ಕಿಡಿಯಿಂದಲೇ ಸಾಕ್ಷರ ಜ್ಯೋತಿ
ಬೆಳಗಿದಾಕೆ.

ಒಂದೇ ಕೈಯಿಂದ ಆಗದ ಚಪ್ಪಾಳೆ
ಒಳಗೊಳಗೆ ಕುಸಿದು ಪಾತಾಳ ಕಂಡಿದ್ದ
ಆಕೆಯ ಕಣ್ಣುಗಳೇ ಹೇಳುತ್ತಿತ್ತು ಆ ಕತೆ.

ಹತ್ತು ಬಟ್ಟಲ ಸುತ್ತ ಕೂತ ಕರುಳಿಗೆ
ಪಾಲು ಪಾಲು ಬಡಿಸುವಾಗ ಖಾಲಿ ಪಾತ್ರೆ ಅವಳಿಗೆ.
ಕರುಳ ಬಳ್ಳಿ ತಿಂದು ತೇಗುವಾಗ ಅವಳ
ಹೊಟ್ಟೆ ತಣ್ಣಗೆ.

ಬೆಳೆಯುತ್ತಾ ಬಂದಂತೆ ನಿಚ್ಚಳವಾದ ದೃಷ್ಟಿಗೆ
ಅರಿವಾದದ್ದು ಜಂಜಾಟದ ಜಗತ್ತು.
ಚಿನ್ನಿದಾಂಡು ಹಿಡಿದು ಆಡುತ್ತಾಡುತ್ತಾ
ಹರೆಯದ ಜಾದೂ ಜಗತ್ತಿಗೆ ಬಂದಾಗ
ಎಲ್ಲ ಗೊಂದಲ.

ಚಂಡಿನೆಸೆತಕ್ಕೆ ಛಿದ್ರಗೊಂಡ
ಲಗೋರಿ ಬಿಲ್ಲೆಗಳಂತೆ,
ಯಾರದೋ ತೀರ್ಪಿಗೆ ತಲೆಬಾಗಿ




ಕತ್ತೆತ್ತುವಾಗ ಕಂಡದ್ದು ಬರೇ ವಿಷಾನಿಲದ
ಗೋಲ. ಆದರೊಳಗೇ,
ಉಸಿರುಕಟ್ಟಿ ನಿಂತವಳಿಗೆ ಈಗ ಅನ್ನಿಸುತ್ತದೆ
ಅಮ್ಮನ ಬದುಕೇ ಚಂದ.

ಹೇಮಾವತಿ ವೆಂಕಟ್
ಸುಳ್ಯ ಅಂಚೆ, ದ. ಕ. ಜಿಲ್ಲೆ - ೫೭೪೨೩೯

# ಚಿತ್ರಕಲೆ ಮತ್ತು ರಸಾನುಭವ



ಒಂದು ಸೃಜನಶೀಲ ಕ್ರಿಯೆಯನ್ನು, ಅದರ ರಸಾನುಭವವನ್ನು ಪಡೆಯುವ, ಗ್ರಹಿಸಿಕೊಳ್ಳುವ ವಿಚಾರದಲ್ಲಿ ಹಲವು ವಾದಗಳುಂಟು. ಕಲೆ, ಸಾಹಿತ್ಯ, ನೃತ್ಯ, ನಾಟಕಗಳ ಅಭಿವ್ಯಕ್ತಿಯನ್ನು ಒಬ್ಬ ರಸಿಕ ಯಾವ ತೆರನಾಗಿ ಸ್ವೀಕರಿಸುತ್ತಾನೆ ಎನ್ನುವ ಆಲೋಚನೆಯು ಚರ್ಚೆಗೆ ಈಡಾಗುವುದಿದೆ. ಇವುಗಳ ಮತ್ತು ನೋಡುಗನ ಮಧ್ಯೆ ಜರುಗುವ ಸಂವಹನ ಕುರಿತು ಚಿಂತನೆ ನಿರಂತರ ನಡೆದಿದೆ.

ಲಲಿತಕಲೆಯಲ್ಲಿ ಅತ್ಯಂತ ಜನಪ್ರಿಯ ಪ್ರಕಾರ ಚಿತ್ರಕಲೆ. ಇದು ಇವತ್ತಿನ ಆದ್ಯತೆಯಾಗಿ ವ್ಯಾಪಕವಾಗಿ ಬೆಳೆಯುತ್ತಿದೆ. ಮಹಾನಗರಗಳಲ್ಲಿ ಚಿತ್ರಕಲೆಯ ಕೃತಿಗಳನ್ನು ನೋಡುವವರ ಸಂಖ್ಯೆಯೂ ಬೆಳೆದಂತೆ ಕೊಳ್ಳುಗರ ಸಂಖ್ಯೆಯೂ ವೃದ್ಧಿಸುತ್ತಿದೆ. ಪ್ರದರ್ಶನ ಏರ್ಪಡಿಸುವಲ್ಲಿ ಇಂದು ಖಾಸಗಿ ಕಲಾ ಗ್ಯಾಲರಿಗಳು ಪೈಪೋಟಿಯಿಂದ ತಲೆಯೆತ್ತಿ ನಿಂತಿವೆ. ವಿವಿಧ ಮಾಧ್ಯಮಗಳಲ್ಲಿ ಕಲಾಪ್ರತಿಭೆಗಳು ಬೆಳಗುತ್ತಿವೆ. ಆಧುನಿಕೋತ್ತರದ ಹಲವಾರು ಸ್ಪರ್ಧಾತ್ಮಕ ನೆಲೆಗಳಲ್ಲಿ ಇವತ್ತು ಕಲೆ ಮಾರಾಟದ ಸರಕಾಗಿದ್ದರೂ ಅದು ನೀಡುವ ರಸಗ್ರಹಣ, ಆ ಬಣ್ಣಗಳ ಒಳಸೇರಿ ನೋಡುಗ ಮೈಮರೆಯುವ ಕ್ಷಣವೂ ಅಷ್ಟೇ ಮಹತ್ವದ್ದು ಮತ್ತು ಮೌಲಿಕತೆಯದೂ ಸಹ. ಸಂಗೀತದ ನಾದದ ಗುಂಗಿನಲ್ಲೋ, ಸಾಹಿತ್ಯದ ವಿಚಾರದಲ್ಲೋ ಮುಳುಗಿ ಆನಂದಪಟ್ಟಂತೆ ಕಲಾರಸಾನುಭವ ಕೊಡುವ ಮುದ, ಸಂತೋಷ ಅಷ್ಟಿಷ್ಟಲ್ಲ. ಅದು ಬಹುರೂಪಿ ನೆಲೆಗಳದ್ದು.

ಹಾಗಾದರೆ ಕಲೆಯನ್ನು ಅರಿತುಕೊಳ್ಳುವುದಾದರೂ ಹೇಗೆ, ಎಂಬ ಪ್ರಶ್ನೆ ಮೊದಲು ಎದುರಾಗುತ್ತದೆ. ಕಲೆಯ ಕುರಿತು ನಮ್ಮಲ್ಲಿ ಸಾಕಷ್ಟು ಸಿದ್ಧಾಂತಗಳು, ಶೈಲಿ, ತಂತ್ರಗಳು ಮತ್ತು ಪ್ರಕಾರಗಳಿರುವುದರಿಂದ ಸಂವಹನದ ಸಾಧ್ಯತೆಗಳು ಕಾಡುತ್ತವೆ. ಇಲ್ಲಿ ಉದಾಹರಣೆಗೆ ಒಂದು ಮೂರ್ತ ಸ್ವರೂಪದ ಕೃತಿ, ಇನ್ನೊಂದು ಅಮೂರ್ತಕೃತಿಯನ್ನು ನನ್ನ ವಿಚಾರಕ್ಕೆ ತೆಗೆದುಕೊಳ್ಳುತ್ತೇನೆ. ಮೂರ್ತದಲ್ಲಿ ಒಂದು ವಾಸ್ತವ ಕೃತಿ. ಇದು ಒಬ್ಬ ಸಾಮಾನ್ಯ ಪ್ರೇಕ್ಷಕನಿಂದ ಒಬ್ಬ ಕಲಾವಿಮರ್ಶಕನ ತನಕ ನೇರವಾದ ಸಂವಹನಕ್ಕೆ ಒಳಗಾಗುತ್ತದೆ. ಒಬ್ಬ ಸಾಮಾನ್ಯ ನೋಡುಗ ಅದರೊಳಗಿನ ಬಣ್ಣದ ಬೆಡಗನ್ನೋ, ವಿವಿಧ ಆಕೃತಿಗಳನ್ನೋ ನೋಡಿ ಕಲಾವಿಸ್ತಾರದ ರೂಪಗಳನ್ನು ಯಾವ ಅಡಚಣೆಯಿಲ್ಲದೆ ಗ್ರಹಿಸುತ್ತಾನೆ. ಬಣ್ಣಗಳು, ರೇಖೆಗಳು ಬಳಕೆಯ ವಿನ್ಯಾಸದ ಮೂಲಕ ಆನಂದವನ್ನು ಸ್ಫುರಿಸುತ್ತವೆ. ಆ ರಸಾನುಭವವನ್ನು ಯಥೇಚ್ಛವಾಗಿ ನೋಡುಗ ಅನುಭವಿಸಿ ಆ ಮೂಲಕ ಸಂತಸವನ್ನು ಮೆಲುಕುಹಾಕುತ್ತಾನೆ.

ಆದರೆ ವಿಮರ್ಶಕನಾದವ ಆತನ ಬುದ್ಧಿಯ ಮೂಲಕ ಆ ಕೃತಿಯ ಮೌಲಿಕತೆಯನ್ನು ಅಳೆಯುತ್ತಾನೆ. ಒಬ್ಬ ಕಲಾಚಿಂತಕ, ವಿಮರ್ಶಕ ನೋಡುವ ದೃಷ್ಟಿ ಸಾಮಾನ್ಯನಿಗಿಂತಲೂ ಸಾಕಷ್ಟು ಭಿನ್ನವಾದುದು ಹಾಗೂ ಅಧ್ಯಯನಪೂರ್ಣವಾದುದು. ವಾಸ್ತವರೂಪದ ಆ ಕೃತಿಯನ್ನು ಚಿಂತಕ ಸೂಕ್ಷ್ಮಜ್ಞತೆಯಿಂದ ಅರಿಯಲು ಯತ್ನಿಸುತ್ತಾನೆ. ಆ ಅರಿಕೆಯ ಹಂತಗಳು ಹೀಗಿರುತ್ತವೆ: ಕಲಾಕೃತಿಯ ಆಶಯ, ಬಣ್ಣಗಳ ಬಳಕೆಯ ಕ್ರಮ, ಪ್ರಯೋಗ ಗುಣಗಳು ಎಂಥವು? ಪ್ರಯೋಗಕ್ಕೆ ಕುಂಚ ಹಾಗೂ ಇತರೆ ಸಾಧನಗಳು, ಆ ಮೂಲಕ ಕಲಾವಿದನ ಪ್ರತಿಭಾಶಕ್ತಿಯ ಸಾಮರ್ಥ್ಯ ಎಷ್ಟರಮಟ್ಟಿಗೆ ಆ ಕೃತಿಯನ್ನು ಒಳಗೊಂಡಿದೆ? ಹೀಗೆ ಹಲವಾರು ನಿಟ್ಟಿನಲ್ಲಿ ಒಂದು ಚಿತ್ರಕಲಾ ಕೃತಿಯನ್ನು ಗುರುತಿಸುತ್ತಾ ಅದರದೇ ಕಲಾಪರಂಪರೆಯ ಹಿನ್ನೆಲೆಯಲ್ಲಿ ವೀಕ್ಷಿಸುತ್ತಾನೆ. ಇದು ಕೇವಲ ಒಬ್ಬ ಕಲಾಚಿಂತಕ, ಸಮೀಕ್ಷಕನಿಗೆ ಮಾತ್ರ ಸೀಮಿತ ಎಂದು ಭಾವಿಸಬಾರದು. ಕಲೆಯನ್ನು ತಿಳಿದುಕೊಳ್ಳಲು ಮನಸ್ಸುಮಾಡುವ, ಆಸ್ವಾದ ಗುಣ ಹೊಂದಿದ, ಪ್ರತಿಯೊಬ್ಬ ನೋಡುಗನೂ ಅರಿಯುವ ಸಾಧ್ಯತೆಯನ್ನು ಪಡೆಯಬಹುದು.

ವಾಸ್ತವ ಶೈಲಿಯ ಈ ಬಗೆಯ ಕಲಾಕೃತಿಗಳು ನೇರ ರೂಪ ಸೌಂದರ್ಯ ಪಡೆದಿದ್ದರೂ ಕಲಾತ್ಮಕತೆ, ಹೊಸ ಹೊಳಹುಗಳನ್ನು ತನ್ನ ಮೈವಳಿಕೆಯಲ್ಲಿ ಬಚ್ಚಿಟ್ಟುಕೊಂಡಿರುತ್ತವೆ. ಹೊಸತನ, ಆಯಾ ಕಲಾವಿದನ ತಂತ್ರಕೌಶಲ್ಯ, ಶೈಲಿ ಮತ್ತು ಬಣ್ಣಗಳ ತಮ್ಮದೇ ಪ್ಯಾಲೆಟ್ಟನ್ನು ಗುರುತಿಸಬೇಕಾಗುತ್ತದೆ. ತಮ್ಮ ಅನನ್ಯತೆಯನ್ನು ಕಲಾವಿದರು ಕಲಾಕೃತಿಗಳಲ್ಲಿ ಬಿಟ್ಟಿರುತ್ತಾರೆ. ನೂರಾರು ತರಹದ ಕಲಾವಿದರು ನೂರಾರು ತಮ್ಮವೇ ಆದ ಸೃಜನಶೀಲ ಸಾಧ್ಯತೆಗಳನ್ನು ಹೊಂದಿರುತ್ತಾರೆಯೇ ಹೊರತು ಒಬ್ಬರಂತೆ ಇನ್ನೊಬ್ಬರ ಕೃತಿಗಳಿರುವುದು ಸಾಧ್ಯವಿಲ್ಲ. ಒಟ್ಟು ಇವೆಲ್ಲವನ್ನು ಬಗೆದು ನೋಡುವ ಬುದ್ಧಿಮತ್ತೆಯನ್ನು ಮಾತ್ರ ಬೆಳೆಸಿಕೊಳ್ಳಬೇಕು. ಕಲಾವಿದ ಕ್ಯಾನ್‌ವಾಸಿನಲ್ಲಿ ಇಟ್ಟಿದ್ದನ್ನು ಕಲಾಪ್ರೇಮಿ ದೋಚಿಕೊಳ್ಳುವುದನ್ನು ಮಾಡಬೇಕಾಗುತ್ತದೆ.

ಒಬ್ಬ ಕಲಾವಿದ ತನ್ನ ಅನನ್ಯತೆಯನ್ನು ಸಿದ್ಧ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ಮೂರ್ತವಾಗಿರಲಿ, ಅಮೂರ್ತವಾಗಿರಲಿ 'ಸಿಗ್ನೇಚರ್' ಇಲ್ಲದೆಯೂ ಇದು ಇಂಥದೇ ಕಲಾವಿದನ ಚಿತ್ರಕೃತಿಯೆಂದು ಗುರುತಿಸಬಹುದು. ಮೂರ್ತದ ವಾಸ್ತವತೆಯಲ್ಲೂ ಕಲಾವಿದ ತನ್ನ ಸೃಜನಶೀಲಗುಣದಿಂದ ಒಂದು ನವೀನತಮ ವಿಶ್ವವನ್ನು ನಮ್ಮೆದುರು ಇಡುತ್ತಾನೆ. ತನ್ನ ವಿಶಿಷ್ಟ ರೂಪಕತೆಗಳಿಂದ ಸೆಳೆಯುತ್ತಾನೆ. ನಿಸರ್ಗ ಚಿತ್ರಗಳಾಗಿರಲಿ, ಮಾನವ ಸಂಸ್ಕೃತಿಯ ವಿವಿಧ ರೂಪದ ದೃಶ್ಯಗಳಾಗಿರಲಿ ಅದರೊಳಗೆ ಒಂದು ಸಿದ್ಧಾಂತ, ತತ್ವಗಳನ್ನು ಸಾದರಪಡಿಸುವುದರ ಜೊತೆಗೆ ತನ್ನ ಅಭಿವ್ಯಕ್ತಿಯ ಛಾಪನ್ನು ಒಡಮೂಡಿಸಿರುತ್ತಾನೆ. ಇವೆಲ್ಲವುಗಳನ್ನು ತಿಳಿಯುವುದರ ಸಹಜ ಜ್ಞಾನ ಮಾನವರಲ್ಲಿ ಇದೆಯೆಂದು ಭಾವಿಸಿದ್ದೇನೆ.

ಕಲಾಕೃತಿಗಳನ್ನು ನೋಡುವ ಸಂದರ್ಭದಲ್ಲಿ ತಲೆಬರಹಗಳು ಕೃತಿಗ್ರಹಿಕೆಗೆ ಸಹಾಯಕವಾಗುತ್ತವೆ. ಅದರ ನೆಲೆಯಲ್ಲಿಯೇ ಕೃತಿಯ ಒಳನೋಟಗಳನ್ನು ನೋಡುಗ ಪಡೆಯುತ್ತಾನೆ. ಸಂಕೇತ, ಪ್ರತಿಮೆಗಳು, ಹಿನ್ನೆಲೆ ಆವರಣದಲ್ಲಿರುವ ವರ್ಣಗಳ ಪ್ರಯೋಗ ಮತ್ತು ಅದರ ಹಿಂದಿನ ಗುಣಾತ್ಮಕತೆಯನ್ನು ಅರಿಯಲು ನೋಡುಗ ಯತ್ನಿಸುತ್ತಾನೆ. ಕುಂಚಗಳ ರಭಸ, ನಿಧಾನತೆಯ ಗುಣಗಳ ಪ್ರಯೋಗ ನೋಡುಗನಿಗೆ ಖುಷಿ ಕೊಡುತ್ತದೆ.

ವಾಸ್ತವ ಪ್ರಕಾರದ ಕೃತಿಯ ಗ್ರಹಿಕೆ ಒಂದು ನೇರ ಸೆಳೆತದ ಅಭಿವ್ಯಕ್ತಿಯ ಸಾಧ್ಯತೆಯಾದರೆ ಅಮೂರ್ತರೂಪದ್ದು ತೀರ ಭಿನ್ನ. ಇಲ್ಲಿ ಹಲವು ತೊಡಕುಗಳನ್ನು ದಾಟಿ ಮುಂದೆ ಸಾಗಬೇಕು. ಅಮೂರ್ತಶೈಲಿಯ ಕೃತಿಗಳನ್ನು ಒಟ್ಟಾರೆ ಹಿನ್ನೆಲೆಯಲ್ಲಿ ಗಮನಿಸಿದಾಗ ಹೆಚ್ಚೆಚ್ಚು ಗಂಭೀರವೂ, ವಿಚಾರಪೂರ್ಣವೂ ಆದ ಅಭಿವ್ಯಕ್ತಿಗಳಾಗಿರುತ್ತವೆ. ಇಲ್ಲಿ ಕಲಾವಿದನ ಸೂಕ್ಷ್ಮ ಅನುಭವಗಳು, ಸಂವೇದನೆಗಳು ತೆರೆದುಕೊಳ್ಳುತ್ತವೆ. ಅವುಗಳನ್ನು ನಮ್ಮ ಆಲೋಚನೆಯ ತೆಕ್ಕೆಗೆ ತೆಗೆದುಕೊಳ್ಳಲು ತುಸು ಹೆಣಗಾಡಬೇಕಾಗುತ್ತದೆ. ಅಮೂರ್ತ ಕೃತಿಗಳು ಒಂದೇ ನೆಗೆತಕ್ಕೆ ನಮ್ಮವು ಆಗುವುದಿಲ್ಲ. ಅದರ ಜೊತೆ ಗೆಳೆತನ ಬೆಳೆಸಬೇಕು. ಒಬ್ಬ ವ್ಯಕ್ತಿಯ ಪರಿಚಯವಾಗುತ್ತದೆ. ಆ ಬಳಿಕ ಆತ ನಿಧಾನಕ್ಕೆ ಹತ್ತಿರದವನಾಗುತ್ತಾನೆ. ಒಮ್ಮೊಮ್ಮೆ ತುಂಬಾ ಆಪ್ತನೂ ಎನಿಸುತ್ತಾನೆ. ಇಲ್ಲವೇ ದೂರವಾಗಲೂಬಹುದು. ಹಾಗೆ ಒಂದು ಅಮೂರ್ತ ಕೃತಿಯ ಜೊತೆಗೆ ಪರಿಚಯ ಮಾಡಿಕೊಳ್ಳುತ್ತಾ, ಆನಂತರ ಸಾವಕಾಶ ಅದನ್ನು ಸ್ವೀಕರಿಸಬೇಕು. ಅದರ ಗುಣ, ಸ್ವಭಾವಗಳನ್ನು ತಿಳಿಯುವುದರ ಮೂಲಕ ಅದರ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಗುರುತಿಸಬೇಕು.

ಇಲ್ಲಿ ಕಲಾವಿದನ ಅಭಿವ್ಯಕ್ತಿ ಶ್ರೇಷ್ಠ ಗುಣಮಟ್ಟದಲ್ಲಿದ್ದಾಗ ಅದು ಒಂದೇ ಅಭಿವ್ಯಕ್ತಿಯನ್ನು ಇಟ್ಟುಕೊಳ್ಳುವುದಿಲ್ಲ. ಆ ಕೃತಿ ತನ್ನ ಶಕ್ತಿಯನ್ನು ಮೀರಿ ನಿಲ್ಲುತ್ತದೆ. ವಿಚಾರಗಳ ಹರವು, ವ್ಯಾಪ್ತಿ ವಿಸ್ತಾರಗೊಳ್ಳುತ್ತದೆ. ಕಲಾವಿದನ ನೇರ ಅಭಿವ್ಯಕ್ತಿ ಅಥವಾ ಮೂಲ ಧೋರಣೆ ಇಲ್ಲಿ ಅನೇಕ ಧೋರಣೆಗಳ ಮೊಳಕೆಗಳಾಗಿ ಬೆಳೆದು ನಿಲ್ಲುತ್ತವೆ. ಅದರಂತೆ ಕೃತಿ ತನ್ನ ಬಗ್ಗೆ ನೋಡುಗ ಸಂಭಾಷಣೆಗೆ ಇಳಿಯುವಂತೆ ಮಾಡುತ್ತದೆ. ಅದರ ಒಳಸುಳಿಗಳಲ್ಲಿ ತೇಲುತ್ತ ಸಾಗುವ ನೋಡುಗ ರಸಾಸ್ವಾದದ ಆನಂದದಲ್ಲಿ ತೇಲುತ್ತಾ ತೇಲುತ್ತಾ ಆ ಕಲಾಕೃತಿಯ ನಿಜ ವಿಮರ್ಶಕನಾಗಿ ಬೆಳೆಯುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

ಅಮೂರ್ತ ಕೃತಿಗಳಿಗೆ ಒಮ್ಮೊಮ್ಮೆ ತಲೆಬರಹಗಳಿರುವುದಿಲ್ಲ. ಮೂರ್ತ ಸ್ವರೂಪ ಕೃತಿಗಳಿಗೂ ಇರುವುದಿಲ್ಲ. ತಲೆಬರಹಗಳಿದ್ದರೆ ಕಲಾಕೃತಿಗೆ ಒಂದು ಸೀಮಿತ ಚೌಕಟ್ಟು ಹಾಕಿದಂತಾಗುತ್ತದೆ. ಅದಕ್ಕೆ ಅದಾಗಬಾರದೆಂದು ಶೀರ್ಷಿಕೆ ರಹಿತ ಕೃತಿಗಳಿರುತ್ತವೆ. ಅವು ಆ ಚೌಕಟ್ಟನ್ನು ಮೀರಿ ತಮ್ಮ ದರ್ಶನವನ್ನು ಪ್ರಕಟಿಸುತ್ತವೆ.

ಚಿತ್ರಕೃತಿ ಬಣ್ಣಗಳ ಮೂಲಕ ಸೆಳೆದು ಕಲಾವಿದನು ಕುಂಚದಿಂದ ಕೈಯಾಡಿಸುವುದರ ಮೂಲಕ ಅಭಿವ್ಯಕ್ತಿಯ ಪ್ರಯೋಗತನಗಳನ್ನು ಹೇಳುತ್ತಾನೆ. ಹೊಡೆತಗಳ ಮುಖಾಂತರ ಆಕೃತಿಗಳ ಕಲ್ಪನೆಗಳನ್ನು ಒಡಮೂಡಿಸುತ್ತಾ ತನ್ನ ಆಶಯದತ್ತ ಸಾಗಿ ಕಲಾವಿದ ಅದನ್ನು ಕ್ರಿಯೆಗೆ ತಂದುಕೊಳ್ಳುತ್ತಾನೆ. ಸೃಜನಶೀಲ ಕಲಾಕೃತಿ ವಸ್ತು, ತಂತ್ರಗಳ ವಿಷಯದಲ್ಲಿ ಹಲವು ಪ್ರಯೋಗ ಮಾಧ್ಯಮಗಳನ್ನು ಹೊಂದಿದೆ. ಮಿಶ್ರ ಮಾಧ್ಯಮ, ತೈಲ, ಅಕ್ರಲಿಕ್, ಕೊಲಾಜ್‌ಗಳ ಒಟ್ಟಿಗೆ ಹಲವಾರು ಮಾಧ್ಯಮಗಳ ಬಳಕೆಯಿದೆ. ರೇಖೆಗಳ ವಿನ್ಯಾಸ, ಬಣ್ಣಗಳ ಬಳುಕಾಟ – ಕುಲುಕಾಟವು ವಿಶಿಷ್ಟ ಸಂವೇದನೆಯ ಕೃತಿಯನ್ನು ಕೊಡುವ ಮೂಲಕ ಅಭಿವ್ಯಕ್ತಿ ಪಡೆಯುತ್ತದೆ.

ವಸ್ತು, ಪ್ರತಿಮೆ, ಸಂಕೇತ ಬಳಕೆಗಳ ವಿಧಾನ, ಅದರ ಕಲ್ಪನೆ, ಆಂತರಿಕ ಮತ್ತು ಬಾಹ್ಯಸೃಷ್ಟಿಯ ಸುಂದರತೆ, ಒಂದು ತತ್ವ ಅಥವಾ ಸಿದ್ಧಾಂತದ ದೃಷ್ಟಿ – ಈ ರೀತಿ ಕೃತಿಯ ವಿಷಯಗಳನ್ನು ಒಂದೊಂದಾಗಿ ಬಿಡಿಸುತ್ತ, ಬಗೆಯುತ್ತ ಸಾಗಿದಾಗ ನೋಡುಗನ ಸಂವಹನ ನಿಜ ಅರ್ಥದಲ್ಲಿ ಒಡಮೂಡುತ್ತದೆ. ಅಲ್ಲಿ ಕೃತಿಯ ಉದ್ದಿಷ್ಟವೂ ಸ್ಪಷ್ಟಗೊಳ್ಳುತ್ತದೆ. ಕಲಾವಿದನ ಹೊಣೆಗಾರಿಕೆ ಒಂದು ಅರ್ಥವಂತಿಕೆಯನ್ನು ಪಡೆಯುತ್ತದೆ.

*ಕೃಪೆ : ಆಕಾಶವಾಣಿ, ಧಾರವಾಡ.*

ಡಿ. ಎಸ್. ಚೌಗಲೆ

'ಗುರುರಾಜ ನಿವಾಸ', ಸೆಕ್ಟರ್ ೮, ಪ್ಲಾಟ್ ೧೭೨೧, ಸತ್ಯಮಾರ್ಗ, ಆಂಜನೇಯನಗರ, ಬೆಳಗಾವಿ-೫೯೦೦೧೬

# ನಿಮ್ಮ ತಾರುಣ್ಯದ ರಹಸ್ಯ!




ಎಲ್ಲಾ ಹೊಸ ಸಂತೂರಿನಲ್ಲಿ ಶ್ರೀಗಂಧ ಮತ್ತು ಹರಿಶಿನದ ಸಾರ ಅಡಗಿದೆ. ಈಗ ಸಮೃದ್ಧ ನೊರೆ ಮತ್ತು ಸದಾ ಸುಳಿದಾಡುವ ಸುಗಂಧದೊಡನೆ ದೊಡ್ಡದಾದ, ಉತ್ತಮ ಆಕಾರದೊಡನೆ, ಬಹುಕಾಲ ಬಾಳಿಕೆ ಬರುವ,

ಸಂತೂರ್

FCB•ULKA-42723

HOSATHU Kannada Monthly / May 2002 Rs. 10
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna